ಎಂದಿರುವರು. ದಾಸರಿಗಳ ಕುರಿತ ಈ ಮಾಹಿತಿಯಲ್ಲಿ ಎಚ್ ಎ ಸ್ಟುವರ್ಟ್, ಡಬ್ಲ್ಯು ಫ್ರಾನ್ಸಿಸ್, ಎಸ್ ಎಂ ನಟೇಶ್‌ಶಾಸ್ತ್ರಿ ಇವರುಗಳ ಮತ್ತು ಮೈಸೂರು, ತಂಜಾವೂರು, ದಕ್ಷಿಣ ಅರ್ಕಾಟ್ ಜಿಲ್ಲೆ ಇವುಗಳ ಸರ್ವೇ ಹಾಗೂ ಕೈಪಿಡಿಗಳಲ್ಲಿನ ಬರಹಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ.

ಥರ್ಸ್ಟನ್ ಅವರ ಈ ಬರಹದ ಸಂಗ್ರಹ ಸಾರ ಹೀಗಿದೆ: "ಸ್ಟುವರ್ಟ್ ಎಂಬ ವಿದ್ವಾಂಸ, ದಾಸರು ಸಿರಿವಂತ ಶೂದ್ರನ ಖ್ಯಾತ ವಂಶಜರು. ಅವನಿಗೆ ಮಕ್ಕಳಿಲ್ಲದ್ದರಿಂದ ತನಗೆ ಮಕ್ಕಳಾದರೆ ಅವರಲ್ಲಿ ಒಬ್ಬನನ್ನು ದೇವರ ಸೇವೆಗೆ ಅರ್ಪಿಸುವೆನೆಂದು ಬೇಡಿಕೊಂಡ. ಅನಂತರದಲ್ಲಿ ತನಗೆ ಹುಟ್ಟಿದ ಹಲವು ಮಕ್ಕಳಲ್ಲಿ ಒಬ್ಬನನ್ನು 'ದಾಸನು' (ಸೇವಕ) ಎಂದು ಹೆಸರಿಟ್ಟು ದೇವರ ಸೇವೆಗೆ ಒಪ್ಪಿಸಿದನು. ಅಂದಿನಿಂದ ದಾಸನು ತನ್ನ ತಂದೆಯ ಆಸ್ತಿಯಲ್ಲಿ ತನ್ನ ಪಾಲನ್ನು ತಳೆದುಕೊಂಡನಲ್ಲದೆ, ಆತನ ಮಕ್ಕಳೂ ಆ ಹಕ್ಕಿಗೆ ಎರವಾಗಿ ಭಿಕ್ಷುಕರಾದರು. ಅವರೇ ದಾಸರೆಂದೆನಿಸಿದರು ಎಂದು ಅಭಿಪ್ರಾಯ ಪಟ್ಟಿರುವರು. ಎಂ ಡಬ್ಲ್ಯು ಫ್ರಾನ್ಸಿಸ್ ಎಂಬವರು ಅನಂತಪುರದ ಭಿಕ್ಷುಕರನ್ನು ಕುರಿತು ಬರೆಯುತ್ತ "ಒಡೆದು ಕಾಣುವ ಭಿಕ್ಷುಕರೆಂದರೆ ದಾಸರಿಗಳು. ಈ ಸಮಾಜ ಕಾಪು, ಬಲಿಜ, ಕುರುಬ, ಬೋಯ್ ಹಾಗೂ ಮಾಲ ಈ ಜಾತಿಗಳವರಿಂದ ಕೂಡಿ ಆಗಿದೆ. ದಾಸರಿಗಳೆಲ್ಲ ವೈಷ್ಣವರು, ಮನೆ-ಮನೆಯಲ್ಲಿ ಭಿಕ್ಷೆ ಬೇಡಿ ಬದುಕುವವರು. ಕೆಲ ಮನೆತನಗಳಲ್ಲಿ ಈ ವೃತ್ತಿ ಅನುವಂಶಿಕವಾಗಿರುವುದೆಂದು ಪ್ರಸ್ತಾಪಿಸಿದ್ದಾರೆ.

೧೯೦೧ರ ಮೈಸೂರು ಖಾನೇ ಸುಮಾರಿ ವರದಿಯಲ್ಲಿ ಮೈಸೂರು ಪ್ರದೇಶದೊಳಗಿನ ದಾಸರಿಗಳನ್ನು ಶೂದ್ರರ ವಿವಿಧ ವರ್ಗಗಳಿಗೆ ಸಂಬಂಧಿಸಿದ ಭಿಕ್ಷುಕರೆಂದು ಬಣ್ಣಿಸಲಾಗಿದೆ. ಯಾವುದೇ ಚಿಂತೆ ಅಥವಾ ಗಂಡಾಂತರ ಪ್ರಸಂಗದಲ್ಲಿ ಮಾಡಿದ ಪ್ರತಿಜ್ಞೆ ಬಲದಿಂದ ತಿರುಪತಿ ದೇವರಿಗೆ ಅರ್ಪಿತವಾದ ದಾಸರು ಸೇವಕರಾಗುತ್ತಾರೆ. ಅವನ ಹೆಸರಿನಿಂದ ಭಿಕ್ಷೆ ಬೇಡಿ ಬದುಕುತ್ತಾರೆ.

Manual of Tanjore District ಪ್ರಕಾರ, ಸಂಸ್ಕೃತದ 'ದಾಸ' ಎಂಬ ಶಬ್ದಕ್ಕೆ ತಮಿಳ ವಿಭಕ್ತಿ ಅನ್ ಸೇರಿಸಿ 'ದಾಸನ್' ಆಗುತ್ತದೆ ಎಂದು ಹೇಳಿ, ವೈಷ್ಣವ ಭಿಕ್ಷುಕರಿಗೆ ಮಾತ್ರವೇ ಈ ಶಬ್ದ ಬಳಸಲಾಗುತ್ತದೆಂದು ಹೇಳಿದೆ. ಅವರು ಮುಂಜಾನೆ ಹಾಡುಹೇಳುತ್ತ, ಬೀದಿಗುಂಟ ಸಾಗಿ ಬೆರಳಿಂದ ಚಿಕ್ಕ ದಮಡಿ ಬಾರಿಸುತ್ತ ಶಂಖ ಊದುತ್ತ ಅಕ್ಕಿಕಾಳಿನ ಭಿಕ್ಷೆಯನ್ನೆತ್ತುವರು ಎಂದಿದೆ.

ನೆಲ್ಲೂರು ಕೈಪಿಡಿಯಲ್ಲಿ ದಾಸರಿ ಪಂಥಗಳನ್ನು ತೆಲಗುಪ್ರದೇಶ ಹಾಗೂ ಕರ್ನಾಟಕದ ಕಳ್ಳರೆಂದು ಬಣ್ಣಿಸಲಾಗಿದೆ. ಅವರು ವಾಡಿಕೆಯಾಗಿ ಕತ್ತರಿಕಳ್ಳತನ ಮಾಡುವರೆಂದಿದೆ.

ಇನ್ನು ಕೆಲವು ದಾಸರಿಗಳು ಬೇರೆ ಬೇರೆ ಜಾತಿಗಳಿಗೆ ಗುರುಗಳಾಗಿ ವರ್ತಿಸುವ ವೈಷ್ಣವ ಬ್ರಾಹ್ಮಣರ ಕೈಕೆಳಗಿನ ಸೇವಕರಾಗಿರುವರು. ಅವರು ಹಳ್ಳಿಗಳಿಗೆ ತಮ್ಮ ಗುರುಗಳ ಆಗಮನದ ಸುದ್ದಿಯನ್ನು ಅವರ ಶಿಷ್ಯವರ್ಗಕ್ಕೆ ತಲುಪಿಸುವ ಕರ್ತವ್ಯ ನಿರ್ವಹಿಸುತ್ತಿದ್ದರು. ಬ್ರಾಹ್ಮಣ ಗುರುಗಳು ಹಳ್ಳಿಗೆ ಆಗಮಿಸುವಾಗ ಹಾಗೂ ಪೂಜೆಯ

ಸಂದರ್ಭದಲ್ಲಿ ಇವರು ತರಾಯಿ ಊದುತ್ತಿದ್ದರು. ಬ್ರಾಹ್ಮಣ ಗುರುಗಳು ತಮ್ಮ ಪರಿಯನ್ (ಹೊಲೆಯ) ಶಿಷ್ಯರನ್ನು ಮುಟ್ಟದಿದ್ದಾಗ ಈ ದಾಸರಿಗಳೇ ಪರಿಯನ್‌ರಿಗೆ ತೀರ್ಥ ಹಂಚುತ್ತಿದ್ದರು. ಪರಿಯನ್‌ನನ್ನು ಶಿಷ್ಯನನ್ನಾಗಿ ಗುರುತಿಸಲು ಬ್ರಾಹ್ಮಣ ಗುರುಗಳು ಶಂಖ ಮತ್ತು ಚಕ್ರಗಳ ಮುದ್ರೆಗಳನ್ನು ಕಾಯಿಸಿ ದಾಸರಿಗಳ ಕೈಯಲ್ಲಿ ಕೊಡುತ್ತಿದ್ದರು, ದಾಸರಿಗಳು ಪರಿಯನ್‌ರಿಗೆ ಆ ಶಂಖ, ಚಕ್ರಗಳ ಮುದ್ರೆಗಳನ್ನೊತ್ತುತ್ತಿದ್ದರು. ದಾಸರಿಗಳು ಮಂತ್ರಾಲೋಚನೆಯ ಸಭೆ, ಮದುವೆಯ ನಿಶ್ಚಿತಾರ್ಥ ಮತ್ತು ಸಾಮಾಜಿಕ ಕೆಲಸಗಳು ಇತರ ಸಂಗತಿಗಳ ತೀರ್ಮಾನದ ಸಂಬಂಧ ಹಬ್ಬಗಳ ಸಂದರ್ಭದಲ್ಲಿ ಪವಿತ್ರ ಕ್ಷೇತ್ರಗಳಾದ ತಿರುತನಿ, ತಿರುಪತಿ ಅಥವಾ ತಿರುವಳ್ಳೂರುಗಳಿಗೆ ಭೇಟಿ ಕೊಡುತ್ತಿದ್ದರು.

ಆಂಧ್ರ ಪ್ರದೇಶದ ವಿಶಾಖಪಟ್ಟಂ ಜಿಲ್ಲೆಯ ದಾಸರಿಗಳನ್ನು ಕುರಿತು ಹೇಳುತ್ತಾ : ದಾಸರಿ ಸಮುದಾಯದ ವಿವಿಧ ಬೆಡಗುಗಳ ನಡುವೆ ವೈವಾಹಿಕ ಸಂಬಂಧ ಏರ್ಪಡು ವುದು. ಸೋದರ ಮಾವನ ಮಗಳೊಡನೆ ಮದುವೆಯಾಗುವ ಸಂಪ್ರದಾಯ ಇವರದು. ಇವರಲ್ಲಿ ವಿಧವಾ ವಿವಾಹಕ್ಕೆ ಅನುಮತಿಯಿದ್ದರೆ, ವಿಚ್ಛೇಧನೆಗೆ ವಿರೋಧವಿದೆ. ಸಮುದಾಯದಲ್ಲಿ ಶವವನ್ನು ಸುಡುವ ಪದ್ಧತಿಯಿದ್ದು, ಚಿನ್ನ (ಕಿರಿಯ) ಮತ್ತು ಪೆದ್ದರೋಜು (ಹಿರಿಯ ದಿವಸ) ಸಮಾರಂಭಗಳನ್ನು ನೆರವೇರಿಸುವ ಸಂಪ್ರದಾಯವಿದೆ. ತಮ್ಮನ್ನು ವೈಷ್ಣವ ಧರ್ಮೀಯರೆಂದು ಬಹಿರಂಗವಾಗಿ ಕರೆದುಕೊಳ್ಳುವ ಇವರು ದಕ್ಷಿಣ ಜಿಲ್ಲೆಗಳಲ್ಲಿ ಜಾತ್ಯಾತೀತ ಮತ್ತು ಮತಾತೀತರಾಗಿ ವರ್ತಿಸುತ್ತಾರೆ. ಇವರು ಭಿಕ್ಷೆಗೆ ಹೊರಟಾಗ ತಮ್ಮ ಬರುವಿಕೆಯನ್ನು ಸೂಚಿಸಲು ಶಂಖ, ನಡೆದಾಗ ಬಾರಿಸುವ ಜಾಗಟೆ, ಎತ್ತರವಾದ ಲೋಹದ ದೀಪ, ಅದಕ್ಕೆ ಎಣ್ಣೆ ಹಾಕುವ ಪರಟೆ, ಹೆಗಲಿಗೆ ನೇತುಬಿಟ್ಟ ತಾಮ್ರ ಅಥವಾ ಹಿತ್ತಾಳೆಯ ಪಾತ್ರೆ, ಕೊರಳಲ್ಲಿ ಚಿಕ್ಕದೊಂದು ಲೋಹದ ಹಣಮಂತನ ಮೂರ್ತಿ ಧರಿಸಿರುತ್ತಾರೆ. ಇವರು ಸುಪ್ರಸಿದ್ಧ ಲಾವಣಿಗಾರರಾಗಿದ್ದು, ಬೊಬ್ಬಲಿ, ಅಮ್ಮಿನಾಯ್ಡು, ಲಕ್ಷ್ಮಮ್ಮ, ಯರಕಮ್ಮ ಮುಂತಾದವರ ಕುರಿತು ಪ್ರಸಿದ್ಧ ಲಾವಣಿಗಳನ್ನು ಹಾಡುವುದಕ್ಕೆ ಪ್ರಸಿದ್ಧರು."

ಥರ್ಸ್ಟನ್ ಅವರ ಈ ಪ್ರಬಂಧದಲ್ಲಿ 'ತೆಲುಗು ಬಣಜಿಗ, ಹೊಲೆಯ, ತಿಗಳ ಮತ್ತು ಒಕ್ಕಲಿಗ ಸಮುದಾಯದವರು ವೈಷ್ಣವ ದೀಕ್ಷೆ ಸ್ವೀಕರಿಸಿ ದಾಸರಿಗಳಾಗಿದ್ದಾರೆ' ಎಂದು ಹೇಳಲಾಗಿದೆ. ಮತ್ತೊಂದು ಕಡೆ ದಾಸರಿಗಳಲ್ಲಿ ಆರು ಉಪಪಂಗಡಗಳಾದ 'ಬಲಿಜ, ಜಾನಪ್ಪ, ಪಲ್ಲಿ, ವಲ್ಲುವ, ಗಂಗೆದ್ದುಲ ಮತ್ತು ಗೊಲ್ಲ ದಾಸರಿ' ಇವೆ ಎಂದು ಹೇಳಲಾಗಿದೆ. ಹೊಸದಾಗಿ ದಾಸದೀಕ್ಷೆ ಪಡೆದ ದಾಸರಿಗಳು, ಮತ್ತೊಂದೆಡೆ ವಂಶಗತವಾಗಿ ಉಳಿದು ಬಂದಿರುವ ದಾಸರಿಗಳು ಎಂಬ ಎರಡು ಗುಂಪು ಇರುವುದಾಗಿ ತಿಳಿದು ಬರುತ್ತದೆ. ಆದರೆ ಇವರಿಬ್ಬರೂ ವೈಷ್ಣವ ಭಿಕ್ಷುಕರೇ ಆಗಿರುವರೆಂಬ ವಿವರಣೆ ಥರ್ಸ್ಟನ್ ಅವರ ಪ್ರಬಂಧದಲ್ಲಿದೆ. ಥರ್ಸ್ಟನ್‌ರರವರು ದೊಂಗದಾಸರಿ ಕುರಿತು ಈ ಕೆಳಗಿನಂತೆ ವಿವರಿಸಿರುವರು.

**ದೊಂಗದಾಸರಿ :** ದೇವರ ಸೇವಕರಾದ ಈ ದಾಸರಿಗಳ ಕುರಿತು 'ವೈಷ್ಣವ ಧಾರ್ಮಿಕ

ಭಿಕ್ಷುಕರು. ವಿಷ್ಣುವಿನ ಸಂಕೇತಗಳನ್ನು ಭುಜದ ಮೇಲೆ ಧರಿಸುವ ಇವರು ವೈಷ್ಣವ ಸಹೋದರತ್ವದಿಂದ ಭಿಕ್ಷುಕರಾಗಿರುವರು. ದೊಂಗ ಅಥವಾ ಕಳ್ಳದಾಸರು ವಿಶೇಷ ವೇಶಭೂಷಣದಲ್ಲಿ ಹಣೆಯ ಮೇಲೆ ವಿಷ್ಣುನಾಮವನ್ನು ಧರಿಸಿರುತ್ತಾರೆ ಮತ್ತು ಕೈಯಲ್ಲಿ ದೀಪದ ಗರುಡಗಂಬ, ಜಾಗಟೆ ಹಿಡಿದು ತಲೆಯಲ್ಲಿ ನವಿಲುಗರಿಯ ತುರಾಯಿ ಧರಿಸಿ ಹಳ್ಳಿಗಳಿಗೆ ಭಿಕ್ಷೆ ಬೇಡಲು ಹೋಗುವರು. ವೆಂಕಟೇಶ್ವರನ ಅನುಯಾಯಿಗಳು ತಾವೆಂದು ಆಹಾರ ಇತ್ಯಾದಿ ವಸ್ತುಗಳನ್ನು ಜನರಿಂದ ಸ್ವೀಕರಿಸುವರು. ಗುಡಿದಾಸರಿಗಳಿಗಿಂತ ತದ್ವಿರುದ್ಧವಿರುವ ಈ ದೊಂಗದಾಸರು ಬಳ್ಳಾರಿ ಜಿಲ್ಲೆಯಲ್ಲಿ ಅಪರಾಧಿಗಳೆಂದು ಪರಿಗಣಿಸಲ್ಪಟ್ಟಿದ್ದಾರೆ, ಈಗಲೂ ಕೂಡ. ಇವರು ಯಾವುದೇ ಸಮುದಾಯದ ಹುಡುಗ ಅಥವಾ ಹುಡುಗಿಯರನ್ನು ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಅಪಹರಿಸುವರು. ಯಾವುದೇ ವ್ಯಕ್ತಿ ದೊಂಗದಾಸರಿ ಗುಂಪಿಗೆ ಸೇರಬಹುದು. ಮುಖ್ಯ ಜಾತಿಯ ಯಾವುದೇ ಒಬ್ಬ ಸದಸ್ಯನು ಈ ದೊಂಗದಾಸರಿ ಸಹೋದರತ್ವವನ್ನು ಹೊಂದಬಹುದು. ಆದರೆ ಅಂಥವರು ಲಿಂಗಾಯತ ಮತ್ತು ಕಬ್ಬೇರರ ದೃಷ್ಟಿಯಲ್ಲಿ ಕೀಳಾಗಿ ಕಾಣುತ್ತಾರೆ. ಆದುದರಿಂದ ಯಾವುದೇ ಗೌರವಾನ್ವಿತನು ಈ ಜಾತಿಯ ಸದಸ್ಯನಾಗುವುದಿಲ್ಲ. ಮನೆಯಿಂದ ಬಹಿಷ್ಕೃತನಾಗಲು ಸಿದ್ಧವಿರುವವನು ದೊಂಗದಾಸರಿಯಾಗಬಹುದು. ಈ ಸಮುದಾಯದವರು ಇತರರನ್ನು ತಮ್ಮ ಸಮುದಾಯಕ್ಕೆ ಸೇರಿಸಿಕೊಳ್ಳಬೇಕಾದರೆ ಅವರನ್ನು ನದಿಯ ದಂಡೆಯ ಮೇಲೆ ಎಣ್ಣೆಯಲ್ಲಿ ಸ್ನಾನ ಮಾಡಿಸಿ, ಹೊಸಬಟ್ಟೆತೊಡಿಸಿ, ಹಿರಿಯರ ಸಭೆ ಸೇರಿಸಿ ಉಪಹಾರ ಕೊಡುತ್ತಾರೆ. ಸಮಿ ಇಲ್ಲವೆ ಮಾರ್ಗೋಸಾ ಗಿಡದ ಟೊಂಗೆಯನ್ನು ಸುಟ್ಟು ಅದರಿಂದ ಸಮುದಾಯದೊಳಗೆ ಸೇರ್ಪಡೆಯಾಗುವ ಸದಸ್ಯನ ನಾಲಿಗೆಯನ್ನು ಸುಡಲಾಗುತ್ತದೆ. ಇದಾದ ಬಳಿಕ ಅವನು ಈ ಸಾಮಾನ್ಯ ಗುಂಪಿನಲ್ಲಿ ಸದಸ್ಯನ ಸ್ಥಾನ ಪಡೆಯುತ್ತಾನೆ.

ದೊಂಗದಾಸರಿಗಳು ತೆಲುಗು ಮತ್ತು ಕನ್ನಡವನ್ನು ಮಾತನಾಡುತ್ತಾರೆ. ಇವರಲ್ಲಿ ಎರಡು ಬೆಡಗುಗಳು ಮಾತ್ರ ಇವೆ. ಸಣ್ಣ ಅಕ್ಕಿ ಮತ್ತು ಘಂಟೆಲವರು. ಘಂಟೆಲವರು ಕಬ್ಬೇರ ಕುಲದವರು. ಇವರ ಪ್ರಮುಖ ದೇವರು ಹನುಮಂತ. ಜೊತೆಗೆ ವಿಷ್ಣು-ವೆಂಕಟೇಶನನ್ನೂ ಪೂಜಿಸುವರು. ಪ್ರತಿಯೊಂದು ಹಳ್ಳಿಯಲ್ಲಿ ಇವರು ಹೆಣ್ಣುದೇವರುಗಳಾದ ಹುಲಿಗೆವ್ವ ಇಲ್ಲವೆ ಯಲ್ಲಮ್ಮನನ್ನು ಗುಡಿಕಟ್ಟಿ ಪೂಜಿಸುವರು. ಈ ದೇವರುಗಳಿಗೆ, ಮಕ್ಕಳು ಅನಾರೋಗ್ಯದಿಂದ ಇದ್ದಾಗ, ಕಳ್ಳತನಕ್ಕೆ ಹೋಗುವ ಪೂರ್ವದಲ್ಲಿ ಕುರಿ-ಕೋಳಿ ಬಲಿಕೊಡುವ ಹರಕೆ ಹೊರುತ್ತಾರೆ.

ದೊಂಗದಾಸರಿಗಳು ಕಳ್ಳತನಕ್ಕೆ ಹೋಗುವ ಪೂರ್ವದಲ್ಲಿ ರಾತ್ರಿಯಹೊತ್ತು ತಮ್ಮ ಮುಖ್ಯ ದೇವತೆಯಾದ ಹುಲಿಗೆವ್ವ ಅಥವಾ ಯಲ್ಲಮ್ಮಗೆ ಅಡವಿಯಲ್ಲಿ ಕುರಿ,ಹುಂಜ ಬಲಿಕೊಡುತ್ತಾರೆ. ಬಲಿಕೊಡುವ ಕುರಿಯ ತಲೆಗೆ ರುಮಾಲು (turban) ಸುತ್ತುತ್ತಾರೆ. ಬಲಿಕೊಡುವ ಸಂದರ್ಭದಲ್ಲಿ ಅದು ಬಲಗಡೆಗೆ ಬಿದ್ದರೆ, ಕಳ್ಳತನಕ್ಕೆ ದೇವತೆ ಅನುಮತಿ ನೀಡಿತೆಂದು 'ಭಾವಿಸಿ ಕಳ್ಳತನಕ್ಕೆ ಮುಂದಾಗುತ್ತಾರೆ. ಎಡಗಡೆಗೆ ಬಿದ್ದರೆ ತಿರುಗಿ

ಮನೆಗೆ ಹೋಗುತ್ತಾರೆ. ಇದೇ ರೀತಿ ಹನುಮಂತ ದೇವರಿಗೂ ನಡೆದುಕೊಳ್ಳುತ್ತಾರೆ. ಹನುಮಂತನ ಕೊರಳಿಗೆ ಹೂವನ್ನು ಏರಿಸುತ್ತಾರೆ. ಅದರಲ್ಲಿನ ಒಂದು ಹೂ ಬಲಗಡೆಗೆ ಬಿದ್ದರೆ ಶುಭ ಎಂದು ಕಳ್ಳತನಕ್ಕೆ ಹೋಗುತ್ತಾರೆ, ಎಡಗಡೆ ಬಿದ್ದರೆ ಅಶುಭ ಎಂದು ಮನೆಗೆ ಹಿಂತಿರುಗುತ್ತಾರೆ, ಹೆಂಡತಿ ಮಕ್ಕಳು ಸಹಿತ ಇಡೀ ಕುಟುಂಬವೇ ಕಳ್ಳತನದಲ್ಲಿ ಪಾಲ್ಗೊಳ್ಳುತ್ತದೆ. ಇವರು ಮನೆ ಒಡೆಯಲು ಮತ್ತು ಕಳ್ಳತನ ಮಾಡಲು ಪ್ರವೀಣರು. ತಾಯಿಯು ಮಕ್ಕಳು ೫-೬ ನೇ ವಯಸ್ಸಿಗೆ ಬರುವಾಗಲೇ ಕಳ್ಳತನ ಮಾಡಲು ಕಲಿಸುತ್ತಾಳೆ. ಹಳ್ಳಿಯ ಸಂತೆಗೆ ಕರೆದುಕೊಂಡು ಹೋಗಿ ಅರಿವೆ ಅಥವಾ ಪಾತ್ರೆ ಕದ್ದು ತರಲು ಕಲಿಸುತ್ತಾಳೆ. ಕೆಲವು ಅಪರಾಧಿಗಳಲ್ಲಿ ಪೋಲಿಸರ ಕೈಗೆ ಸಿಕ್ಕರೆ ಅವರು ತಮ್ಮ ಹೆಸರು ಹೇಳದೆ ಕೆಟ್ಟ ಜಾತಿ, ಕೆಟ್ಟ ಹೆಸರು ಹೇಳುತ್ತಾರೆ. ಇವರು ಗೌಪ್ಯ ಭಾಷೆ ಮಾತನಾಡುತ್ತಾರೆ. ದಾಸರಿ ಮಹಿಳೆ ಬಹಳ ಸಿಡಿಲ. ಆದರೆ ಆಕೆಯು-ಬೇರೆ ಇತರ ಜಾತಿಗಳಾದ ಬ್ರಾಹ್ಮಣ, ಲಿಂಗಾಯತ, ಕಬ್ಬೇರ, ಕುರುಬ, ಉಪ್ಪಾರ ಅಥವಾ ರಜಪೂತ ಗಂಡಸರೊಂದಿಗೆ ಸಂಬಂಧ ಬೆಳಸಿ ಹೋಗಿದ್ದರೆ, ಆಕೆಯ ನಾಲಿಗೆಯನ್ನು ಸುಟ್ಟು ಪುನಃ ಸಮುದಾಯದೊಳಗೆ ಸೇರಿಸಿಕೊಳ್ಳುತ್ತಾರೆ. ಇವರಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಇವರು ದನ ಮತ್ತು ಹಂದಿಯ ಮಾಂಸವನ್ನುಳಿದು ಉಳಿದ ಪ್ರಾಣಿಗಳ ಮಾಂಸ ಸೇವಿಸುವರು.

ಸಯ್ಯದ್ ಸಿರಾಜ್ ಉಲ್ ಹಸನ್ ಅವರು "ದಾಸರಿ ಎಂದರೆ ವೈಷ್ಣವ ಭಿಕ್ಷುಕರ ವರ್ಗ; 'ದಾಸ' ಅಥವಾ 'ದೇವರ ಸೇವಕ' ಎಂಬುದರಿಂದ ಈ ಹೆಸರು ಬಂದಿದೆ ಎಂದಿರುವರು. ಮೂಲತಃ ತೆಲುಗುನಿಂದ ನಾಮಾಂಕಿತಗೊಂಡ ಇವರಲ್ಲಿ ಬೇರೆ ಬೇರೆ ಸ್ವಗೋತ್ರ ಪಂಗಡಗಳಿರುವುದಾಗಿ ಹೇಳಿರುವ ಅವರು ಹತ್ತು ಒಳಪಂಗಡಗಳನ್ನು ಹೆಸರಿಸಿದ್ದಾರೆ.

ಬುಕ್ಕದಾಸರಿ, ಪಾಗದಾಸರಿ, ದಂಡೆದಾಸರಿ, ಭಗವತ ಅಥವಾ ಭುಟ್ಟೆದಾಸರಿ, ಕುಂಚಲೋಯ ಅಥವಾ ತೆಲಗದಾಸರಿ, ಚಿನ್ನದಾಸರಿ, ಕಂಗೆದ್ದುಲುದಾಸರಿ, ಮಾಲಾ ದಾಸರಿ, ಹೊಲೆದಾಸರಿ ಮತ್ತು ಚೆಂಚುದಾಸರಿ ಅಲ್ಲದೇ ಈ ದಾಸರಿಗಳಲ್ಲಿ ಹಲವಾರು ಹೊರಬಾಂಧವ್ಯ ವಿಭಾಗಗಳಿರುವುದನ್ನು ಹಸನ್ ಅವರು ಹೆಸರಿಸಿರುವರು.

ಬುಕ್ಕದಾಸರಿಗಳನ್ನು ಕುಂಕುಮ ದಾಸರಿಗಳೆಂದು ಕರೆಯುತ್ತಾರೆ. ಇವರು ಸುಗಂಧ ದ್ರವ್ಯಗಳನ್ನು ತಯಾರಿಸುವ ಹಾಗೂ ಕುಂಕುಮ, ಊದಬತ್ತಿ, ಸುರಮ (antimony), ಮತ್ತು ಇತರ ಅಲಂಕಾರಿಕ ವಸ್ತುಗಳನ್ನು ಮಾರುವವರಾಗಿದ್ದಾರೆ. ದಂಡೆದಾಸರಿ ಅಥವಾ ಪೂಸಲವಾಡಗಳು ಭಿಕ್ಷೆಯ ಜೊತೆ ಜೊತೆಗೆ ಗಾಜಿನ ಸರಗಳನ್ನು ಮಾರುವವ ರಾಗಿದ್ದಾರೆ. ಮೂಲತಃ ಇವರ ಸಂಪ್ರದಾಯವು ಪಲ್ಲಕ್ಕಿಯಲ್ಲಿ ಗುರುಗಳನ್ನು ಹೊತ್ತು ಕೊಂಡು ಹೋಗುವುದಾಗಿದೆ. ಕಂಚಿಯ ತಲಚಾರಿಗಳು ಇವರ ಸೇವೆ ಮತ್ತು ಭಕ್ತಿಯನ್ನು ಗುರುತಿಸಿ, ಅವರ ಒಬ್ಬ ಗುರುಗಳು ಮೊದಲ ತಲೆಮಾರಿನ ಹಿರಿಯರಿಗೆ ದಂಡವನ್ನು ಕಾಣಿಕೆಯಾಗಿ ಕೊಟ್ಟು ಸತ್ಕರಿಸಿರುತ್ತಾರೆ. ಒಂದು ಕೋಲು ಅದರೊಂದಿಗೆ ದಂಡವನ್ನು

(Palanquin) ಎತ್ತಿಕೊಂಡು ಹೋಗುವರು ಹಾಗೂ ಇದನ್ನೊಂದು ತಮ್ಮ ಭಿಕ್ಷೆಯ ಸಂಕೇತ(badge)ವನ್ನಾಗಿ ಉಪಯೋಗಿಸುವರು. ಇವುಗಳ ಜೊತೆ ತಾಳ(talam), ತಂಬೂರಿ, ಶಂಖ, ಜಾಗಟೆ(bell) ಮತ್ತು ದೀಪಗಳನ್ನು ಒಯ್ಯುತ್ತಾರೆ. ಸಾಮಾನ್ಯವಾಗಿ ಭಿಕ್ಷೆಗೆ ಹೋಗುವಾಗ ಮೂರು ಜನರಿರುತ್ತಾರೆ. ದೀಪಸ್ತಂಭವನ್ನು ನೆಲದ ಮೇಲಿಟ್ಟು ಅದರ ಸುತ್ತಲೂ ಇಬ್ಬರು ಕುಣಿಯುತ್ತಾರೆ. ಅವರಲ್ಲಿ ಒಬ್ಬ ಶಂಖವನ್ನು ಊದಿದರೆ ಇನ್ನೊಬ್ಬ ಗಂಟೆಯನ್ನು ಬಾರಿಸುತ್ತಾನೆ. ಮೂರನೆಯವನು ತಂಬೂರಿಯನ್ನು ಬಾರಿಸುತ್ತಾ ವಿಷ್ಣುವನ್ನು ಸ್ತುತಿಸುವ ಪದವನ್ನು ಹಾಡುವನು. ಶನಿವಾರದ ದಿನ ಭಿಕ್ಷೆಗೆ ಹೊರಡುವ ಇವರು, ಭುಜದ ಮೇಲೆ ಕಾವಡಿಗಳನ್ನು ಹಾಕಿಕೊಂಡು ಜೊತೆಯಲ್ಲಿ ವಿಷ್ಣುವಿನ ಚಿಕ್ಕಮೂರ್ತಿ, ಶಂಖ, ಸಾಲಿಗ್ರಾಮದ ಕಲ್ಲು, ರುದ್ರಾಕ್ಷಿ ಹಾಗೂ ಇತರ ಪವಿತ್ರ ವಸ್ತುಗಳನ್ನು ಹೊತ್ತು ತಂದು, ಉತ್ತಮರಾದ ವಿಷ್ಣುವಿನ ಭಕ್ತರಿಗೆ ಮಾರುತ್ತಾರೆ. ಅದಕ್ಕಾಗಿ ಇವರನ್ನು ಕಾಶಿಕವಡಿಗಳೆಂದೂ ಕರೆಯುವರು. ಕೆಲವು ಸಂದರ್ಭಗಳಲ್ಲಿ ಇವರು ಉತ್ತರ ಭಾರತದ ಬೈರಾಗಿಗಳ ವೇಷ ಹಾಗೂ ಭಾಷೆಯನ್ನು ಅನುಸರಿಸುತ್ತಾರೆ. ಇವರ ಹೆಂಗಸರು ತಾಳೆಮರದ (Palmyra) ಎಲೆಗಳಿಂದ ಮಾಡಿದ ಬಾಸ್ಕೆಟ್‌ಗಳನ್ನು ಮತ್ತು ವನಸ್ಪತಿ ಔಷಧಗಳನ್ನು ಮಾರುತ್ತಾರೆ.

ಭಗವತ ಅಥವಾ ಬುಟ್ಟಿದಾಸರಿ ಇವರು ಕೆಳಜಾತಿಯ ಸಂಚಾರಿ ಭಿಕ್ಷುಕರು. ಭಾಗವತರ ಹಾಗೆ ನೃತ್ಯ ಮಾಡುವುದರಿಂದ ಅವರಿಗೆ ಈ ಹೆಸರು ಬಂದಿದೆ. ಈ ಸಮುದಾಯದ ಗಂಡಸರು ಹೆಂಗಸರ ವಸ್ತ್ರಧರಿಸಿ, ಬಿಗಿಯಾದ ಸೀರೆ ಮತ್ತು ಕುಪ್ಪಸಗಳನ್ನು ಉಟ್ಟು, ಕಾಲಿಗೆ ಕಿರುಗೆಜ್ಜೆ ಕಟ್ಟಿಕೊಂಡು, ತಲೆಗೆ ಕಟ್ಟಿಗೆಯ ಹೊಳೆಯುವ ಮಾಲೆ, ಆಭರಣಗಳನ್ನು ಧರಿಸಿ ಮೃದಂಗ ಬಾರಿಸುತ್ತ ಕುಣಿಯುತ್ತಾರೆ. ಬುಟ್ಟಿಯಲ್ಲಿ ಸಣ್ಣಸೂಜಿ, ಕಾಜಿನ ಸರ ಹೊತ್ತು ಮಾರುವುದರಿಂದ ಇವರನ್ನು ಬುಟ್ಟಿದಾಸರಿ ಅಥವಾ ಪೂಸಲವಾಡ ಎಂದು ಕರೆಯುತ್ತಾರೆ. ಇವರನ್ನು ಅಪರಾಧಿಗಳೆಂದು ಪೋಲಿಸರು ಕಾವಲು ಮಾಡುತ್ತಿರುತ್ತಾರೆ.

ಹೊಲೆದಾಸರಿಗಳು ಕರ್ನಾಟಕದ ಹೊಲೆಯರೊಂದಿಗೆ ಸಂಬಂಧಪಟ್ಟವರಾದರೆ, ಮಾಲಾದಾಸರಿಗಳು ತೆಲಂಗಾಣದ ಮಾಲಾಗಳೊಂದಿಗೆ ಸಂಬಂಧಪಟ್ಟವರಾಗಿದ್ದಾರೆ. ಚೆಂಚುದಾಸರಿಗಳು ಅಥವಾ ಕೃಷ್ಣ ಚೆಂಚುಗಳು ಆದಿವಾಸಿ ಚೆಂಚುಗಳಿಂದ ಬಂದವರಾಗಿರುವರು.ಇತರ ಗುಂಪುಗಳ ಕುರಿತು ಪರಿಪೂರ್ಣ ಮಾಹಿತಿ ದೊರೆಯುವುದಿಲ್ಲ.

ಈ ದಾಸರಿಗಳಲ್ಲಿ ಹಲವಾರು ಹೊರ ಬಾಂಧವ್ಯಗಳ ಪಂಗಡಗಳಿವೆ ಅವುಗಳಲ್ಲಿ ಕೆಲವು ಹೀಗಿವೆ.

| | | |
|---|---|---|
| Yerlondalu. | Gawiwaru. | Anagondiwaru. |
| Kavatiwaru. | Aditondalu | Rawalwaru. |
| Anagalundalu. | Amnaboyaniwaru. | Battondalu. |
| Bumalawaru. | Adiwaru. | Poshetiwaru |
| Poyaniwaru. | Podilawaru. | |

ಈ ಪಂಗಡಗಳ ನಡುವೆ ವಿವಾಹ ಮಾಡಿಕೊಳ್ಳುವುದನ್ನು ನಿಷೇಧಿಸಲಾಗಿದೆ. ಸೋದರತ್ತೆ/ಸೋದರಮಾವನ ಮಗ/ಮಗಳನ್ನು ಮದುವೆಯಾಗುವ ಸಂಪ್ರದಾಯವಿದೆ. ವಿಧವಾ ವಿವಾಹಕ್ಕೆ ಬಹುಪತ್ನಿತ್ವಕ್ಕೆ ಅವಕಾಶವಿದೆ. ಇವರಲ್ಲಿ ಶವ ಹೂಳುವ ಪದ್ಧತಿ ಇದೆ. ಈ ದಾಸರಿಗಳ ಸಾಮಾಜಿಕ ಸ್ಥಾನಮಾನದಲ್ಲಿ ಬುಕ್ಕದಾಸರಿಗಳು ಉನ್ನತ ಸ್ಥಾನದಲ್ಲಿದ್ದರೆ, ನಂತರದ ಸ್ಥಾನ ದಂಡೆದಾಸರಿಗಳದು. ಭಾಗವತ ಮತ್ತು ಹೊಲೆಯ ದಾಸರಿಗಳು ಕೆಳವರ್ಗದಲ್ಲಿ ಪರಿಗಣಿಸಲ್ಪಟ್ಟಿದ್ದಾರೆ. ಮಾಂಸಾಹಾರಿಗಳಾದ ಈ ದಾಸರಿಗಳು ಹಂದಿ, ಕೋಳಿ, ಮೀನು, ಮೊಸಳೆ,ಹಲ್ಲಿ, ನರಿಗಳನ್ನು ಸೇವಿಸುತ್ತಾರೆ. ಇವರು ಢೇಡ, ಮಾದಿಗ, ಧೋಬಿ ಮತ್ತು ನಾವಿಂದ (Mangalas) ಸಮುದಾಯಗಳ ಹೊರತಾಗಿ ಎಲ್ಲ ಜಾತಿಗಳ ಕೈಯಿಂದ ಆಹಾರ ಸ್ವೀಕರಿಸುತ್ತಾರೆ. ಮಾಲ ಮತ್ತು ಮಾದಿಗರು ಮಾತ್ರ ಇವರಿಂದ ಕಾಚಿ(Kachi)ಯನ್ನು ಸ್ವೀಕರಿಸುತ್ತಾರೆ.

ಎಲ್ ಕೆ ಅನಂತಕೃಷ್ಣ ಅಯ್ಯರ ಅವರು "ಭಿಕ್ಷೆ ಬೇಡುವ ವೈಷ್ಣವ ಜಾತಿಯೇ ದಾಸರಿಯಾಗಿದೆ. ದಾಸರಿ ಎಂಬುದು ಯಾವುದೇ ನಿರ್ದಿಷ್ಟ ಜಾತಿಯನ್ನು ಸೂಚಿಸುವು ದಿಲ್ಲ, ಬ್ರಾಹ್ಮಣೇತರ ಯಾವುದೇ ಜಾತಿಗೆ ಸೇರುವ ಎಲ್ಲಾ ವ್ಯಕ್ತಿಗಳಿಗೆ ಇದು ಅನ್ವಯಿಸುತ್ತದೆ. ಹೊಸದಾಗಿ ಸೇರುವ ಜಾತಿಗಳೆಂದರೆ ಬಣಜಿಗ, ಕುರುಬ, ಒಕ್ಕಲಿಗ, ಸಾಲಿ, ತಿಗಳ, ಗೊಲ್ಲ, ಬೇಡ, ಬೆಸ್ತ, ವಡ್ಡ, ಹೊಲೆಯ ಮತ್ತು ಮಾದಿಗ. ೧೯೦೧ ರ ಮೈಸೂರು ಜನಗಣತಿ ವರದಿ ಪ್ರಕಾರ ಇವರು ಶೂದ್ರರಿಗೆ ಸೇರಿದ ವಿವಿಧ ವರ್ಗಗಳಲ್ಲಿರುವ ಭಿಕ್ಷುಕರೆಂದು ವಿವರಿಸಿದೆ. ಅಲ್ಲದೆ ಇವರು ರಾಜ್ಯದ ಎಲ್ಲಾ ಕಡೆಗಳಲ್ಲೂ ಕಾಣಿಸುತ್ತಾರೆ. ಹೆಚ್ಚಾಗಿ ಕೋಲಾರ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿದ್ದು, ಮದ್ರಾಸ್ ಪ್ರಾಂತ್ಯದ ಉತ್ತರ ಆರ್ಕಾಟ್, ಅನಂತಪುರ, ತಂಜಾವೂರು, ಮಧುರೈಗಳಲ್ಲೂ ಕೂಡ ಕಂಡು ಬರುತ್ತಾರೆ" ಎಂದಿರುವರು.

### ದಾಸರಿ ಜಾತಿಯ ಮೂಲ ಕುರಿತು

ದಾಸರಿಗಳು ವೈಷ್ಣವ ಸನ್ಯಾಸಿ ಏಕಾಂಗ ರಂಗಸ್ವಾಮಿ ಮತ್ತು ಕುರುಬ ಮಹಿಳೆಯ ಬಣಜಿಗ ಶಿಷ್ಯನ ಕುಡಿಯೆಂದು ಹೇಳಲಾಗಿದೆ. ಈ ಶಿಷ್ಯನು ಕುಕ್ಕೆ (ಕುಡುಂಗ)ಯಲ್ಲಿ ಹೂವನ್ನು ತಂದು ತನ್ನ ಗುರು ಅಥವಾ ಉಪದೇಶಕನಿಗೆ ನೀಡುತ್ತಿದ್ದನು. ಹೀಗಾಗಿ ಈತನ ವಂಶಸ್ಥರಿಗೆ ಈ ಹೆಸರನ್ನಿಡಲಾಗಿದೆ. ಇವರು ಪಕ್ಕದ ತಾಲ್ಲೂಕುಗಳಾದ ಹಿಂದೂಪುರ, ಪೆನುಕೊಂಡಗಳಿಂದ ಕರ್ನಾಟಕ ರಾಜ್ಯಕ್ಕೆ ವಲಸೆ ಬಂದವರೆಂದು ತಿಳಿಸಲಾಗಿದೆ. ತಿರುಪತಿಯಲ್ಲಿ ದೇವರ ಸೇವೆಗೆಂದು ನೇಮಿಸಿಕೊಂಡವರೇ 'ದಾಸರು' ಅಥವಾ ಸೇವಕರು. ಕೋಪ ಅಥವಾ ಅಪಾಯದ ಪರಿಸ್ಥಿತಿಗಳಲ್ಲಿ ಇವರು ಇಲ್ಲವೇ ಇವರ ತಂದೆ–ತಾಯಿ ಪ್ರಾರ್ಥನೆ ಮಾಡಿಕೊಂಡ ಸಲುವಾಗಿ ಇವರು ದೇವರ ಹೆಸರಿನಲ್ಲಿ ಬಹುತೇಕ ಭಿಕ್ಷೆ ಬೇಡಿ ಬದುಕಬೇಕು. ಇನ್ನೂ ಮುಂತಾಗಿ ಕೆಲವು ಜಾತಿ ಗಳಲ್ಲಿ ಕುಟುಂಬದ ಹಿರಿಯರು ಪ್ರಾರ್ಥನೆ ಮಾಡಿಕೊಂಡ ಸಲುವಾಗಿ, ಪ್ರಾರ್ಥನೆಯನ್ನು ಪೂರೈಸಲು ಬೀದಿಗಳಲ್ಲಿ ಮೇಲು ಧ್ವನಿಯಲ್ಲಿ ಒಂದು ಹಾಡನ್ನು ಹಾಡಿಕೊಂಡು

ಶಂಖ, ಜಾಗಟೆಯನ್ನು ನುಡಿಸಿಕೊಂಡು ಹರಿಕೀರ್ತನೆಗಳನ್ನು ಹಾಡಿಕೊಂಡು ಸಾಗಬೇಕು (ಹಾಡುಗಳು ಹರಿ ಅಥವಾ ವಿಷ್ಣುವನ್ನು ಹೊಗಳುವುದಾಗಿದೆ) ಎನ್ನಲಾಗಿದೆ.

ತೆಲಗು ಮತ್ತು ಕನ್ನಡ ಭಾಷೆಗಳನ್ನು ಮಾತನಾಡುವ ಈ ದಾಸರಿಗಳಲ್ಲಿ ೧೯೦೧ ರ ಜನಗಣತಿ ವರದಿಯಲ್ಲಿ ಈ ಕೆಳಕಂಡ ಸ್ವ ಗೋತ್ರ ಪಂಗಡಗಳನ್ನು ಪಟ್ಟಿಮಾಡಲಾಗಿದೆ.

೧) ಗುಡುಮ ದಾಸರು ೨) ದೊಂಬಿ ದಾಸರು ೩) ಧರ್ಮ ದಾಸರು ೪) ಶಂಖು ದಾಸರು ೫) ಚಕ್ರವರ್ತಿ ದಾಸರು

ಇವುಗಳ ಜೊತೆಗೆ ಇರುವ ಇತರ ಸ್ವಗೋತ್ರ – ಪಂಗಡಗಳೆಂದರೆ, ೧) ದೇಶಿ ಭಾಗ ದಾಸರು ೨) ಕತ್ತರಿ ದಾಸರು ೩) ಆಟ ದಾಸರು ೪) ಬಿಂದಿಗೆ ದಾಸರು ೫) ನಾಮಧಾರಿ ದಾಸರು ೬) ಶನಿವಾರ ದಾಸರು. ಈ ಹೆಸರುಗಳು ನಿಜವಾಗಿ ವಿಭಿನ್ನ ಪಂಗಡಗಳನ್ನು ಪ್ರತಿನಿಧಿಸುತ್ತವೆ ಅಥವಾ ಸೂಚಿಸುತ್ತವೆಂದು ಹೇಳುವುದು ಸ್ಪಷ್ಟವಾಗಿಲ್ಲ– ಎಂದಿರುವರು.

ದಾಸರಿಗಳನ್ನು ಕುರಿತು ಬರೆಯುತ್ತ "ಗುಂಪುಗಳಲ್ಲಿ ನರ್ತನ ಮಾಡುವುದರಿಂದಾಗಿ ಇವರನ್ನು ದೊಂಬಿದಾಸರೆಂದು ಕರೆಯಲಾಗಿದೆ. ಕಳ್ಳ ಅಥವಾ ದೊಂಗ ಎಂಬ ಪದವು (ಪರಿಕಲ್ಪನೆ) ಯಾವುದೇ ಅಪರಾಧ ಪ್ರವೃತ್ತಿಯನ್ನು ಅರ್ಥೈಸುವುದಿಲ್ಲಾ. ಆದರೆ, ಮೂರು ಪೀಳಿಗೆಯವರೆಗೆ ತಿರುಪತಿಯಲ್ಲಿರುವ ಪವಿತ್ರಕ್ಷೇತ್ರವನ್ನು ಭೇಟಿ ಮಾಡಲು ವಿಫಲಗೊಂಡ ಭಕ್ತರಿಗೆ ಇದು ಅಕ್ಷರಸಹ ಅನ್ವಯಿಸುತ್ತದೆ. ಈ ವಿಷಯದಲ್ಲಿ ಇವರನ್ನು ದೊಂಗ ಕಾಪುಗಳೆಂದು ಕರೆಯಲ್ಪಡುವರು. ಇನ್ನೆಂದೂ ಇವರನ್ನು ತಿರುಪತಿ ಪುಣ್ಯಕ್ಷೇತ್ರವನ್ನು ಭೇಟಿ ನೀಡಕೂಡದೆಂದು ನಿಷೇಧಿಸಲಾಗಿರುತ್ತದೆ. ಕತ್ತರಿ ದಾಸರಂತೆ, ಬಿಂದಿಗೆ ದಾಸರು ವೃತ್ತಿ ಕೆಲಸಗಳಿಗೆ ಹೋಗುವಾಗ ಬಿಂದಿಗೆಯನ್ನು ಹಿಡಿದುಕೊಂಡು ಹೋಗುತ್ತಿದ್ದರಿಂದಾಗಿ ಬಿಂದಿಗೆ ಹೆಸರನ್ನು ಇಡಲಾಗಿದೆ" ಎಂದಿರುವರು.

ಅಲ್ಲದೆ ಗುಡುಮಿ ದಾಸರಿಗಳ ಕುರಿತು ಬರೆಯುತ್ತ 'ಗುಡುಮಿ ದಾಸರಿಗಳಲ್ಲಿ ದೇವರಕೊಂಡವರು, ಮೈಲಗಾಮೊಳ್ಳು, ತಾತೊಳ್ಳು, ಯದ್ದುಲೊಳ್ಳು, ಪಲ್ಲಿಪೈನೋಳ್ಳು ಎಂದು ಉಪಪಂಗಡಗಳಿವೆ' ಎಂದೂ 'ಪಾಲುಂಥ, ಪಗಡಿಪಾಲು ಅಥವಾ ಪಾಗ್ದಾಲು, ಪಸುಬಲೆಟ್ಟಿ, ಶ್ರೀಜಾಣಕಲು, ಮಲ್ಲಿಚೆಟ್ಟಿ, ತಪಟಮ್, ಉಮ್ಮೆಟ್ಟು, ಪುಲಗೋತ್ರ, ಯದ್ಲೋಳ್ಳು' ಎಂಬ ಹೊರಪಂಗಡಗಳಿವೆ- ಎಂದಿರುವರು.

ವಿವಾಹ ನಿಷೇಧದ ಕುರಿತು ಬರೆಯುತ್ತ 'ಸಂಬಂಧಪಟ್ಟ ಪಂಗಡಗಳಿಗೆ ವಿವಾಹವು ಸ್ವಗೋತ್ರವಾಗಿರುತ್ತದೆ. ಗೋತ್ರವನ್ನು ಪರಿಗಣಿಸಿದರೆ, ಇದು ಹೊರಪಂಗಡವಾಗಿರುತ್ತದೆ. ಒಬ್ಬ ವ್ಯಕ್ತಿಯು ಇಬ್ಬರು ಸೋದರಿಯರನ್ನು ಹಂತ ಹಂತವಾಗಿ ವಿವಾಹವಾಗಬಹುದು ಮತ್ತು ಈ ಕುಟುಂಬಗಳ ನಡುವೆ ಕೊಟ್ಟು-ತರುವ ಅವಕಾಶವಿದೆ. ವರದಕ್ಷಿಣೆಯು ಹನ್ನೆರಡು ರೂಪಾಯಿಗಳಿಂದ ಇಪ್ಪತ್ತು ರೂಪಾಯಿಗಳವರೆಗೆ ಇರುತ್ತದೆ. ವಿಧುರನು ಪುನರ್ ವಿವಾಹವಾಗಬೇಕಾದರೆ ಇದರ ಎರಡರಷ್ಟು ಹಣವನ್ನು ಪಾವತಿಸಬೇಕಾಗುತ್ತದೆ ಎನ್ನಲಾಗಿದೆ.

ಈ ದಾಸರಿಗಳಲ್ಲಿ ವಿಧವಾ ವಿವಾಹಕ್ಕೆ, ವಿಚ್ಛೇದನೆಗೆ, ದತ್ತು ಸ್ವೀಕಾರಕ್ಕೆ ಅವಕಾಶವಿದೆ. ವಿವಾಹವಾಗುವ ಕುಟುಂಬಗಳಿಬ್ಬರಲ್ಲಿ ಯಾರಾದರೊಬ್ಬರು ವಿವಾಹ ಒಪ್ಪಂದ ಮುರಿದರೆ ನಾಲ್ಕು ರೂಪಾಯಿಗಳ ದಂಡ ಹಾಗೂ ವಿವಾಹದ ಖರ್ಚು ಕೊಡಬೇಕಾಗುತ್ತದೆ. ವಿವಾಹವು ಸಾಮಾನ್ಯವಾಗಿ ವರನ ಮನೆಯಲ್ಲಿ ನಡೆಯುತ್ತದೆ. ಶನಿವಾರದಂದು ಮೊದಲು ಮನೆದೇವರ ಪೂಜೆಯ ಮೂಲಕ ವಿವಾಹದ ಕಾರ್ಯ ಆರಂಭವಾಗುತ್ತದೆ. ಈ ಸಮುದಾಯದಲ್ಲಿ ಹೆಣ್ಣಿನ ಪ್ರೌಢಾವಸ್ಥೆಯ ಆಚರಣೆಗಳಿವೆ. ದಾಸರಿಗಳಲ್ಲಿ 'ಕಟ್ಟೆಮನೆ'ಯೆಂಬ ಕುಲಸಭೆಯಿದ್ದು, ಚಿನ್ನಪೆದ್ದ (ಹಿರಿಯ ಅಥವಾ ಕಿರಿಯ)ನು ಗುಡಿಗಾಡು ಆಗಿ ಕಾರ್ಯ ನಿರ್ವಹಿಸುತ್ತಾನೆ. ಸಮುದಾಯದ ಒಳಗಡೆ ನಡೆಯುವ ಅನೇಕ ತಪ್ಪುಗಳಿಗೆ ಅಪರಾಧಗಳಿಗೆ ಈ ಕುಲಸಭೆಯು ನ್ಯಾಯನಿರ್ಣಯ ಮಾಡುವ, ದಂಡ ವಿಧಿಸುವ, ಬಹಿಷ್ಕಾರ ಹಾಕುವ, ಬಹಿಷ್ಕಾರ ಹಿಂಪಡೆಯುವ ಅಧಿಕಾರ ಹೊಂದಿರುತ್ತದೆ.

ವೃತ್ತಿಯಿಂದ ಭಿಕ್ಷುಕರಾಗಿರುವ ಇವರು ಮಾಂಸಾಹಾರಿಗಳಾಗಿದ್ದಾರೆ. 'ಆದರೆ ಕೋತಿ, ಹಸು, ಇಲಿ, ನವಿಲು' ಮಾಂಸವನ್ನು ತಿನ್ನುವುದಿಲ್ಲ. ವಿಷ್ಣುವಿನ ಆರಾಧಕ ರಾಗಿರುವ ಇವರು ಬಹುತೇಕ ಶೂದ್ರರಿಗೆ ಪೂಜಾರಿಗಳಾಗಿ ಕೆಲಸ ಮಾಡುತ್ತಾರೆ ಎಂಬ ವಿವರಣೆ ಅಯ್ಯರ ಅವರ ಲೇಖನದಲ್ಲಿದೆ.

ಕೆ ಎಸ್ ಸಿಂಗ್ ಅವರ ಗ್ರಂಥದಲ್ಲಿ ಸಮುದಾಯಕ್ಕೆ ಸಂಬಂಧಿಸಿದಂತೆ ಪ್ರಮುಖವಾಗಿ 'ದಂಡಿಗದಾಸ/ಚೆನ್ನದಾಸರ, ದಾಸರಿ ಮತ್ತು ಹೊಲೆಯ ದಾಸರಿ' ಎನ್ನುವ ಲೇಖನಗಳಿವೆ. ಇವನ್ನು ಬೇರೆ ಬೇರೆ ಲೇಖಕರು ಬರೆದಿರುವರು.

ಆರ್ ಗುಪ್ತಾ ಬರೆದಿರುವ 'ದಂಡಿಗದಾಸ / ಚೆನ್ನದಾಸರ' ಪ್ರಬಂಧದಲ್ಲಿ ದಂಡಿಗ ದಾಸರನ್ನು ಚೆನ್ನದಾಸರು, ಜಂಬೂದಾಸರು ಹಾಗೂ ಹರಿದಾಸರು ಎಂದೂ ಕರೆಯುತ್ತಾರೆ. ದಂಡಿಗ ದಾಸ ಎಂಬ ಪದವು 'ದಂಡ' ಎಂಬ ಪದದಿಂದ ಬಂದಿದೆ. ಹಾಗೆಂದರೆ "ಕೋಲು" ಎಂದರ್ಥ. ಅದನ್ನವರು ಭಿಕ್ಷೆ ಬೇಡುವಾಗ ಸಹಾಯಕ್ಕೆ ಹಾಗೂ ಚೀಲ ಹೊರಲು ಬಳಸುತ್ತಾರೆ ಇವರ ಸಾಂಪ್ರದಾಯಿಕ ವೃತ್ತಿಯೇ ಭಿಕ್ಷೆ ಬೇಡುವುದು. ಕನ್ನಡ ವನ್ನು ಮಾತನಾಡಿ ಕನ್ನಡ ಲಿಪಿಯನ್ನು ಬಳಸುತ್ತಾರೆ. ಇವರಲ್ಲಿ ಹಲವಾರು ಬಳಿಗಳಿವೆ, ಅವುಗಳು ಮದುವೆಯ ಸಂಬಂಧಗಳನ್ನು ನಿರ್ದೇಶಿಸುತ್ತವೆ. ದಂಡಿಗ ದಾಸರು ವೈಷ್ಣವ ಭಕ್ತರು. ಇವರು ತಿರುಪತಿಯ ವೆಂಕಟೇಶ್ವರ ಸ್ವಾಮಿಗೆ ತಮ್ಮನ್ನು ಸಮರ್ಪಿಸಿ ಕೊಂಡಿದ್ದಾರೆ.

ಇವರು ಭಿಕ್ಷೆಗೆ ಹೋಗುವಾಗ ಸಾಮಾನ್ಯವಾಗಿ ಒಂದು ಕುಟುಂಬದ ಮೂವರು ಇರುತ್ತಾರೆ. ದೀಪಗಂಬವನ್ನು ನೆಲದ ಮೇಲಿಟ್ಟು, ಅದರ ಸುತ್ತಲೂ ಇಬ್ಬರು ಕುಣಿಯು ತ್ತಾರೆ. ಅದರಲ್ಲಿ ಒಬ್ಬರು ಶಂಖವನ್ನು ಊದುವರು. ಇನ್ನೊಬ್ಬರು ಘಂಟೆಯನ್ನು ಬಾರಿಸುವರು. ಮೂರನೇಯವನು ತಂಬೂರಿಯ ವಾದನದೊಂದಿಗೆ ಪದವನ್ನು ಹಾಡುವನು. ಹಾಡಿನ ಪ್ರತಿ ದ್ವಿಪದಿಯ ಕೊನೆಯಲ್ಲಿ 'ಗೋವಿಂದ, ಗೋವಿಂದ'

ಎಂದು ಹೇಳುವರು. ಇವರು ಶನಿವಾರದ ದಿನ ಭಿಕ್ಷೆಗೆ ಹೋಗುವರು. ಇವರ ಭುಜದ ಮೇಲೆ ಕಾವಡಿಗಳಿರುತ್ತವೆ. ಅದರೊಂದಿಗೆ ವಿಷ್ಣುವಿನ ವಿಗ್ರಹ, ಶಂಖ, ಸಾಲಿಗ್ರಾಮದ ಕಲ್ಲು, ರುದ್ರಾಕ್ಷಿ ಮತ್ತು ಇತರ ಪವಿತ್ರ ವಸ್ತುಗಳನ್ನು ತೆಗೆದುಕೊಂಡು ಉತ್ತಮೋತ್ತಮರಿಗೆ ಮಾರಾಟ ಮಾಡುವರು ಎಂದಿರುವರು.

ಆಂಧ್ರ ಪ್ರದೇಶದ ಇವರು ಕರ್ನಾಟಕದ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿಯೂ ಇರುವರು. ೧೯೮೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿಯ ಇವರ ಜನ ಸಂಖ್ಯೆಯು ೧೭,೭೩೨ ಇರುತ್ತದೆ. ಮಾಂಸಾಹಾರಿಗಳಾಗಿರುವ ಇವರು ದನ ಮತ್ತು ಹಂದಿಯನ್ನು ತಿನ್ನುವುದಿಲ್ಲ. ಗಂಡಸರು ಮತ್ತು ಹೆಂಗಸರು ಆಗಾಗ ಮದ್ಯವನ್ನು ಕುಡಿಯುತ್ತಾರೆ.

ಸಮುದಾಯದ ಮಟ್ಟದಲ್ಲಿ ವಿವಿಧ ಬೆಡಗುಗಳ ನಡುವೆ ಇವರಲ್ಲಿ ಮದುವೆ ನಡೆಯುತ್ತದೆ. ಸೋದರಮಾವ, ಸೋದರತ್ತೆಯ ಮಗಳೊಂದಿಗೆ ಮದುವೆಯಾಗುವ ವಾಡಿಕೆಯಿದೆ. ಗಂಡಿನ ಮನೆಯ ಮುಂದೆ ಮದುವೆಯಾಗುತ್ತದೆ. ವಿಧವಾವಿವಾಹ ಮತ್ತು ವಿಚ್ಛೇದನೆಗೆ ಅನುಮತಿ ನೀಡಲಾಗುತ್ತದೆ. ಇತ್ತೀಚೆಗೆ ಹೊಲೆಯ ದಾಸರು ಮತ್ತು ಇತರ ಸಣ್ಣ ಗುಂಪಿನೊಂದಿಗೆ ಮದುವೆ ಮಾಡಿಕೊಳ್ಳುವುದು ವಾಡಿಕೆಯಾಗುತ್ತಿದೆ. ಇವರಲ್ಲಿ ಹೆಣ್ಣಿನ ಪ್ರೌಢಾವಸ್ಥೆಯ ಆಚರಣೆ ೧೦ ರಿಂದ ೧೬ ನೆಯ ದಿನದವರೆಗೆ ನಡೆಸಲಾಗುತ್ತಿದೆ. ಸತ್ತವರನ್ನು ಸುಡುವ, ಅವಿವಾಹಿತರನ್ನು ಹೂಳುವ ಪದ್ಧತಿ ಇದ್ದು, ಹನ್ನೊಂದು ದಿನಗಳವರೆಗೆ ಮೈಲಿಗೆ ಆಚರಣೆಯಲ್ಲಿರುತ್ತದೆ.

ಸಮುದಾಯದಲ್ಲಿ ಪ್ರತ್ಯೇಕ ಕುಲಪಂಚಾಯಿತಿಯಿದ್ದು, ಗುಡೆಗಾಡು ಈ ಪಂಚಾಯತಿಯ ಮುಖ್ಯಸ್ಥನಾಗಿರುತ್ತಾನೆ. ಇವರಲ್ಲಿ ಇತ್ತೀಚೆಗೆ ಕೆಲವರು ವಿಭಿನ್ನ ವೃತ್ತಿಗಳಲ್ಲಿ ತೊಡಗಿರುವರು. ಹೆಚ್ಚಿನ ಜನ ವ್ಯವಸಾಯವನ್ನು, ದಿನಗೂಲಿಯನ್ನು ಮಾಡುತ್ತಿರುವರು. ಹನಮಂತ, ಯಲ್ಲಮ್ಮ ಇವರ ಮುಖ್ಯ ದೇವರುಗಳಾಗಿವೆ. ಸಾಂಪ್ರದಾಯಿಕ ಧಾರ್ಮಿಕ ಆಚರಣೆಗಳಲ್ಲಿ ಸಮಾಜದ ಇತರೆ ಜಾತಿಗಳೊಂದಿಗೆ ಭಾಗವಹಿಸುತ್ತಾರೆ. ಇವರು ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದಿದ್ದಾರೆ ಎಂದು ವಿವರಿಸಲಾಗಿದೆ.

ಎಂ ಎಚ್ ಆರ್ ಖಾಸ್ಮಿ ಅವರು ಬರೆದಿರುವ 'ದಾಸರಿ' ಎನ್ನುವ ಲೇಖನದಲ್ಲಿ ಹೀಗೆ ಹೇಳಲಾಗಿದೆ. "ದಾಸರಿಗಳು, ಕರ್ನಾಟಕ ಹಾಗೂ ಆಂಧ್ರ ಪ್ರದೇಶದ ಗಡಿ ಭಾಗಗಳಲ್ಲಿ ಕಾಣಸಿಗುತ್ತಾರೆ. ಇವರನ್ನು ಗಂಗೆಮಕ್ಕಳು, ಪರಿವಾರದವರು ಎಂದೂ ಕರೆಯುತ್ತಾರೆ. ಇವರು ತೆಲಗು, ಕನ್ನಡ ಮಾತನಾಡಿ, ಕನ್ನಡ ಲಿಪಿಯನ್ನು ಬಳಸುತ್ತಾರೆ. ಇವರಲ್ಲಿ ಕೆಲವು ಒಳಬಾಂಧವ್ಯದ ಪಂಗಡಗಳಿವೆ. ಅವುಗಳನ್ನು ವೃತ್ತಿಗನುಸಾರ ಮಾಡಲಾಗಿದೆ. ಅವೆಂದರೆ ಸುನಿವ, ಶಂಖು, ನಾಮಧಾರಿ, ಧರ್ಮ, ಮುಂದಾಳ್ರು, ಪಲ್, ಉಮ್ಮೆತ್ತು, ಇತ್ಯಾದಿ ಸೋದರ ಸಂಬಂಧಿ ವಿವಾಹಗಳು ಇವರಲ್ಲಿ ಕಂಡು ಬರುತ್ತದೆ. ಸಾಂಪ್ರದಾಯಿಕವಾಗಿ ವಧುದಕ್ಷಿಣೆಯನ್ನು ಕೊಡಬೇಕು. ಮರುವಿವಾಹಗಳಿಗೆ

ಈ ಸಮಾಜದಲ್ಲಿ ಅವಕಾಶವಿದೆ. ತಂದೆಯ ನಂತರ ಹಿರಿಯ ಮಗ ಮನೆಯ ಯಜಮಾನನಾಗುತ್ತಾನೆ. ಜನನದ ಸೂತಕವು ಹನ್ನೊಂದು ದಿನಗಳವರೆಗೆ ಇರುತ್ತದೆ. ನಂತರ ನಾಮಕರಣ ಶಾಸ್ತ್ರವಿರುತ್ತದೆ. ಮದುವೆಯು ವರನ ಮನೆಯಲ್ಲಿ ನಡೆಯುತ್ತದೆ. ಶವವನ್ನು ಹೂಳುತ್ತಾರೆ. ಹಾಗೂ ಸಾವಿನ ಸೂತಕವು ಹನ್ನೊಂದು ದಿನಗಳವರೆಗೆ ಇರುತ್ತದೆ ಎನ್ನಲಾಗಿದೆ.

ಈ ಸಮುದಾಯದಲ್ಲಿ ಸಾಂಪ್ರದಾಯಿಕ ಜಾತಿ ಸಮಿತಿ ಇದೆ. ಅದನ್ನು 'ಕಟ್ಟೆ ಮನೆ' ಎಂದು ಕರೆಯಲಾಗುತ್ತದೆ. ೧೫ ರಿಂದ ೨೦ ಸದಸ್ಯರ ಮುಖ್ಯಸ್ಥನನ್ನು 'ದೊಡ್ಡ ಯಜಮಾನ' ಎಂದು ಕರೆಯುತ್ತಾರೆ. ಸಮುದಾಯದ ಜನ ಧ್ವನಿಮತದಿಂದ ಈ ದೊಡ್ಡ ಮನುಷ್ಯನನ್ನು ಆಯ್ಕೆ ಮಾಡುತ್ತಾರೆ. ಈತ ಸಮುದಾಯದೊಳಗಿನ ಕಲಹಗಳನ್ನು ವಿಚಾರಿಸುವ, ಅಪರಾಧ ಮಾಡಿದವರಿಗೆ ಬಹಿಷ್ಕಾರ ಹಾಕುವ ಹಾಗೂ ಹಣಕಾಸಿನ ದಂಡ ಹಾಕುವ ಅಲ್ಲದೆ ಕಳ್ಳರಿಗೆ ಶಿಕ್ಷೆ ವಿಧಿಸುವ ಅಧಿಕಾರ ಹೊಂದಿರುತ್ತಾನೆ ಎನ್ನಲಾಗಿದೆ.

ಇವರ ಸಾಂಪ್ರದಾಯಿಕ ವೃತ್ತಿ ಭಿಕ್ಷೆ ಬೇಡುವುದು. ಹೊಲೆಯ, ಮಾದಿಗ, ಹಾಗೂ ಜಾಂಬುವ ಜಾತಿಯವರಿಗೆ ಪುರೋಹಿತರಾಗಿಯೂ ಕೆಲಸ ಮಾಡುತ್ತಾರೆ. ಕೆಲವರು ವ್ಯವಸಾಯದ ಕೂಲಿಗಳಾಗಿಯೂ ದುಡಿಯುತ್ತಾರೆ. ಇವರು ಪೂಜಿಸುವ ದೇವರುಗಳು ಆಂಜನೇಯ ಹಾಗೂ ನರಸಿಂಹ. ಇವರು ಆಧುನಿಕ ಸಾಮಾಜಿಕ ವ್ಯವಸ್ಥೆಗಳ ಕಾರ್ಯ ಕ್ರಮಗಳನ್ನು ಉಪಯೋಗಿಸಿಕೊಂಡು ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ. ಆದರೆ ಇವರ ಆರ್ಥಿಕ, ಶೈಕ್ಷಣಿಕ, ಪರಿಸ್ಥಿತಿಯು ಸುಧಾರಣೆಯಾಗಬೇಕಾದ ಅಗತ್ಯವಿದೆ ಎಂದು ವಿವರಿಸಲಾಗಿದೆ.

ಖಾಸ್ಮಿ ಅವರ ಮತ್ತೊಂದು ಲೇಖನ "ಹೊಲೆಯ ದಾಸರಿ". ಇದರಲ್ಲಿ 'ಗುಲಬರ್ಗಾ ಜಿಲ್ಲೆಯಲ್ಲಿ ಕೇಂದ್ರೀಕೃತಗೊಂಡಿರುವ ಹೊಲೆಯ ದಾಸರಿಗಳು ಕರ್ನಾಟಕದಲ್ಲಿ ೧೯೮೧ ಜನಗಣತಿಯ ಪ್ರಕಾರ ೨೮೭೨ ಇರುವರು. ವೈಷ್ಣವ ಭಿಕ್ಷುಕರಾಗಿರುವ ಇವರು, ಭಿಕ್ಷೆಗೆ ಹೊರಟಾಗ ತಲೆಗೆ ರುಮಾಲು, ಭುಜದಲ್ಲಿ ಚೀಲ, ಜಾಗಟೆ ಮತ್ತು ಶಂಖಗಳನ್ನು ಜೊತೆಯಲ್ಲಿ ಒಯ್ಯುತ್ತಾರೆ.

ಹೊಲೆಯ ದಾಸರಿಗಳು ಮಾಂಸಾಹಾರಿಗಳಾಗಿದ್ದು, ದನ ಮತ್ತು ಹಂದಿಯನ್ನು ಸೇವಿಸುವುದಿಲ್ಲ. ಸಾಂದರ್ಭಿಕವಾಗಿ ಮದ್ಯಸೇವನೆ ಮಾಡುತ್ತಾರೆ. ಸ್ವಗೋತ್ರ ಪಂಗಡ ದವರಾದ ಇವರಲ್ಲಿ ಎಂಟರಿಂದ ಹತ್ತು ಬೆಡಗುಗಳಿವೆ. ಅವುಗಳಲ್ಲಿ ಮುತ್ತೆನವರು, ಸಕ್ರೆನವರು, ಅಕ್ಕಿ ಮತ್ತು ಕೋಣಿ. ಒಂದೇ ಬೆಡಗಿನಲ್ಲಿ ವಿವಾಹ ಏರ್ಪಡುವುದಿಲ್ಲ. ಇದು ಸಹೋದರ ಸಂಬಂಧವಾಗುತ್ತದೆ.

ಸಮುದಾಯದ ಮಟ್ಟದಲ್ಲಿ ಒಳಬಾಂಧವ್ಯ ಹಾಗೂ ಕುಲದ ಮಟ್ಟದಲ್ಲಿ ಹೊರ ಬಾಂಧವ್ಯ ಇವರ ವಿವಾಹ ಪದ್ಧತಿಯಾಗಿದೆ. ವಧುದಕ್ಷಿಣೆಯಾಗಿ ಮದುವೆಗೆ ಮುನ್ನ ಇಪ್ಪತ್ತು ರೂಪಾಯಿಗಳನ್ನು ಕೊಡುತ್ತಾರೆ. ಹೆಂಗಸರು ವ್ಯವಸಾಯ, ಉರುವಲು

ಸಂಗ್ರಹಣೆ, ಪಶುಸಂಗೋಪನೆ, ಮತ್ತಿತರ ಕೆಲಸಗಳಲ್ಲಿ, ಸಕ್ರೀಯವಾಗಿ ಪಾಲ್ಗೊಳ್ಳುತ್ತಾರೆ. ಹೆರಿಗೆಯ ಮುಂಚಿನ ಆಚರಣೆ–'ಕುಪ್ಪಸ' ಗರ್ಭಿಣಿಯಾದ ಐದನೇ ತಿಂಗಳಲ್ಲಿ ಮಾಡುತ್ತಾರೆ. ಹುಡುಗಿಯರು ಋತುಮತಿಯಾದಾಗ 'ಮೈನೆರೆಯುವುದು' ಎಂದು ಆಚರಿಸಲಾಗುತ್ತದೆ. ಅದನ್ನು ಹನ್ನೊಂದು ದಿನಗಳ ಸೂತಕ ಕಳೆದ ನಂತರ ಮಾಡುತ್ತಾರೆ.

ಹೊಲೆಯ ದಾಸರಿಗಳಲ್ಲಿ ಕುಲಪಂಚಾಯತಿಯ ಕಟ್ಟೆಮನೆಯಿರುವುದು. ಅದರ ಮುಖ್ಯಸ್ಥನನ್ನು ಬಾಯ್ಕರ (Baikar) ಎಂದು ಕರೆಯುತ್ತಾರೆ. ಅದು ವಂಶ ಪಾರಂಪರಿಕ ವಾಗಿ ಬಂದಿರುತ್ತದೆ. ಸಮುದಾಯದ ಕುಲಪಂಚಾಯತಿಯ ಕಾರ್ಯನಿರ್ವಹಣೆಯ ಹೊಣೆ ಅವನದಾಗಿರುತ್ತದೆ. ತಪ್ಪು ಮಾಡಿದವರಿಗೆ ಶಿಕ್ಷಿಸುವ, ದಂಡ ಹಾಕುವ ಅಧಿಕಾರವಿರುತ್ತದೆ. ಅಲ್ಲದೆ ಕೆಲವು ಸಂದರ್ಭಗಳಲ್ಲಿ ಸಮುದಾಯದ ಹಿರಿಯರು ವ್ಯಾಜ್ಯಗಳನ್ನು ಬಗೆಹರಿಸುತ್ತಾರೆ.

ಹೊಲೆಯ ಮತ್ತು ಮಾದಿಗರಿಗೆ ಧಾರ್ಮಿಕ ಕಾರ್ಯ ಮಾಡಲು ಇವರು ಪೂಜಾರಿಗಳು ಎಂದು ತಿಳಿಯುತ್ತದೆ. ಕೆಲವರು ಈಗಲೂ ಅದರಲ್ಲೇ ಮುಂದುವರಿಯು ತ್ತಿದ್ದಾರೆ. ಇವರಲ್ಲಿ ಬಹುಮಂದಿ ದಿನಗೂಲಿ ನೌಕರರು ಇದ್ದಾರೆ. ವೆಂಕಟರಮಣ, ವಿಷ್ಣು, ಹನುಮಂತ ಹಾಗೂ ಅಂಬಾಭವಾನಿ ದೇವತೆಗಳನ್ನು ಪೂಜಿಸುತ್ತಾರೆ. ಬ್ರಾಹ್ಮಣ ಅರ್ಚಕರು ಧಾರ್ಮಿಕ ವಿಧಿಗಳನ್ನು ನಡೆಸುವರು. ವಿದ್ಯಾಭ್ಯಾಸವನ್ನು ಹುಡುಗರಿಗೆ ಕೊಡುವುದನ್ನು ಒಪ್ಪುತ್ತಾರೆ. ಇವರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ ಎಂದೆನ್ನಲಾಗಿದೆ.

ಮುಂಬಯಿ ಗ್ಯಾಝೆಟೀಯರ್

ಮುಂಬಯಿ ಇಲಾಖೆಗೆ (ಉತ್ತರ ಕರ್ನಾಟಕದ, ಬೆಳಗಾವಿ, ವಿಜಾಪೂರ, ಧಾರವಾಡ ಮತ್ತು ಕಾರವಾರ ಜಿಲ್ಲೆಗಳಿಗೆ ಸಂಬಂಧಿಸಿದ) ಸೇರಿದ ಗ್ಯಾಝೆಟೀಯರ್‌ನಲ್ಲಿ 'ದಾಸರು' ಗಳನ್ನು ಎರಡು ಗುಂಪುಗಳಲ್ಲಿ ವಿಭಾಗಿಸಲಾಗಿದೆ. ಒಂದು ಗುಡಿಗಳ ಪರಿಚಾರಕರು, ಮತ್ತೊಂದು ತಿರುಕರು. 'ಗುಡಿಗಳ ಪರಿಚಾರಕರು' ಭಾಗದ ದಾಸರನ್ನು ಕುರಿತು "ಇವರು ಕಾನಡಾ (ಕಾರವಾರ) ಹೊರತಾಗಿ ಮೂರು ಜಿಲ್ಲೆಗಳಲ್ಲಿ ವಾಸಿಸುವರೆಂದೂ; ಇವರಲ್ಲಿ ಗೊಲ್ಲದಾಸರು, ವೊಕ್ಕಲದಾಸರು, ತೆಲಗುದಾಸರು, ಗಂಡುದಾಸರು, ತಿರುಮಲ ದಾಸರು, ಬ್ಯಾಡದಾಸರು, ಹೊಲೆದಾಸರು ಎಂದು ವರ್ಗಗಳುಂಟೆಂದೂ; ಬ್ಯಾಡದಾಸರು ಬೇಡರ ಕುಲದವರು, ಹೊಲೆದಾಸರು ಹೊಲೆಯರು, ತೆಲಗುದಾಸರು ತೆಲಗುದೇಶದಿಂದ ಬಂದ ಕಬ್ಬಲಿಗೇರ ಕುಲದವರು, ಉಳಿದ ಕನ್ನಡ ದಾಸರು ಸಹ ಕಬ್ಬಲಿಗೇರ ಕುಲದವ ರೆಂದೂ; ಇವರೆಲ್ಲರೂ ವಿಷ್ಣು, ಹನುಮಂತ ದೇವರನ್ನು ಪೂಜಿಸುವರೆಂದಿದೆ.

ಧಾರವಾಡ ಜಿಲ್ಲೆಯಲ್ಲಿ ಗೊಲ್ಲ ದಾಸರೆಂಬವರು ವೊಕ್ಕಲುತನದಿಂದ ಜೀವಿಸುವರು. ಬ್ಯಾಡ ದಾಸರು ದೀವಿಗೆ, ಜಾಗಟೆ, ಶಂಖಗಳನ್ನು ತಕ್ಕೊಂಡು ಮನೆ ಮನೆ ಭಿಕ್ಷೆ ಬೇಡುವರು. ಹೊಲೆದಾಸರು ಗೋಪಾಳ ಬುಟ್ಟಿಯನ್ನು ತಕ್ಕೊಂಡು ದೇವರ ಪದಗಳ ಹಾಡುತ್ತ ಭಿಕ್ಷೆ ಬೇಡುವರು. ತೆಲಗು ದಾಸರು ತಮ್ಮ ಹೆಂಗಸರಿಗೆ ಗಾಯನ ನರ್ತನ

ಕಲಿಸಿ, ರಾತ್ರಿಯಲ್ಲಿ ಬೈಲೊಳಗೆ ಆಟ ಮಾಡುವರು. ಈ ಹೆಂಗಸರ ಹಾದರದಿಂದ ಅವರಿಗೆ ವೊಳಿತಾಗಿ ಲಾಭವಾಗುತ್ತದೆ. ಗಂಡು ದಾಸರು ಸಹ ಇದೇ ಪ್ರಕಾರ ಆಟ ಮಾಡುವರು. ಆದರೆ ಅವರು ತಮ್ಮ ಹೆಂಗಸರನ್ನು ಬೈಲಿಗೆ ತರದೆ, ಗಂಡು ಹುಡುಗರಿಗೆ ಆಟದಲ್ಲಿ ಹೆಣ್ಣು ಸೋಗು ಹಾಕುವರು. ಬ್ಯಾಡ ದಾಸರೂ ಹೊಲೆ ದಾಸರೂ ಊರ ಹನುಮಂತನ ಪೂಜೆಯ ಕಾಲಕ್ಕೆ ಗುಡಿಗೆ ಹೋಗಿ ತಂಬೂರಿಯ ಸಂಗಡ ಹಾಡುವರು. ದಾಸರಲ್ಲಿ ವೊಕ್ಕಲತನದವರೂ ಆಟ ಮಾಡುವವರೂ ಮಾತ್ರ ಮಕ್ಕಳನ್ನು ಕೆಲವು ದಿವಸ ಶಾಲೆಗೆ ಕಳಿಸುವರು: ಅವರು ತಕ್ಕ ಮಟ್ಟಿಗೆ ವೊಳಿತಾಗಿ ಇದ್ದಾರೆ. ಉಳಿದವರೆಲ್ಲ ಬಡವರು; ತಿರಿಕೆಯಿಂದ ಜೀವಿಸುವರು ಎನ್ನಲಾಗಿದೆ.

'ತಿರುಕರು' ಭಾಗದ ದಾಸರನ್ನು ಕುರಿತು ಬರೆಯುತ್ತ "ಈ ದಾಸರು ಕೂಡ ಈ ನಾಲ್ಕೂ ಜಿಲ್ಲೆಗಳಲ್ಲಿ ಇರುತ್ತಾರೆಂದೂ ಮೂಲದಲ್ಲಿ ಇವರೂ ಕಬ್ಬಲಿಗೇರ ಕುಲದವರೆಂದೂ ಇವರಲ್ಲಿ ತಿರುಮಲದಾಸರು – ಗಂಡು ದಾಸರೆಂದು ಎರಡು ಒಳಭೇದಗಳಿವೆಯೆಂದೂ ತಿರುಮಲದಾಸರು ಕನ್ನಡಿಗರು – ಗಂಡು ದಾಸರು ತೆಲುಗರೆಂದೂ' ಹೇಳಲಾಗಿದೆ. ತಿರುಮಲ ದಾಸರು ರಾತ್ರಿಯಲ್ಲಿ ನಾಟಕದ ಹಾಗೆ ಆಟ ಮಾಡುವರು. ಇವರು ಹೆಂಗಸರು ಪಾತರದವರ ಹಾಗೆ ನರ್ತನ ಗಾಯನ ಕಲಿತು ಬೆಲೆಯುಳ್ಳ ವಸ್ತ್ರಗಳನ್ನೂ ಅಲಂಕಾರಗಳನ್ನೂ ಧರಿಸಿ ಜಾರಕರ್ಮ ಮಾಡುವರು. ಇವರ ಗಂಡಸರ ಉಡಿಗೆಗಳು ತಕ್ಕಮಟ್ಟಿಗೆ ನಿರ್ಮಲವಿರುತ್ತವೆ. ಗಂಡು ದಾಸರಾದರೂ ರಾತ್ರಿಯಲ್ಲಿ ಆಟ ಮಾಡುವರು: ಆದರೆ ಅದರಲ್ಲಿ ಗಂಡು ಹುಡುಗರಿಗೆ ಹೆಣ್ಣು ಸೋಗು ಹಾಕುವರು; ಹೆಂಗಸರು ಆಟದಲ್ಲಿ ಬರುವುದಿಲ್ಲ. ಆದರೆ ತೆಲಗು ದಾಸರಲ್ಲಿ ಬಹು ಜನರು ಮೂರು ನಾಮ ಹಚ್ಚಿಕೊಂಡು ಕರದೀಪ, ಶಂಖ, ಜಾಗಟೆ, ಇವುಗಳನ್ನು ತಕ್ಕೊಂಡು ವೆಂಕಟರಮಣನ ಹೆಸರು ನುಡಿದು ಮನೆ ಮನೆಗೆ ಭಿಕ್ಷೆ ಬೇಡುತ್ತ ತಿರುಗುವರು. ದಾಸರ ಮುಖ್ಯ ಕುಲದೇವತೆಗಳು ವೆಂಕಟರಮಣ, ಹನುಮಂತ, ಕದರಮಂಡಗಿಯಲ್ಲಿಯೂ ಹಂಸನೂರ ಲ್ಲಿಯೂ ಇರುವ ಹನುಮಂತ ದೇವರಿಗೆ ಇವರು ಬಹಳ ಭಕ್ತಿಯಿಂದ ನಡೆದುಕೊಳ್ಳುವರು. ಇವರು ಸತ್ತ ಮನುಷ್ಯನ ಭುಜಗಳಿಗೆ ಶಂಖ ಚಕ್ರಗಳನ್ನು ಕಟ್ಟಿ ಸ್ಮಶಾನದಲ್ಲಿ ತಾಳಿಯ ಮೇಲೆ ಹೆಣವನ್ನು ಹಾಕುವಾಗ ಅವುಗಳನ್ನು ಬಿಚ್ಚಿಕೊಳ್ಳುವರು. ಹತ್ತು ದಿವಸ ಸೂತಕ ಹಿಡಿದು ಐದನೇ ಆರನೇ ದಿವಸ ಆ ಶಂಖ ಚಕ್ರಗಳ ಪೂಜೆ ಮಾಡುವರು" ಎನ್ನಲಾಗಿದೆ.

'ದಂಡಿಗದಾಸರು'–ಕುರಿತು ಬರೆಯುತ್ತ 'ವಿಜಾಪೂರ ಜಿಲ್ಲೆಯಲ್ಲಿ ಇರುವ ಇವರೂ ಮೂಲದಲ್ಲಿ ಕಬ್ಬಲಿಗರ ಕುಲದವರೆಂದೂ ಹನುಮಂತ, ವೆಂಕಟರಮಣ ದೇವರುಗಳಿಗೆ ನಡೆದುಕೊಳ್ಳುವವರೆಂದೂ ಇವರ ಮುಖ್ಯ ಉಪಜೀವನ ಭಿಕ್ಷೆ ಬೇಡುವುದೆಂದೂ ಹೇಳಲಾಗಿದೆ. ದಂಡಿಗ ದಾಸರಿಗೆ ಎಲ್ಲ ಮಕ್ಕಳು ಹೆಣ್ಣೇ ಹುಟ್ಟಿದರೆ, ಅವರಲ್ಲಿ ವೊಬ್ಬಳ ಲಗ್ನ ಮಾಡದೇ ಬಸವಿಯನ್ನು ಮಾಡುತ್ತಾರೆ. ಆಕೆ ಜಾರಕರ್ಮದಿಂದ ಜೀವಿಸುವಳು. ದಂಡಿಗ ದಾಸರು ಹೆಗಲಿಗೆ ಗೋಪಾಳ ಬುಟ್ಟಿಯನ್ನು ತೂಗಹಾಕಿಕೊಂಡು ಭಿಕ್ಷೆ

ಬೇಡುತ್ತಾರೆ. ಬಾಗಿಲಿನಲ್ಲಿ "ವೆಂಕಟರಮಣ ಗೋವಿಂದಾ"ಯೆಂದು ಕೂಗಿ ದೇವರ ಪದಗಳನ್ನು ಹಾಡುತ್ತ ನಿಲ್ಲುವರು. ಇವರಲ್ಲಿ ಕೆಲವರು ವೊಕ್ಕಲುತನ ಮಾಡುವರು, ಕೆಲವರು ಕೂಲಿಗೆ ಹೋಗುವರು. ಕೆಲವರು ಉರುಟ ಬಟ್ಟೆಗಳನ್ನು ನೆಯ್ಯುವರು. ಇವರ ಮಕ್ಕಳು ಶಾಲೆಗೆ ಹೋಗುತ್ತಾರೆ ಎಂದು ಹೇಳಲಾಗಿದೆ.

'ಹೊಲೆದಾಸರು' – ಕುರಿತು ಬರೆಯುತ್ತ "ಇವರು ಹೊಲೆ ಜೋಗತಿಗಳ ಹೊಟ್ಟೆಯವರು. ಆ ಜೊಗತಿಗಳು ಯಲ್ಲಮ್ಮನ ಜೋಗತಿಗಳಂತೆ ಬುಟ್ಟಿಗೆ ಸೀರೆ ಸುತ್ತಿ, ಅದರೊಳಗೆ ಮರಗವ್ವನ ಮುಖವನ್ನಿಟ್ಟುಕೊಂಡು ಭಿಕ್ಷೆ ಬೇಡುತ್ತಾರೆ. ಅವರಿಗೆ ಲಗ್ನವಿಲ್ಲ. ಜಾರಕರ್ಮದಿಂದ ಅವರು ಜೀವಿಸುವರು. ಹೊಲೆದಾಸರು ವೆಂಕಟರಮಣನ ಇಲ್ಲವೆ ಹನುಮಂತನ ದಾಸರೆಂದು ಹೇಳಿ ಭಿಕ್ಷೆಯಿಂದ ಜೀವಿಸುವರು. ಇವರ ಉಡಿಗೆ, ಆಹಾರ, ಆಚಾರ, ನಡಾವಳಿ ಮುಂತಾದವುಗಳೆಲ್ಲ ಹೊಲೆಯರಂತೆ. ಇವರನ್ನು ಉತ್ತಮ ಕುಲದವರು ಮುಟ್ಟಿಸಿಕೊಳ್ಳುವುದಿಲ್ಲ. ಇವರು ಬಾದಾಮಿ ತಾಲೂಕಿನಲ್ಲಿ ಇರುತ್ತಾರೆ. ಎಂದು ಬರೆಯಲಾಗಿದೆ.

ಕನ್ನಡದಲ್ಲಿ ಈ ಸಮುದಾಯವನ್ನೇ ಕೇಂದ್ರವನ್ನಾಗಿಟ್ಟುಕೊಂಡು ಬರೆದ ಒಂದೇ ಒಂದು ಪ್ರಬಂಧವೆಂದರೆ, ಬಿ ವಿ ಗುಂಜೆಟ್ಟಿ ಅವರ "ದಾಸರು" ಎನ್ನುವ ಪ್ರಬಂಧ. ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠದಿಂದ ಪ್ರಕಾಶಿತಗೊಂಡಿರುವ "ಜಾನಪದ ಸಾಹಿತ್ಯದರ್ಶನ" ಭಾಗ–೬ ರಲ್ಲಿ ಈ ಪ್ರಬಂಧ ಪ್ರಕಟಗೊಂಡಿದೆ.

ಇದರಲ್ಲಿ 'ದಾಸರು'ಗಳ ಕುರಿತು ಬರೆಯುತ್ತ" ದಾಸರಿ ಎನ್ನುವದು ಯಾವುದೇ ಒಂದು ವಿಶಿಷ್ಟ ಜಾತಿಯನ್ನು ಸೂಚಿಸದೆ ಬ್ರಾಹ್ಮಣೇತರ ಯಾವುದೇ ಜಾತಿಯವರು ದಾಸರಿಗಳಾಗಬಹುದು. ಬಣಜಿಗ, ಕುರುಬ, ಒಕ್ಕಲಿಗ, ಸಾಲೆ, ತಿಗಳ, ಗೊಲ್ಲ, ಬೇಡ, ಬೆಸ್ತ, ಒಡ್ಡ, ಹೊಲೆಯ ಮಾದಿಗ ಮೊದಲಾದ ಜಾತಿಗಳಿಂದ ಬಂದವರೂ ದಾಸರಿಗಳಾದಂತಿದೆ. ಇವರು ಕೀಳುಕುಲದವರು, ಭಿಕ್ಷೆಯನ್ನು ಬೇಡಿ ಉಪಜೀವಿಸುವವರು. ಹಾಡುವುದು–ಬಾರಿಸುವುದು. ಆದಿ ಕಲಾನಿಪುಣರು ಆಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಮೂಲದ ಬಗೆಗೆ ಆಖ್ಯಾಯಿಕೆಗಳಲ್ಲಿಯ ಸತ್ಯಾಂಶ ಎಷ್ಟೊ ತಿಳಿಯದು. ಆದರೂ ದೇವರ ಸೇವಕಾಕಾರ್ಯೈವ ಇವರು ದಾಸರಿಗಳು ಎಂದು ಖ್ಯಾತರಾಗಿರಲು ಸಾಕು" ಎಂದಿರುವರು.

ದಾಸರ ವೃತ್ತಿ ಕುರಿತು ಬರೆಯುತ್ತ : ಗಲ್ಲದಾಸರು ಒಕ್ಕಲುತನವನ್ನು ಮಾಡಿ ಉಪಜೀವಿಸುವರು. ಬ್ಯಾಡದಾಸರು ದೀವಿಗೆ, ಘಾಂಗಟಿ, ಶಂಖಗಳನ್ನು ಹೊಂದಿದ್ದು ಭಿಕ್ಷೆಯನ್ನು ಬೇಡಿ ಉಪಜೀವಿಸುವರು. ಹೊಲೆದಾಸರು ಗೋಪಾಳ ಬುಟ್ಟಿಯನ್ನು ಹಿಡಿದುಕೊಂಡು ದೇವರಪದಗಳನ್ನು ಹಾಡುತ್ತ ಭಿಕ್ಷೆ ಎತ್ತುವರು. ತೆಲುಗುದಾಸರು ತಮ್ಮ ಹೆಂಗಸರಿಗೆ ಗಾಯನ–ನರ್ತನಾದಿಗಳನ್ನು ಕಲಿಸಿ, ರಾತ್ರಿ ಬಯಲಿನಲ್ಲಿ ಆಟಮಾಡಿಸಿ ಆದಾಯ ಪಡೆದು ಜೀವಿಸುವರು. ಗಂಡುದಾಸರು ತೆಲುಗುದಾಸರಂತೆಯೇ ಆಟವಾಡುವರಾದರೂ ಹೆಂಗಸರನ್ನು ಬಣ್ಣಬಳಿದು ಬಯಲಿಗೆ ತರದೆ, ಗಂಡು ಹುಡುಗರಿಗೆ

ಹೆಣ್ಣು ಸೋಗು ಹಾಕಿ ಆಟಮಾಡಿ ಆದಾಯ ಪಡೆಯುವರು. ಬ್ಯಾಡದಾಸ ಮತ್ತು ಹೊಲೆದಾಸರು ಊರಲ್ಲಿಯ ಹನಮಂತದೇವರ ಪೂಜೆಯಕಾಲಕ್ಕೆ ಗುಡಿಗೆ ಹೋಗಿ ತಂಬೂರಿಯನ್ನು ಬಾರಿಸುತ್ತ ಹಾಡುವರು. ತಿರುಮಲದಾಸರು ರಾತ್ರಿ ಆಟ ಮಾಡುವರು. ಇವರ ಹೆಂಗಸರು ಪಾತರದವರ ಹಾಗೆ ನರ್ತನ-ಗಾಯನಾದಿಗಳನ್ನು ಕಲಿತು ಬೆಲೆಯುಳ್ಳ ವಸ್ತ್ರ ಅಲಂಕಾರಗಳನ್ನು ಧರಿಸಿ ಜಾರಕರ್ಮವನ್ನು ಮಾಡುವರು. ತೆಲುಗದಾಸರು ಮೂರು ನಾಮಗಳನ್ನು ಹಣೆಗೆ ಹಚ್ಚಿಕೊಂಡು ಕರದೀಪ, ಶಂಖ, ಝಾಂಗಟೆ ತಕ್ಕೊಂಡು ವೆಂಕಟರಮಣನ ಹೆಸರು ನುಡಿಯುತ್ತಾ ಮನೆ ಮನೆ ಸುತ್ತಿ ಭಿಕ್ಷೆಯನ್ನು ಎತ್ತುವರು. ದಂಡಿಗೆ ದಾಸರು ಕಬ್ಬಲಿಗೇರ ಕುಲದವರು. ಇವರಲ್ಲಿ ಕೆಲವರು ಊರ ಹನುಮಂತ ದೇವರ ಪೂಜಾರಿಗಳಾಗಿರುತ್ತಾರೆ. ಇವರ ಮುಖ್ಯ ಕಸುಬು ಭಿಕ್ಷೆಯನ್ನು ಬೇಡುವುದಾಗಿದೆ. ದಂಡಿಗೆದಾಸರು ಹೆಗಲಿಗೆ ಗೋಪಾಳ ಬುಟ್ಟಿಯನ್ನು ತೂಗುಹಾಕಿಕೊಂಡು 'ವೆಂಕಟರಮಣ ಗೋವಿಂದ ಗೋವಿಂದ' ಎಂದು ಕೂಗಿ ಭಿಕ್ಷೆಯನ್ನು ಪಡೆಯುವುದುಂಟು. ದಂಡಿಗೆ ದಾಸರಿಗೆ ಎಲ್ಲಾ ಹೆಣ್ಣೇ ಹುಟ್ಟಿದರೆ ಅವರಲ್ಲಿ ಒಬ'ಳ ಲಗ್ನವನ್ನು ಮಾಡದೆ 'ಬಸವಿ' ಎಂದು ಬಿಡುವರು. ಅವಳು ಜಾರಕರ್ಮಮಾಡಿ ಜೀವಿಸುವುದುಂಟು. ಹೊಲೆದಾಸರಲ್ಲಿ ಕೆಲವರು ಬ್ಯಾಡದಾಸರನ್ನು ಅನುಸರಿಸುತ್ತಿದ್ದರೂ ಬಹುಸಂಖ್ಯೆಯವರು ಯಲ್ಲಮ್ಮನ ಜೋಗತಿಗಳಂತೆ ಬುಟ್ಟಿಗೆ ಸೀರೆ ಸುತ್ತಿ ಅದರೊಳಗೆ ಮರಗವ್ವನ ಮುಖವಿಟ್ಟು ಭಿಕ್ಷೆ ಬೇಡುವರು. ಇವರಿಗೆ ಲಗ್ನವಿಲ್ಲ. ಹನುಮಂತ ಹಾಗೂ ವೆಂಕಟರಮಣನ ದಾಸರೆಂದು ಭಿಕ್ಷೆ ಎತ್ತುವರು. ದಾಸರಿಗಳೆಲ್ಲ ವೈಷ್ಣವರು. ವೈಷ್ಣವ ಗುರುವಿನಿಂದ ಮುದ್ರೆಯೊತ್ತಿಸಿ ಕೊಂಡಾಗ ಮಾತ್ರ ಅವರಿಗೆ ಸಮಾಜದಲ್ಲಿ ದಾಸರಿಯೆಂದು ಪ್ರವೇಶಿಸಲು ಅವಕಾಶ ವಾಗುತ್ತದೆ. ದಾಸರಿಯವರು ಮನೆ ಮನೆ ಭಿಕ್ಷೆ ಬೇಡಿ ಬದುಕುತ್ತಾನೆ. ದಾಸರಿಗೆ, ತನ್ನ ಬರವನ್ನು ಸೂಚಿಸಲು ಶಂಖ, ನಡೆದಾಗ ಬಾರಿಸುವ ಝಾಂಗಟೆ, ಎತ್ತರವಾದ ಲೋಹದ ದೀಪ, ಅದಕ್ಕೆ ಎಣ್ಣೆ ಹಾಕುವ ಪರಟೆ, ಹೆಗಲಿಗೆ ನೇತುಬಿಟ್ಟ ತಾಮ್ರ ಅಥವಾ ಹಿತ್ತಾಳೆಯ ಪಾತ್ರೆ ಹೀಗೆ, ಐದು ಲಾಂಛನಗಳಿರುತ್ತವೆ. ಕೊರಳಲ್ಲಿ ಚಿಕ್ಕದೊಂದು ಲೋಹದ ಮೂರ್ತಿ ಇರುತ್ತದೆ- ಎಂದು ಹೇಳಲಾಗಿದೆ.

ಬಿ ವಿ ಗುಂಜೆಟ್ಟಿ ಅವರ ಪ್ರಬಂಧದ ಉಳಿದೆಲ್ಲ ಭಾಗವು ಮುಖ್ಯವಾಗಿ ಈ ಮೇಲಿನ ಅನಂತ ಕೃಷ್ಣ ಅಯ್ಯರ, ಥರ್ಸ್ಟನ್ ಮತ್ತು ಬಾಂಬೆ ಗೆಝೆಟೀಯರ್‌ನ್ನು ಅವಲಂಬಿಸಿ ಬರೆಯಲ್ಪಟ್ಟಿದೆ.

ಕರ್ನಾಟಕ ಜನಪದ ರಂಗಭೂಮಿ ಕುರಿತು ಬರೆಯುವಾಗ, ದಾಸರಾಟದ ಕುರಿತು ವಿವೇಚಿಸುವಾಗ ದಾಸರ ಕುರಿತು ಪ್ರಾಸಂಗಿಕವಾಗಿ ಬರೆದಿರುವ ಎಂ ಟಿ ಧೂಪದ, ಎಚ್ ಕೆ ರಂಗನಾಥ, ಎಂ ಎಸ್ ಸುಂಕಾಪುರ, ಬಿ ಬಿ ಹೆಂಡಿ, ಚಂದ್ರಶೇಖರ ಕಂಬಾರ, ಬೆಟಗೇರಿ ಕೃಷ್ಣಶರ್ಮ, ದೇವೇಂದ್ರಕುಮಾರ ಹಕಾರಿ, ಬಸವರಾಜ ಮಲಶೆಟ್ಟಿ, ನಿಂಗಣ್ಣ ಸಣ್ಣಕ್ಕಿ ಅವರುಗಳ ಲೇಖನ, ಗ್ರಂಥಗಳಲ್ಲಿ ಪ್ರಸ್ತಾಪಿಸಲಾಗಿದೆ. ಇದಿಷ್ಟನ್ನು ಬಿಟ್ಟರೆ ಚೆನ್ನದಾಸರ ಸಮುದಾಯದ ಕುರಿತು ಬೇರೆ ಹೆಚ್ಚಿನ ವಿವರಗಳಿಲ್ಲ.

ಕನ್ನಡ ವಿಶ್ವಕೋಶಗಳಲ್ಲಿಯೂ ಕೂಡ ಅಂಥ ಹೆಚ್ಚಿನ ವಿವರವಾದ ಮಾಹಿತಿ ಲಭ್ಯವಾಗುವುದಿಲ್ಲ. ಚಂದ್ರಶೇಖರ ಕಂಬಾರ ಅವರು ಸಂಪಾದಕರಾಗಿರುವ ಕನ್ನಡ ಜಾನಪದ ವಿಶ್ವಕೋಶದಲ್ಲಿ ದಾಸ ದೀಕ್ಷೆ ಕೊಡುವುದು, ದಾಸಪ್ಪ, ದಾಸರಾಟ ಮತ್ತು ದಾಸರಿ ಎನ್ನುವ ತಲೆಬರಹದಡಿಯಲ್ಲಿ ಸ್ವಲ್ಪ ವಿವರಣೆಯಿದೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ವಿಶ್ವಕೋಶ ಸಂಪುಟ ೯ರಲ್ಲಿ ದೊಂಬಿದಾಸರ ಕುರಿತು ವಿವರವಿದೆ. ಜಿ ವೆಂಕಟಸುಬ್ಬಯ್ಯ ಸಂಪಾದಕರಾಗಿರುವ ಕನ್ನಡ ನಿಘಂಟಿನ ನಾಲ್ಕನೆಯ ಸಂಪುಟದಲ್ಲಿ ದಾಸ, ದಾಸಪಂಥ, ದಾಸರಿ ಶಬ್ದಗಳ ಕುರಿತ ಅರ್ಥವಿವರಣೆಯಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಹಿ ಚಿ ಬೋರಲಿಂಗಯ್ಯ ಸಂಪಾದಕರಾಗಿರುವ ಕರ್ನಾಟಕ ಜನಪದ ಕಲೆಗಳ ಕೋಶದಲ್ಲಿ ದಾಸರಾಟದ ಸಂಕ್ಷಿಪ್ತ ಪರಿಚಯವಿದೆ. ಇದೇ ವಿಶ್ವವಿದ್ಯಾಲಯದಿಂದ ಪ್ರಕಾಶಿತಗೊಂಡಿರುವ ಕರ್ನಾಟಕ ರಾಜ್ಯ ಕೋಶ ೪ ಜನಸಮುದಾಯ ಸಂಪುಟದಲ್ಲಿ ದಾಸ ಸಮುದಾಯದ ಉಪಜಾತಿಗಳ ಕಿರು ಪರಿಚಯವಿದೆ. ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಕಟಿಸಿರುವ ಜಾನಪದ ಕೈಪಿಡಿಯಲ್ಲಿ ದಾಸರಾಟದ ಕುರಿತು ಸಂಕ್ಷಿಪ್ತ ವಿವರವಿದೆ.

ಇದಲ್ಲದೆ ಹಿ ಚಿ ಬೋರಲಿಂಗಯ್ಯನವರು ಬರೆದಿರುವ ದಾಸಪ್ಪ ಜೋಗಪ್ಪ ಕೃತಿಯಲ್ಲಿ ದಾಸಪ್ಪ ಜೋಗಪ್ಪ ಸಂಪ್ರದಾಯಗಳ ವಿವರಣೆಯಿದ್ದು, ದಾಸಪ್ಪಗಳ ವಿಶ್ಲೇಷಣೆಯಿದೆ. ವಿವರಣೆ ಗಮನಿಸಿದರೆ ಚೆನ್ನದಾಸರ ಸಮುದಾಯವನ್ನೇ ಹೇಳುತ್ತಿರುವಂತಿದ್ದರೂ ಅಲ್ಲಿ ದಾಸಪ್ಪಗಳ ಸಾಮಾಜಿಕ ಹಿನ್ನೆಲೆಯ ವಿವರಣೆಯ ಕೊರತೆಯಿದೆ. ಕುಲಶಾಸ್ತ್ರೀಯ ರೀತಿಯ ಸ್ವಲ್ಪವಾದರೂ ವಿವರಣೆಯಿದ್ದರೂ ಈ ಸಮುದಾಯದ ಪ್ರಮುಖ ಮಾಹಿತಿಯಾಧಾರಿತ ಪ್ರಥಮ ಕೃತಿ ಇದಾಗಿರುತ್ತಿತ್ತು. ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘದಿಂದ ಪ್ರಕಾಶಿತಗೊಂಡಿರುವ ೨೪ ಪುಟಗಳ ಕಿರುಪುಸ್ತಕ ದಾಸ ಜನಾಂಗವು ದಾಸ ಸಮುದಾಯದ ಉಪನಾಮಗಳ ಕಿರು ಮಾಹಿತಿ ನೀಡುತ್ತದೆ. ಅಲ್ಲದೆ ಕೆಲವು ಉಪಯುಕ್ತ ಮಾಹಿತಿಗಳನ್ನಾಧರಿಸಿದೆ.

ಈ ಮೇಲಿನ ಮಾಹಿತಿ ಮತ್ತು ವಿವರಣೆಯನ್ನು ಹೊರತು ಪಡಿಸಿದರೆ ಚೆನ್ನದಾಸರ ಸಮುದಾಯದ ಅಧ್ಯಯನ ಈವರೆಗೂ ನಡದೇ ಇಲ್ಲ. ಕರ್ನಾಟಕದ ಬೇರೆ, ಬೇರೆ ವಿಶ್ವವಿದ್ಯಾಲಯಗಳಲ್ಲಿ ಇಂಥ ಬೇರೆ ಬೇರೆ ಸಮುದಾಯಗಳ ಕುರಿತ ಜನಾಂಗೀಯ ಅಧ್ಯಯನಗಳು ಬೇಕಾದಷ್ಟು ನಡೆದರೂ ಚೆನ್ನದಾಸರ ಸಮುದಾಯದ ಕುರಿತ ಜನಾಂಗೀಯ ಅಧ್ಯಯನ ಈವರೆಗೂ ನಡೆದಿಲ್ಲ. ಆಧುನಿಕ ಬದುಕಿಗೆ ತಮ್ಮನ್ನು ಒಡ್ಡಿಕೊಳ್ಳುತ್ತಿರುವ ಈ ಸಮುದಾಯ ತನ್ನ ಹಲವಾರು ಸಂಪ್ರದಾಯ ಆಚರಣೆಗಳನ್ನು ಬದಲಿಸುವತ್ತ ಮುಖ ಮಾಡಿರುವ ಸಂದರ್ಭದಲ್ಲಿ ಅವರಲ್ಲಿ ಮಾಹಿತಿ ನೀಡುವ ಅನೇಕ ಹಿರಿಯ ಜೀವಗಳು ಗತಿಸಿರುವುದರಿಂದ ಜನಾಂಗಿಕ ಸಾಂಸ್ಕೃತಿಕ ಮಾಹಿತಿಯ ಕೊರತೆಯು ಉಂಟಾಗುತ್ತಿದೆ.

**ಸಮುದಾಯದ ಹೆಸರು, ಔಚಿತ್ಯ**

ಚೆನ್ನದಾಸರ ಸಮುದಾಯಕ್ಕೆ ಪ್ರಾದೇಶಿಕವಾಗಿ ಕರ್ನಾಟಕದಲ್ಲಿ ಬೇರೆ, ಬೇರೆ ಉಪನಾಮಗಳಿದ್ದರೂ ಈ ಸಮುದಾಯ ತನ್ನನ್ನು 'ಚೆನ್ನದಾಸರು' ಎಂದೇ ಗುರುತಿಸಿ ಕೊಂಡಿದೆ. ಶೈಕ್ಷಣಿಕ ಮತ್ತು ಇತರ ದಾಖಿಲಾತಿಗಳಲ್ಲಿ ಚೆನ್ನದಾಸರ ಎಂದೇ ತನ್ನ ಜಾತಿಯನ್ನು ದಾಖಲುಗೊಳ್ಳಿಸುತ್ತ ಬಂದಿದೆ. ಚೆನ್ನದಾಸರ ಪರ್ಯಾಯ ನಾಮಗಳಾದ ದಂಡಿಗೆ ದಾಸರ, ಜಂಬೂದಾಸರ, ಚಕ್ರವಾದ್ಯದಾಸರ, ಹರಿದಾಸರ, ಶಂಖದಾಸರ, ಗೋಪಾಳಬುಟ್ಟಿದಾಸರ, ನಾಮದ ದಾಸರ/ ಹೊಲೆಯದಾಸರ ದಾಸರಿ, ಮಾಲದಾಸರ/ ದಾಸರಿ, ಆಟದ ದಾಸರ, ನಾಮದ ದಾಸರ/ ದಾಸರಿ ಇತ್ಯಾದಿ ಇದ್ದರೂ ಚೆನ್ನದಾಸರ ಎಂದೇ ಕರ್ನಾಟಕದಾದ್ಯಂತ ಈ ಸಮುದಾಯ ತನನ್ನು ಗುರುತಿಸಿಕೊಳ್ಳುತ್ತ ಬಂದಿದೆ. ಆದರೆ ಪ್ರಾದೇಶಿಕ ನೆಲೆಯಲ್ಲಿ ಸ್ಥಳೀಯವಾಗಿ ಇವರನ್ನು ಸಹಜವಾಗಿ (ಸರಳೀಕೃತನುಡಿ) ದಾಸರು, ದಾಸರ, ದಾಸರಿ, ದಾಸಯ್ಯ ಎಂದೇ ಜನ ಬಳಕೆಯಲ್ಲಿ ಕರೆಯುತ್ತಾರೆ. ಈ ಸಮುದಾಯವೂ ಕೂಡ ಸಮಾಜಕ್ಕೆ ತನ್ನನ್ನು ಪರಿಚಯಿಸಿಕೊಳ್ಳುವಾಗ ಸರಳವಾಗಿ ಈ ಮೇಲಿನ ಪದಗಳನ್ನೇ ಹೇಳುತ್ತ ಬಂದಿರುವುದೂ ಇದೆ. ಇದರಿಂದಾಗಿ ಈ ಮೊದಲೆ ಪ್ರಸ್ತಾಪಿಸಿದಂತೆ ಅಧ್ಯಯನಕಾರರೆಲ್ಲ ಈ ಸಮುದಾಯವನ್ನು ದಾಸರು, ದಾಸರಿ ಎಂದೇ ದಾಖಲಿಸಿದ್ದಾರೆ.

ದಾಸರು, ದಾಸರ ಪದಪ್ರಯೋಗ ಕರ್ನಾಟಕದ್ದಾಗಿದೆ. ದಾಸರಿ ತೆಲುಗಿನ ಪ್ರಯೋಗ ವಾಗಿದ್ದರೆ, ದಾಸು, ದಾಸಯ್ಯ ತಮಿಳು ಪ್ರಯೋಗವಾಗಿದೆ. ಅಧ್ಯಯನಕಾರರನೇಕರು ಚೆನ್ನದಾಸರ ಸಮುದಾಯದೊಳಗಿನ ಪರ್ಯಾಯ ನಾಮಗಳನ್ನು ಅರ್ಥೈಸಲಾರದೆ ಉಪಜಾತಿಗಳೆಂದೂ ಭಿನ್ನಜಾತಿಗಳೆಂದೂ ಬರೆದಿರುವುದಿದೆ. ಕಾರಣ ಅಧ್ಯಯನಕಾರರಿಗಿರುವ ಕ್ಷೇತ್ರಕಾರ್ಯದ ಅಭಾವ ಮತ್ತು ಈ ಸಮುದಾಯಕ್ಕಿರುವ ಅಜ್ಞಾನ ಹಾಗೂ ತನ್ನ ಜಾತಿಗಿರುವ ಕೀಳರಿಮೆಯಿಂದ ತನ್ನ ಜಾತಿಯ ಹೆಸರನ್ನು ಮರೆಮಾಚುವತ್ತ ಜಾರಿರುವುದು ಈ ಸಮಸ್ಯೆಗೆ ಕಾರಣವಾಗಿದೆ.

ಈ ಹಿನ್ನೆಲೆಯಲ್ಲಿ ಚೆನ್ನದಾಸರ ಸಮುದಾಯದ ಪದದ ವಿವೇಚನೆ ಮಾಡಿ, ಈ ಪರ್ಯಾಯ ನಾಮಗಳ ಹಿನ್ನೆಲೆಯನ್ನು 'ದಾಸ' ಪದದ ಅರ್ಥ ವಿವರಣೆಯ ಮೂಲಕ ಪರಿಶೀಲಿಸಲಾಗಿದೆ. 'ಚೆನ್ನು' ಎನ್ನುವ ವಾದ್ಯ ನುಡಿಸುವವರು ಚೆನ್ನದಾಸರು ಎನ್ನುವವರಿದ್ದಾರೆ. ಈ ಮೊದಲು ದಾಸ ಸಮುದಾಯದ ಒಂದು ಪಂಗಡ ಈ ಚೆನ್ನು ವಾದ್ಯವನ್ನು ಭಿಕ್ಷೆಗೆಹೋದಾಗ ಹಾಗೂ ಹನುಮಂತ ದೇವರ ಪೂಜೆಯ ಸಂದರ್ಭದಲ್ಲಿ ಬಳಕೆ ಮಾಡುತ್ತಿದ್ದರೆಂದು ಹೇಳಲಾಗುತ್ತಿದೆ. ತಾಮ್ರದ ಲೋಹದಿಂದ ಮಾಡಿರುವ ಸುಮಾರು ನಾಲ್ಕು ಅಡಿಗಳಷ್ಟು ಉದ್ದವಿರುವ ಗಾಳಿವಾದ್ಯ. ಇದನ್ನು ಬಾಂಕಿ ಎಂತಲೂ ಕರೆಯುತ್ತಾರೆ. ಈಗ ಅದರ ಬಳಕೆ ಕಡಿಮೆಯಾಗಿದೆ. ಅದನ್ನು ಊದಲು ಉಸಿರನ್ನು ಗಟ್ಟಿಯಾಗಿ ಒಳಜಗ್ಗಿಕೊಂಡು ಒತ್ತುಕೊಟ್ಟು ಜೋರಾಗಿ ಊದಬೇಕು. ಅಲ್ಲದೆ ಅದಕ್ಕೆ ಸ್ವರರಂದ್ರಗಳೂ ಇರುವುದಿಲ್ಲ. ಹೀಗಾಗಿ ಅದರ ಬಳಕೆ ಅಪರೂಪ.

ಆದರೆ ಈ 'ವಾದ್ಯ'ವನ್ನು ನುಡಿಸುವವರನ್ನು 'ಚೆನ್ನದಾಸರ' ಎಂದು ಕರೆದಿರುವರು ಎನ್ನುವುದು ಸರಿಯೋ ತಪ್ಪೋ ತಿಳಿಯದು.

ಚೆನ್ನದಾಸರ ಸಮುದಾಯಕ್ಕೆ ಈ ಹೆಸರು ಬರಲು ಈ ಹೆಸರಿನ ವ್ಯಕ್ತಿಯಿಂದಾಗಿ ಎನ್ನುವುದಕ್ಕೆ ಜನಪದ ಪುರಾಣ ಮತ್ತು ಐತಿಹ್ಯಗಳ ಆಧಾರವಿದೆ.

**ಮಾದಿಗರ ಐತಿಹ್ಯ ಪ್ರಕಾರ :** ಈ ವಿಶ್ವವು ಮತ್ತು ಮನುಕುಲವು ಜಾಂಬವಂತನು ಮತ್ತು ಆತನ ಮಕ್ಕಳಿಂದ ಸೃಷ್ಟಿಯಾಗಿದೆ ಎಂಬ ವಿವರಣೆಯಿದೆ. ಈ 'ಮಾಲಾ'ಗಳು ಶಿವನ ವಾಹನವಾದ ನಂದಿ ಕಾಮಧೇನು ಮತ್ತು ಪಾರ್ವತಿಯ ಮಾಸಿದ ಬಟ್ಟೆಯಿಂದ ಹುಟ್ಟಿ ಬಂದಿರುವ 'ಚೆನ್ನಯ್ಯ' ಅವನ ವಂಶಸ್ಥರೆಂಬ ಉಲ್ಲೇಖವಿದೆ. ಚೆನ್ನಯ್ಯ ಶಿವನ ನಂದಿಯನ್ನು ಕೊಂದ ಅಪರಾಧಕ್ಕಾಗಿ ಶಿವನಿಂದ ಮಾಲಾವಂಶಸ್ಥರು ಆಕಳ ಚರ್ಮ ಸುಲಿಯುವ ಮತ್ತು ಮಾಂಸ ಭಕ್ಷಿಸುವ ಕೀಳುವೃತ್ತಿಗೆ ಇಳಿಯಬೇಕಾಯಿತು (Hassan, S S: 1920:428).

**ಹೊಲೆಯರ ಐತಿಹ್ಯ ಪ್ರಕಾರ :** ಶಿವ ಪಾರ್ವತಿಯರು ಪ್ರತಿದಿನ ನದಿಗೆ ಸ್ನಾನಕ್ಕೆ ಹೋಗುತ್ತಿದ್ದರು. ಒಮ್ಮೆ ಪಾರ್ವತಿಗೆ ಮುಟ್ಟು ಅತಿಯಾಗಲು ಅದನ್ನು ಜೋಪಾನವಾಗಿ ಅರಿವೆಯಲ್ಲಿ ಕಟ್ಟಿ ತೊಡೆಯಲ್ಲಿಯೇ ಇಟ್ಟುಕೊಂಡು ನದಿಗೆ ಹೋಗುವಾಗ ಬಿರುಕಿನಲ್ಲಿ ಆ ಮುಟ್ಟಿನ ಗಂಟು ಬಿದ್ದುಬಿಟ್ಟಿತು. ಪಾರ್ವತಿ ಇದರ ಕಡೆಗೆ ಲಕ್ಷ್ಯವಹಿಸಲಿಲ್ಲ. ಸ್ನಾನ ಮಾಡಿ ತಿರುಗಿ ಬರುವಷ್ಟರಲ್ಲಿ ಗಂಡು ಮಗುವಾಗಿ ಆಡುತ್ತಲಿತ್ತು. ಚೆಲುವಾದ ಈ ಮಗುವನ್ನು ಮನೆಗೊಯ್ಯಬೇಕೆಂದು ಪಾರ್ವತಿಗೆ ಆಸೆಯಾಗಲು, ಅದನ್ನು ತೆಗೆದು ಕೊಂಡು ಹೋಗಿ 'ಚೆನ್ನ' ಎಂದು ನಾಮಕರಣ ಮಾಡಿ, ತನ್ನ ಮನೆಯ ಬಾಗಿಲು ಮತ್ತು ಕಾಮಧೇನುವನ್ನು ಕಾಯಲು ಹೇಳಿದಳು. 'ಚೆನ್ನ'ನಿಗೆ ಯಾವ ಕಾರಣಕ್ಕೂ ಹಾಲಿನ ಕೆನೆ ಮತ್ತು ಬೆಣ್ಣೆ ಕೊಡಬೇಡವೆಂದು ಶಿವ ಪಾರ್ವತಿಗೆ ಆಜ್ಞೆ ಮಾಡಿದ್ದನು. ಒಂದು ದಿನ ಮುಸುರಿ ತೊಳೆದು ಬಾಗಿಲಲ್ಲಿ ಬಿದ್ದ ಹಾಲಿನ ಕೆನೆಯನ್ನು ಆ ಮಗು ತಿಂದಿತು. ಹಾಲಿನ ಕೆನೆಯೇ ಇಷ್ಟು ರುಚಿಕಟ್ಟಾಗಿರುವಾಗ ಇದನ್ನು ಕೊಡುವ ಕಾಮಧೇನು ಅದೆಷ್ಟು ರುಚಿಯಾಗಿರಬೇಕೆಂದನಿಸಿ, ದನಗಾಯಲು ಹೋದಾಗ 'ಚೆನ್ನ' ಒಂದು ದಿನ ಕಾಮದೇನುವನ್ನು ಕೊಂದು ತಿಂದುಬಿಟ್ಟ. ಈ ವಿಷಯ ಶಿವನಿಗೆ ತಿಳಿಯಲು 'ಚೆನ್ನ'ನಿಗೆ ಚಂಡಾಲನಾಗಿ ಸ್ಮಶಾನದಲ್ಲಿ ಬಿದ್ದಿರು ಎಂದು ಶಾಪ ಕೊಟ್ಟನಂತೆ. ಈ ಕಾರಣವಾಗಿ 'ಚೆನ್ನ' ಸುಡಾಗಾಡನ್ನು ಕಾಯುತ್ತ ಅದರ ಒಡೆತನ ಪಡೆದು ಬದುಕಹತ್ತಿದನು. ಅವನ ಸಂತತಿಯವರೇ ನಾವು 'ಹೊಲೆಯರು' ಎಂದು ಹೇಳಿಕೊಳ್ಳುತ್ತಾರೆ (ಗೊಳಸಂಗಿ, ಅರ್ಜುನ: ೨೦೦೦:೧೭).

**ಹೊಲೆಯ ಮಾಷ್ಟೀಕರ ಐತಿಹ್ಯದ ಪ್ರಕಾರ:** ಲಕ್ಷ್ಮೀಪತಿ ಕೋಲಾರರ ಮಾಷ್ಟಿಕರ ಸಂಸ್ಕೃತಿ ಎಂಬ ಕೃತಿಯಲ್ಲಿ ಹೀಗೆ ದಾಖಲಿಸಲಾಗಿದೆ. ದಕ್ಷಿಣ ದಿಕ್ಕಿನಲ್ಲಿ ಇನಕೊಂಡ, ಬೆಲ್ಲಪುಕೊಂಡ, ಕೊಣತಿ ಕುನಿಯೇಡ ಕೊಂಡಗಳಿದ್ದವು. ಅಲ್ಲಿ ಜಾಂಗಾ ಪೆದ್ದಕ್ಕ ಎಂಬಾಕೆ ಸುತ್ತಲ ಏಳೂರುಗಳಿಗೆ ತೋಟಿ. ಆಕೆಯ ಮಕ್ಕಳಲ್ಲಿ ಕೊನೆಯವನೇ

ಚೆನ್ನಯ್ಯದಾಸು' ಎಂಬಾತ. ಈ ಚೆನ್ನಯ್ಯದಾಸು' ರೆಡ್ಡಿ ಭೂಹೊಲೆಯರ ಪಂಗಡದವನು. ಅವನು ಕೂಡ ಎಲ್ಲರಂತೆಯೇ ನೀರಗಂಟಿ ಚಾಕರಿ ಮಾಡುತ್ತಿದ್ದ, ತಿಂಗಳ ಕೆಲಸವನ್ನು ಮೂರು ದಿನದಲ್ಲೇ ಮುಗಿಸುಬಲ್ಲವಂತಹ ಕೆಲಸಗಾರನವನು.

ಇತ್ತ ಮಾದಿಗ ಕುಲದ ಆದಿ ಜಾಂಬವಂತನು ಹೊಲೆಯ ಕುಲದ ಹೆಣ್ಣುಗಳ ಮಾನ ಹರಣ ದಿನವೂ ಮಾಡುತ್ತಿದ್ದ. ಇವನನ್ನು ಪ್ರತಿಭಟಿಸುವುದಾಗಲೀ ಸೋಲಿಸುವುದಾಗಲೀ ಕೊಲ್ಲುವುದಾಗಲೀ ಯಾರಿಂದಲೂ ಆಗಲಿಲ್ಲ. ಅದಕ್ಕಾಗಿ ಆ ದೇಶದ ರಾಜ, ದೇಶದ ಉದ್ದಗಲಕ್ಕೂ ಚಾಟುಬರೆಸಿ "ಹೊಲೆಯ ಹೆಣ್ಣುಮಕ್ಕಳ ಮಾನ ಉಳಿಸಬಲ್ಲವರು, ಈ ಕುಲವನ್ನು ಉಳಿಸಬಲ್ಲವರು ಯಾರಾದರೂ ಇದ್ದರೆ ಅಂತಹವನಿಗೆ ಆ ಆದಿ ಜಾಂಬವಂತನ ಮನೆ, ಹೊಲ, ತೋಪುಗಳನ್ನೆಲ್ಲ ಕೊಡುಲಾಗುವುದು" ಅವನನ್ನು ಹೊಲೆಯ ಕುಲದ ಹಿರಿಮಗನೆಂದು ಗೌರವಿಸಿ ಸಲುಹಲಾಗುವುದು ನಮ್ಮ ರಾಜ್ಯದಲ್ಲಿ ಅರ್ಧರಾಜ್ಯವನ್ನು ಕೊಟ್ಟು ನಮ್ಮ ಸಿಂಹಾಸನದ ಮೇಲೆ ಕೂರಿಸಿಕೊಳ್ಳಲಾಗುವುದು. ಅಂಥ ಯಾವನಾದರೂ ಲೋಕಪುರುಷನು ಹುಟ್ಟಿದರೆ ಬರಬಹುದು. ಭೂಮಿ, ಆಕಾಶ, ಈ ಹೊಲೆಯ ಕುಲಗಳು ಇರೋವರೆಗೂ ಅವರು ತಿನ್ನೋ ಊಟ ನಮ್ಮದು ಉಡೋಬಟ್ಟೆ ನಮ್ಮದು ಅವರ ಇಡೀ ವಂಶವನ್ನೇ ಸಾಕುವ ಭಾರ ನಮ್ಮದು' ಎಂದು ಘೋಷಿಸುತ್ತಾನೆ.

ಈ ಚಾಟು ತಿಳಿದ ಚೆನ್ನಯ್ಯ ದಾಸರಿ ಮಾದಿಗ ಕುಲದ ಆದಿ ಜಾಂಬವಂತನಿರುವಲ್ಲಿಗೆ ಹೋಗಿ ರಾಜರ ಮುಂದೆ ಕುಸ್ತಿ ಪಂದ್ಯದಲ್ಲಿ ಸೋಲಿಸಿ ಸಾಯಿಸುತ್ತಾನೆ. ಆಗ ಹೇಳಿದ ಮಾತಿನಂತೆ ರಾಜನು ಚೆನ್ನಯ್ಯ ದಾಸ'ವನ್ನು ಆನೆ ಅಂಬಾರಿ ಮೇಲೆ ಕೂರಿಸಿ ಮೆರವಣಿಗೆ ಮಾಡಿದನಂತೆ.

ಒಟ್ಟು ಈ ಮೂರು ಐತಿಹ್ಯಗಳ ಬೇರೆ ವಿವರಣೆಗಳು ಏನೇ ಇದ್ದರೂ 'ಚೆನ್ನಯ್ಯ ದಾಸು' ಹೊಲೆಯ ಕುಲದ ಹಿರಿಯನೆಂಬುದು ಧ್ವನಿತವಾಗುತ್ತದೆ. ಮೊದಲೆರಡ ಐತಿಹ್ಯಗಳು ಶಿವನಿಗೆ ಸಂಬಂಧಿಸಿದ್ದರೆ, ಮೂರನೆಯ ಐತಿಹ್ಯದಲ್ಲಿ ಆತ ವಿಷ್ಣುಮತಾನುಯಾಯಿ ಆಗಿದ್ದಾನೆ. ಮೊದಲೆರಡು ಐತಿಹ್ಯಗಳಲ್ಲಿ ಚಿನ್ನಯ್ಯ, ಚೆನ್ನ ಎನ್ನುವ ಹೆಸರುಗಳಿದ್ದರೆ ಮಾಸ್ತೀಕರ ಐತಿಹ್ಯದಲ್ಲಿ ಚೆನ್ನಯ್ಯ ದಾಸು ಅಥವಾ ಚೆನ್ನಯ್ಯ ದಾಸರಿ ಎಂಬ ಹೆಸರಿದೆ. ಮೊದಲೆರಡು ಹೆಸರುಗಳ ಸಾಂಕೇತಿಕ ಅರ್ಥ ಶಿವಮತಾನುಯಾಯಿ ಆಗಿದ್ದಾನೆಂದು ಸೂಚಿಸಿದರೆ, ಮೂರನೆಯ ಐತಿಹ್ಯ ವಿಷ್ಣು ಮತಾನುಯಾಯಿ ಎಂದಿದೆ. ಅಂದರೆ ಹೊಲೆಯ ಕುಲದ ಚೆನ್ನ ಅಥವಾ ಚಿನ್ನಯ್ಯ ಮೊದಲು 'ಶಿವ' ಆರಾಧಕನಾಗಿದ್ದು ನಂತರದಲ್ಲಿ 'ಹರಿ' ಅಥವಾ 'ವಿಷ್ಣು' ರಾಧಕನಾಗಿ ವೈಷ್ಣವ ಪಂಥಕ್ಕೆ ಸೇರಿರುವುದಾಗಿ ತಿಳಿದು ಬರುತ್ತದೆ. ಈಗಿನ ಚೆನ್ನದಾಸರು ಆ 'ಚೆನ್ನಯ್ಯದಾಸು'ವಿನ ವಂಶದವಾರಾಗಿರಬೇಕು ಎಂಬ ಅರ್ಥ ಧ್ವನಿಸುತ್ತದೆ. 'ಚೆನ್ನಯ್ಯ' ಮುಂದೆ ಬರುವ 'ದಾಸು' ತಮಿಳು ಮೂಲವನ್ನು ದಾಸರಿ ತೆಲಗು ಮೂಲವನ್ನು ಸೂಚಿಸಿದರೆ ದಾಸರು ಕನ್ನಡ ಮೂಲವನ್ನು ಸೂಚಿಸುತ್ತದೆ. ಈ ಚೆನ್ನದಾಸರ ಸಮುದಾಯ ತಮಿಳುನಾಡು, ಆಂಧ್ರ ಪ್ರದೇಶ ರಾಜ್ಯಗಳಲ್ಲದ್ರೆ ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯಗಳಲ್ಲಿ ಈಗಲೂ ಇದ್ದಾರೆ.

ಅಸ್ಪೃಶ್ಯತೆಯ ಕಳಂಕ ಹೊತ್ತ ಹೊಲೆಯ ಸಮುದಾಯದ ಒಂದು ಗುಂಪು ಅಥವಾ ಚೆನ್ನ, ಚೆನ್ನಯ್ಯನ ಗುಂಪು ಹರಿದೀಕ್ಷೆಯನ್ನು ಪಡೆದು ವೈಷ್ಣವ ಧರ್ಮವನ್ನು ಸ್ವೀಕರಿಸಿ ಹರಿದಾಸರಾಗಿರಬೇಕು. ಅದುವೆ ಚೆನ್ನಯ್ಯದಾಸು, ಚೆನ್ನಯ್ಯದಾಸರಿ ಎಂದಾಗಿದೆ. ದಕ್ಷಿಣ ದೇಶದಿಂದ ಉತ್ತರದ ಗುಜರಾತ್‌ವರೆಗೂ ಚೆನ್ನದಾಸರು ಇರುವುರೆಂದರೆ, ವೈಷವ ಧರ್ಮ ಸ್ವೀಕಾರ ಜನಪ್ರಿಯವಾಗಿರಬೇಕು ಮತ್ತು ಭಾರತದೆಲ್ಲೆಡೆ ಪಸರಿಸಿರಬೇಕು ಎಂದಂತಾಗುತ್ತದೆ. ಇದು ಸಾಧ್ಯವಾದದ್ದು ೧೫, ೧೬ನೇ ಶತಮಾನದಲ್ಲಿ ಅಂದರೆ ಮದ್ವಾಚಾರ್ಯರ ವೈಷ್ಣವ ಧರ್ಮ ಭಾರತದ ತುಂಬ ಹರಡಿತ್ತು (ವೈಷ್ಣವಧರ್ಮದ ಪ್ರಭಾವಳಿ ತಲೆಬರಹದಲ್ಲಿ ನೋಡಿ) ೧೩ನೇ ಶತಮಾನದಲ್ಲಿ ಮದ್ವಾಚಾರ್ಯರು ಧಾರ್ಮಿಕ ಅಲೆಯನ್ನೆಬ್ಬಿಸಿದ್ದರು. ದೇಶದ ಉತ್ತರ ದಕ್ಷಿಣಾಭಿಮುಖವಾಗಿ ಎಲ್ಲೆಡೆ ಭಕ್ತಿ ಸಾಹಿತ್ಯ ಹುಟ್ಟಿಕೊಳ್ಳಲು ಇದೇ ಕಾರಣವಾಗಿದೆ.

ಬಹುಶಃ ೧೩ನೇ ಶತಮಾನದಲ್ಲಿ ವೈಷ್ಣವ ಧರ್ಮ ಸ್ವೀಕರಿಸಿದ ಹೊಲೆಯ ಸಮುದಾಯ ಪ್ರೀತಿಪೂರಕವಾಗಿ ಪ್ರಚಾರಾರ್ಥ ಉತ್ತರ ಭಾರತದೆಡೆಗೂ ವಲಸೆ ಹೋಗಿರಬೇಕು. ಈಗಿನ ಚೆನ್ನದಾಸರು ಅಂದಿನ ಚೆನ್ನಯ್ಯ ದಾಸುವಿನ ವಂಶಸ್ಥರು ಎಂದಾಯಿತು. ಆ ಕಾರಣಕ್ಕಾಗಿಯೇ ಚೆನ್ನದಾಸರ ಸಮುದಾಯ ಶ್ರೀಹರಿಯ ಅವತಾರ ವಾದ ತಿರುಪತಿ ವೆಂಕಟರಮಣನ ಭಕ್ತರೂ ಆರಾಧಕರೂ ಆಗಿದ್ದಾರೆ.

ಜಿ ವೆಂಕಟಸುಬ್ಬಯ್ಯ ಅವರ ನಿಘಂಟುವಿನಲ್ಲಿ ದಾಸ ಎನ್ನುವ ಪದಕ್ಕೆ ಮೂರು ರೀತಿಯ ಅರ್ಥಗಳನ್ನು ದಾಖಲಿಸಲಾಗಿವೆ.

೧. ಆಳು; ತೊತ್ತು; ಊಳಿಗದವನು; ಸೇವಕ

೨. ವೈಷ್ಣವ ಪಂಥದಭಕ್ತ; ಹರಿದಾಸ; ದಾಸಯ್ಯ; ದಾಸಕೂಟಕ್ಕೆ ಸೇರಿದ ವ್ಯಕ್ತಿ.

೩. ಒಂದು ಜಾತಿ; ಸಾಮಾನ್ಯವಾಗಿ ಇವರು ಒಂದು ಕಡೆನಿಲ್ಲದೆ ಊರಿಂದೂರಿಗೆ ಸಂಚಾರ ಮಾಡುತ್ತಾ ಕೀರ್ತನೆ, ಭಜನೆ ಮುಂತಾದವುಗಳಿಂದ ಹೊಟ್ಟೆ ಹೊರೆದುಕೊಳ್ಳುವವರು (ವೆಂಕಟಸುಬ್ಬಯ್ಯ.ಜಿ: ೧೯೭೯:೩೮೮೦).

'ದಾಸ' ಸಮುದಾಯವು ಈ ಮೇಲಿನ ೨ಮತ್ತು ೩ರ ಅರ್ಥವನ್ನೊಳಗೊಂಡಿದೆ. ಮೂಲತಃ ಅದೊಂದು ಜಾತಿಯಾಗಿ, ನಂತರದಲ್ಲಿ ವೈಷ್ಣವ ಪಂಥದ ಧರ್ಮಪ್ರಚಾರಾರ್ಥ ವಾಗಿ ಒಂದು ಭಕ್ತಿಪಂಥದ ವಾಹಕವಾಗಿ ತನ್ನನ್ನು ಗುರುತಿಸಿಕೊಂಡಿದೆ. ನಂತರದಲ್ಲೂ ಜಾತಿಯಾಗಿಯೇ ಉಳಿದುಕೊಂಡಿದೆ.

ರೂಢಿಯಲ್ಲಿ ಈ ಸಮುದಾಯ ದಾಸ, ದಾಸಯ್ಯ, ದಾಸರಿ, ದಾಸರ ಎಂದೇ ಕರೆಯಿಸಿಕೊಂಡಿದೆ. "ತಮಿಳಿನಲ್ಲಿ 'ತಾಚರಿ' ತೆಲುಗಿನಲ್ಲಿ 'ದಾಸರಿ' ಸಂಸ್ಕೃತದಲ್ಲಿ ದಾಸೇರ (ಅಂದರೆ ದಾಸಿಯಮಗ ಸೇವಕ, ಆಳು)" ಎಂದು ಕರೆಯಲಾಗಿದೆ(ಅವರೇ: ೧೯೭೯:೩೮೮೧).

ದಾಸ, ದಾಸಯ್ಯ, ದಾಸರಿ, ದಾಸರ, ದಾಸರು ಎಂದು ಕರ್ನಾಟಕದಲ್ಲಿ ಬಹುತೇಕ ರೂಢಿಯಲ್ಲಿ ಬಳಕೆಗೊಂಡಿರುವ ಈ ಸಮುದಾಯ ತಾನು ಮಾಡುವ ವೃತ್ತಿಯ

ವಿವಿಧತೆಯಿಂದಾಗಿ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ತನ್ನನ್ನು ಗುರುತಿಸಿಕೊಂಡಿದೆ. ಅಂದರೆ ಬೇರೆ ಸಮುದಾಯದವರು ಹಾಗೆ ಗುರುತಿಸಿದ್ದಾರೆ. ಅವೆಲ್ಲ 'ದಾಸ' ಸಮುದಾಯದ ವೃತ್ತಿ ಲಾಂಛನಗಳಲ್ಲಿನ ಭಿನ್ನತೆಗಳೇ ಹೊರತು ಭಿನ್ನ ಜಾತಿಗಳಲ್ಲ. ಮುಂದುವರಿದು ಹೇಳುವುದಾದರೆ ಇವೆಲ್ಲ ಈ ಸಮುದಾಯದ ಪರ್ಯಾಯ ನಾಮಗಳು. ಈ ಮಾತನ್ನು ವಿದ್ವಾಂಸರುಗಳು ಈ ಸಮುದಾಯವನ್ನು ಗ್ರಹಿಸಿರುವ ಮತ್ತು ಅರ್ಥಸಿರುವ ಹಿನ್ನೆಲೆಯಲ್ಲಿ ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ.

೧. ಕರ್ನಾಟಕ ಭಾಗದ ಮುಂಬಯಿ ಗ್ಯಾಝೆಟೀಯರ್‌ನಲ್ಲಿ "ದಾಸರು" ಸಮುದಾಯವನ್ನು ಒಂದು ಕಡೆಗೆ ಗಲ್ಲದಾಸರು, ವೊಳ್ಳೇದಾಸರು, ತೆಲಗುದಾಸರು, ಗಂಡುದಾಸರು, ತಿರುಮಲದಾಸರು, ಬ್ಯಾಡದಾಸರು, ಹೊಲೆದಾಸರು ಎಂದು ಗುಡಿಗಳ ಪರಿಚಾರಕರು ಭಾಗದಲ್ಲಿ ಹೆಸರಿಸಿದ್ದರೆ; ಮತ್ತೊಂದೆಡೆ ತಿರುಕರು ಭಾಗದಲ್ಲಿ ತಿರುಮಲ ದಾಸರು ಗಂಡು ದಾಸರೆಂದು ಎರಡು ಒಳಭೇದಗಳನ್ನು ಹೆಸರಿಸಿದ್ದಾರೆ. ಜೊತೆಗೆ ದಂಡಿಗದಾಸರನ್ನು ಕಬ್ಬಲಿಗೇರ ಕುಲದವರೆಂದೂ ಹೊಲೆದಾಸರನ್ನು ಹೊಲೆ ಜೋಗತಿಗಳ ಹೊಟ್ಟೆಯವರೆಂದು ವಿವರಿಸಲಾಗಿದೆ.

೨. ದಿ ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟನಲ್ಲಿ ೧೯೦೧ರ ಜನಗಣತಿಯ ವರದಿ ಯಾಧಾರದಲ್ಲಿ ಸಮುದಾಯದ ಸ್ವಗೋತ್ರ ಪಂಗಡಗಳನ್ನು ಹೀಗೆ ಪಟ್ಟಿಮಾಡಿಲಾಗಿದೆ. ೧. ಗುಡುಮದಾಸರು ೨. ದೊಂಬಿದಾಸರು ೩. ಧರ್ಮದಾಸರು ೪. ಶಂಖುದಾಸರು ೫. ಚಕ್ರವರ್ತಿದಾಸರು. ಇವುಗಳ ಜೊತೆಗೆ ಇತರ ಸ್ವಗೋತ್ರ ಪಂಗಡಗಳೆಂದರೆ ೧. ದೇಶಭಾಗದಾಸರು ೨. ಕತ್ತರಿದಾಸರು ೩. ಆಟದಾಸರು ೪. ಬಿಂದಿಗೆ ದಾಸರು ೫. ನಾಮಧಾರಿ ದಾಸರು ೬. ಶನಿವಾರಿ ದಾಸರು.

ಈ ಹೆಸರುಗಳು ನಿಜವಾಗಿ ವಿಭಿನ್ನ ಪಂಗಡಗಳನ್ನು ಪ್ರತಿನಿಧಿಸುತ್ತವೆ ಅಥವಾ ಸೂಚಿಸುತ್ತವೆಂದು ಹೇಳುವುದು ಸ್ಪಷ್ಟವಾಗಿಲ್ಲ" ಎಂದೂ ಹೇಳಲಾಗಿದೆ.

೩. ಹೈದ್ರಾಬಾದ್ ವಿಭಾಗದ "ದಿ ಕಾಸ್ಟ್ ಅಂಡ್ ಟ್ರೈಬ್ಸ್ ಆಫ್ ಎಚ್ ಇ ಎಚ್ ನಿಜಾಮ್ಸ ಡಾಮಿನಿಯನ್" ದಲ್ಲಿ ಭಾಗವತ, ಬುಕ್ಕದಾಸರಿ, ಬುಟ್ಟದಾಸರಿ, ಚಂಬುದಾಸರಿ, ಚಿನ್ನದಾಸರಿ, ದಂಡೆದಾಸರಿ, ಹೊಲೆದಾಸರಿ, ಕಂಗೆದ್ದುದಾಸರಿ, ಮೂಲದಾಸರಿ, ಪಾಗದಾಸರಿ, ತೆಲಗ ದಾಸರಿ ಎಂದು ಹೆಸರಿಸಲಾಗಿದೆ.

೪. ಥರ್ಸ್ಟನ್ ಅವರ "ಕಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರ್ನ ಇಂಡಿಯಾ"ದಲ್ಲಿ ಬಲಿಜ, ಗಂಗೆದ್ದುಲ, ಗೊಲ್ಲ, ಜಾನಪ್ಪ, ಪಲ್ಲಿ, ವಳ್ಳುವ ಎಂದು ಉಪವಿಭಾಗಗಳನ್ನಾಗಿ ಮಾಡಲಾಗಿದೆ.

ಈ ಮೇಲಿನ ನಾಲ್ಕು ಗ್ರಂಥಗಳಲ್ಲಿನ 'ದಾಸ' ಸಮುದಾಯ ಕುರಿತ ವಿವರಗಳು ಅನೇಕ ದೋಷಗಳಿಂದ ಕೂಡಿವೆ ಎಂಬುದು ಇಲ್ಲಿನ ವಿವರಗಳಿಂದ ತಿಳಿದು ಬರುತ್ತದೆ. ಅಲ್ಲದೆ ಥರ್ಸ್ಟನ್, ಅನಂತಕೃಷ್ಣ ಅಯ್ಯರ್, ನಂಜುಂಡಯ್ಯ ಮೊದಲಾದವರು ಬರೆದ ಕೆಳವರ್ಗಗಳ ಚರಿತ್ರೆ ಪ್ರಾಮಾಣಿಕವಾಗಿ ಚಿತ್ರಿಸಲ್ಪಟ್ಟಿಲ್ಲ (ಹಿರೇಮಠ, ಎಸ್ ಎಸ್: ೨೦೦೧:೧೨).

ಈ ಮೇಲಿನ ವಿವರಗಳನ್ನೇ ನೋಡುವುದಾದರೆ, ಮುಂಬಯಿ ಗ್ಯಾಝೆಟೀಯರ್‌ನಲ್ಲಿ ಮೂಲ ಜಾತಿಯಿಂದ ದಾಸರಾಗಿರುವ ಸಮುದಾಯದ ಬದಲಿಗೆ ಹರಿದಾಸರಾಗಿರುವ ವಿವಿಧ ಜಾತಿಗಳನ್ನೇ 'ದಾಸ' ಸಮುದಾಯದ ಒಳ ಪಂಗಡಗಳೆಂದು ಭಾವಿಸಲಾಗಿದೆ. ಅಲ್ಲದೆ 'ದಾಸ' ಸಮುದಾಯದ ಉಪನಾಮಗಳನ್ನು ತಪ್ಪು ಅರ್ಥದಲ್ಲಿ ಬಳಸಲಾಗಿದೆ. ಉದಾಹರಣೆಗೆ "ವೊಳ್ಳೆದಾಸರು, ತೆಲಗು ದಾಸರು, ಗಂಡುದಾಸರು, ತಿರುಮಲದಾಸರು" ಯಾರೆಂಬುದು ಅರ್ಥವಾಗುವುದಿಲ್ಲ. ಈ ಚೆನ್ನದಾಸರ ಸಮುದಾಯದವರಲ್ಲಿ ತೆಲುಗು ಮತ್ತು ಕನ್ನಡ ಎರಡನ್ನೂ ಮಾತನಾಡುವವರಿದ್ದಾರೆ. ಹೀಗಾಗಿ 'ತೆಲಗು' ಎಂದಾಗ ಅದೊಂದು ಜಾತಿಯೆಂದು ಭಾವಿಸಬೇಕಾಗಿಲ್ಲ. ತಿರುಮಲ ದಾಸರೆಂದರೆ ತಿಮ್ಮಪ್ಪನ ಭಕ್ತರು ಎಂದರ್ಥ. ವೊಳ್ಳೆದಾಸರು ಮತ್ತು ಗಂಡುದಾಸರು ಯಾರು? ಎನ್ನುವುದೂ ತಿಳಿಯುವುದಿಲ್ಲ.

ಇನ್ನು "ಮೈಸೂರು ಟ್ರೈಬ್ಸ್ ಮತ್ತು ಕಾಸ್ಟ್"ನಲ್ಲಿ ಹೆಸರಿಸಿರುವ ಗುಡುಮದಾಸರು ಮತ್ತು ಧರ್ಮದಾಸರು ಅವು ಮನೆತನದ ಹೆಸರುಗಳಾಗಿದ್ದರೆ, ದೊಂಬಿದಾಸರು, ಶಂಖದಾಸರು, ಮತ್ತು ಚಕ್ರವರ್ತಿದಾಸರು ಭಿಕ್ಷೆಗೆ ಹೊರಟಾಗ ಧರಿಸಿರುವ ವಾದ್ಯಗಳಿಂದ ಬಂದಿರುವಂತಹ ಹೆಸರುಗಳಾಗಿವೆ. ದೊಂಬಿ ಎನ್ನುವಂತಹದು ತಂಬೂರಿ ದಾಸರು, ದೊಂಬಿದಾಸರು ಎಂದಾಗಿದೆ. ಶಂಖವನ್ನು ಭಿಕ್ಷೆಗೆ ಹೋಗುವಾಗ ಕಡ್ಡಾಯವಾಗಿ ಬಳಸುತ್ತಿರುವುದರಿಂದ ಶಂಖದಾಸರು ಎಂದಾಗಿದೆ. ಚಕ್ರವರ್ತಿ ದಾಸರು ತಪ್ಪಾಗಿ ಕೇಳುವಿಕೆಯಿಂದ ತಪ್ಪು ತಿಳುವಳಿಕೆಯಿಂದ ಬಂದುದಾಗಿದೆ. ಅದು ಚಕ್ರವಾದ್ಯದಾಸರು ಎಂದಾಗಬೇಕು. ಈ ಸಮುದಾಯದವರು ಮೊದಲು ಚಕ್ರವಾದ್ಯವನ್ನು ಬಳಸುತ್ತಿದ್ದುದರ ದ್ಯೋತಕವಾಗಿ ಬಂದಿರುವಂಥದ್ದು. ಭಾರತ ಸರಕಾರದ ೧೯೩೫ರ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಮುಂಬೈ ಭಾಗದ ಸಮುದಾಯಗಳ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ "ಚಕ್ರವಾದ್ಯ ದಾಸರು" ಹೆಸರಿದೆ. ಇದನ್ನು ತಪ್ಪಾಗಿ ಕೆಲವರು 'ಚಕ್ರವಡ್ಯದಾಸರ' ಎಂದೂ ಕೆಲವರು ಹೆಸರಿಸಿದ್ದಾರೆ.

ಹೈದ್ರಾಬಾದ್ ವಿಭಾಗದ "ಕಾಸ್ಟ್ ಮತ್ತು ಟ್ರೈಬ್ಸ್"ದಲ್ಲಿನ ಭಗವತ, ಬುಕ್ಕ, ಬುಟ್ಟಿ, ಚಂಚು, ಚಿನ್ನ ದಾಸರಿಗಳು ಹಾಗು ದಂಡೆ (ದಂಡಿಗೆ) ಹಾಗೂ ಕಂಗೆಡ್ಲು (ಗಂಗೆಡ್ಲು> ಗಂಗೆದ್ದುಲು ಅಂದರೆ ಕವಲೆತ್ತಿನವರು) ವಿಭಿನ್ನ ವೃತ್ತಿಗಳಿಂದ ಬಂದವುಗಳಾಗಿವೆ.

ಅದೇ ರೀತಿ ಥರ್ಸ್ಟನ್ ಅವರಲ್ಲಿನ ಬಲಿಜ (ವ್ಯಾಪಾರಿ), ಗಂಗೆದ್ದುಲ (ಕವಲೆತ್ತು) ವಿಭಿನ್ನ ವೃತ್ತಿಗಳಾಗಿದ್ದರೆ ಗೊಲ್ಲ, ಜಾನಪ್ಪ, ಪಲ್ಲಿ ಇವು ಮನೆತನದ ಹೆಸರುಗಳಾಗಿವೆ.

ಅಂದರೆ ಒಟ್ಟಿನಲ್ಲಿ ಈ ಚೆನ್ನದಾಸರ ಸಮುದಾಯವನ್ನು ವೈಜ್ಞಾನಿಕ ಕ್ಷೇತ್ರಾಧ್ಯಯನದ ಮೂಲಕ ವಿವೇಚಿಸದೆ ಅಲ್ಲಲ್ಲಿ ಕೇಳಿ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿದ ಬರವಣಿಗೆಗಳು ಇವಾಗಿವೆ ಎಂಬುದು ಗಮನಕ್ಕೆ ಬರುತ್ತದೆ. ಸದರೀ ಸಮುದಾಯಕ್ಕೆ ಸಂಬಂಧ ಪಡದವರು ಮೇಲ್ಜಾತಿಯ ಬರಹಗಾರರು ಬೇರೆಯವರ ಮೂಲಕ ಕೇಳಿ ಮಾಹಿತಿ ಸಂಗ್ರಹಿಸಿ ಬರೆದಿರುವ ಬರಹಗಳು ಇವಾಗಿವೆ. ಹೀಗಾಗಿ ಇವನ್ನು ಪೂರ್ಣಪ್ರಮಾಣದ ಚಾರಿತ್ರಿಕ ದಾಖಲೆಗಳೆಂದು ಗ್ರಹಿಸುವುದು ಉಚಿತವೆನಿಸುವುದಿಲ್ಲ.

ಕರ್ನಾಟಕದಲ್ಲಿ ಚೆನ್ನದಾಸರ ಸಮುದಾಯವನ್ನು ಬೇರೆ, ಬೇರೆ ಹೆಸರುಗಳಿಂದ ಕರೆಯುವ ರೂಢಿ ಇದೆ. ಪ್ರಮುಖವಾದವುಗಳೆಂದರೆ ದಂಡಿಗೆ ದಾಸರು, ದೊಂಬಿದಾಸರು, ಚಕ್ರವಾದ್ಯದಾಸರು, ಜಂಬುದಾಸರು, ಮಾಲದಾಸರು, ಹೊಲೆಯದಾಸರು, ದಶವಂತರು, ಆಟದ ದಾಸರು, ಶಂಖದಾಸರು, ಗೋಪಾಳಬುಟ್ಟಿದಾಸರು ಇತ್ಯಾದಿ. ಇವರೆಲ್ಲರೂ ವೈಷ್ಣವ ಭಿಕ್ಷುಕರೇ ಆಗಿದ್ದು ತಿರುಪತಿ ತಿಮ್ಮಪ್ಪನ ಆರಾಧಕರು, ತಿರುಪತಿ ತಿಮ್ಮಪ್ಪನ ಹೆಸರಿನಲ್ಲಿ " ವೆಂಕಟರಮಣ ಗೋವಿಂದ, ಗೋವಿಂದ" ಎಂದು ಗೋವಿಂದವಿಡಿದು ತಿಮ್ಮಪ್ಪ ಅಥವಾ ವೆಂಕಟರಮಣನ ನಾಮಸ್ಮರಣೆ ಮಾಡಿ ಭಿಕ್ಷೆಬೇಡುವವರು ಹರಿದಾಸ ಪರಂಪರೆಗೆ ಸೇರಿದವರು.

**ಭಿಕ್ಷುಕ್ಕೆ ಹೋಗುವ ಹರಿದಾಸರು**

ಹರಿದಾಸರು ಕಾಲಲ್ಲಿ ಗೆಜ್ಜೆ ಕಟ್ಟಿ, ಕೊರಳಲ್ಲಿ ತುಳಸಿಮಾಲೆ ಧರಿಸಿ, ಹಣೆಯ ಮೇಲೆ ಚಂದನದ ನಾಮ, ಮೈಮೇಲೆ ಮುದ್ರಾಂಕಿತ, ಅವರು ಉಪಯೋಗಿಸುವ ವಾದ್ಯ ಮತ್ತಿತರ ಸಾಮಗ್ರಿ ಎಂದರೆ, ದಂಡಿಗೆ ಬೆತ್ತ, ಗೋಪಾಳಬುಟ್ಟಿ ಮತ್ತು ಚಿಟಿಕೆ. ದಂಡಿಗೆ ಬೆತ್ತವೆಂದರೆ ದಾಸರು ಬಳಸುತ್ತಿದ್ದ ತಂತೀವಾದ್ಯ. ಅದನ್ನು ನುಡಿಸುತ್ತ ಹಾಡುತ್ತ ಗೆಜ್ಜೆಯ ದನಿಯೊಂದಿಗೆ ಹೆಜ್ಜೆ ಹಾಕುತ್ತ ನಡೆಯುವರು. ಗೋಪಾಳ ಬುಟ್ಟಿ ಎಂದರೆ ಎಡಭುಜದಿಂದ ಇಳಿಬಿದ್ದ ಭಿಕ್ಷಾಪಾತ್ರೆ ಅಥವಾ ಹಸಿಬೆಚೀಲ ಅಥವಾ ಬಿದಿರಿನ ಬುಟ್ಟಿ, ಇದನ್ನು ಭುವನಾಶಿ ಎಂತಲೂ ಕರೆಯುತ್ತಾರೆ. ದಾಸರು ಹಾಡಿನೊಂದಿಗೆ ಚಿಟಿಕೆಯಿಂದ ತಾಳ ಹಾಕುತ್ತ ಬೀದಿಯಲ್ಲಿ ನಡೆಯುತ್ತಿರುವಾಗ ಮನೆ ಮನೆಗಳ ಮುಂದೆನಿಂತು ಮನೆಯ ಗೃಹಿಣಿಯರಿಂದ ಅಕ್ಕಿಯನ್ನು, ಗೋಪಾಳಬುಟ್ಟಿಯಲ್ಲಿ ಹಾಕಿಸಿಕೊಳ್ಳುವರು. ಇದನ್ನೇ ಮಧುಕರ ವೃತ್ತಿ ಅಥವಾ ಮಾಯಾವಾರ ಎನ್ನುವುದು. ದಾಸರು ಕೊರಳಲ್ಲಿ ಧರಿಸುವ ತುಳಸಿ ಮಾಲೆ ಹರಿದಾಸ ದೀಕ್ಷೆಯ ಪ್ರತೀಕ. ಬಡತನದಲ್ಲೇ ಉಳಿದು, ಅಂದಂದಿನ ಕೂಳನ್ನು ಆಗಾಗ ಗಳಿಸಿ, ನಾಳೆಗೆಂದು ಏನನ್ನೂ ಇಡದೆ, ಸಾಲದೆಂದು ಕರುಬದೆ, ಬಂದದ್ದರಲ್ಲಿ ತೃಪ್ತರಾಗಿ, ಸಂತೋಷದಿಂದ ಹರಿಭಜನೆ ಮಾಡುತ್ತ ಬಾಳನ್ನು ಕಳೆಯುವುದೇ ಹರಿದಾಸ ದೀಕ್ಷೆ.

ಇನ್ನು ಕೆಲವೆಡೆ ತಂಬೂರಿ ಅಥವಾ ದಂಡಿಗೆಯಿಲ್ಲದೆ ಶಂಖ, ಜಾಗಟೆಗಳನ್ನು ಬಳಸಿಕೊಂಡು ಭಿಕ್ಷೆ ಬೇಡುವ ದಾಸಯ್ಯಗಳೂ ಇದ್ದಾರೆ. ಇವರು ಹಾಡುಗಾರರಲ್ಲ. ಮೈಮೇಲೆ ವಿಷ್ಣು ಚಿನ್ಹೆಗಳನ್ನು ಬಳಿದುಕೊಂಡು ಮನೆಮನೆಗೆ ಹೋಗಿ ಜಾಗಟೆ ಬಾರಿಸಿ, ಶಂಖವನ್ನು ಊದಿ ವೆಂಕಟರಮಣ ಗೋವಿಂದಾ, ಗೋವಿಂದ ಎಂದು ಉಗ್ಘಡಿಸಿ ಜೋಳಿಗೆ ಅಥವಾ ಗೋಪಾಳ ಬುಟ್ಟಿಯಲ್ಲಿ ಅಕ್ಕಿಯ ಕಾಳನ್ನು ಹಾಕಿಸಿಕೊಂಡು ಬರುತ್ತಾರೆ

ಹೀಗೆ ಒಂದೇ ಮೂಲದ ಹರಿದಾಸ ಪರಂಪರೆಗೆ ಸೇರಿದ ಈ ದಾಸ ಸಮುದಾಯ ವನ್ನು ಜನರು ಅಲ್ಲಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯತೊಡಗಿದರು. ಕನ್ನಡ ಸಾಹಿತ್ಯದಲ್ಲಿನ ಕೀರ್ತನಕಾರರು ಹರಿದಾಸರಾದರೆ ಇವರು ಹರಿದಾಸ ಪರಂಪರೆಗೆ

ಸೇರಿಕೊಂಡ ಭಿಕ್ಷುಕ ವೃತ್ತಿಯವರು. ಇವರು ಕೀರ್ತನೆ ಅಥವಾ ಸಾಹಿತ್ಯ ರಚನೆಕಾರರಲ್ಲ. ವೈಷ್ಣವ ಗುರುಗಳಿಂದ ದೀಕ್ಷೆ ಪಡೆದು ಅವರ ಧರ್ಮ ಪ್ರಸಾರಕ್ಕಾಗಿ ಒಪ್ಪಿಕೊಂಡು ದೇವರ ಸೇವೆ ಪೂರೈಸಲು ಹಾಗೂ ಕುಟುಂಬದ ಹಿರಿಯರು ಪ್ರಾರ್ಥನೆ ಮಾಡಿಕೊಂಡ ಸಲುವಾಗಿ, ಪ್ರಾರ್ಥನೆಯನ್ನು ಪೂರೈಸಲು ಬೀದಿಗಳಲ್ಲಿ ಮೇಲುಧ್ವನಿಯಲ್ಲಿ ಒಂದು ಹಾಡನ್ನು ಹಾಡಿಕೊಂಡು, ಶಂಖ ಜಾಗಟೆಯನ್ನು ನುಡಿಸಿಕೊಂಡು, ಹರಿಕೀರ್ತನೆಗಳನ್ನು ಹಾಡಿಕೊಂಡು ಸಾಗುತ್ತ ಭಿಕ್ಷೆ ಬೇಡುತ್ತ ಹೊರಟರು. ಹೀಗೆ ಹರಿಯ ಮಹಿಮೆಯ ಹಾಡುಗಳನ್ನು ಹಾಡುತ್ತ, ಲೀಲೆಗಳನ್ನು ಆಡುತ್ತಾ ಪ್ರದರ್ಶನ ಮಾಡುತ್ತ ಊರಿಂದ ಊರಿಗೆ ನಡೆದರು. ಈ ನಾನಾ ವೇಷ ಭೂಷಣ ಪರಿಕರಗಳೇ ವೃತ್ತಿ ವಿಭಜಕಗಳಾದವು. ಈ ವೃತ್ತಿ ವಿಭಜಕಗಳೇ ಮುಂದೆ ಪರ್ಯಾಯ ನಾಮಗಳಾದವು. ಕಾಲಾಂತರದಲ್ಲಿ ಶಿಕ್ಷಿತರಲ್ಲದ ಈ ಸಮುದಾಯದ ಪರ್ಯಾಯನಾಮಗಳನ್ನು ಶಿಕ್ಷಿತರೆನಿಸಿಕೊಂಡ ಮೇಲು ಜಾತಿಗಳು ಉಪಜಾತಿಗಳೆಂದು ಕರೆಯುತ್ತ ಬಂದರು. ಅಧ್ಯಯನಕಾರರು ಇವನ್ನೇ ದಾಖಲಿಸಿಕೊಂಡರು. ಇದರಿಂದಾಗಿ ಅಶಿಕ್ಷಿತ ದಾಸ ಸಮುದಾಯ ಗೊಂದಲದ ಗೂಡಾಯಿತು.

ಈಗ ಚಾಲ್ತಿಯಲ್ಲಿರುವ ಉಪಜಾತಿಗಳು, ಜಾತಿಗಳಲ್ಲ. ಅವು ಪರ್ಯಾಯ ನಾಮಗಳು. ಬಹಳ ಮುಖ್ಯವಾದುದೆಂದರೆ ಇವರೆಲ್ಲರ ಬೆಡುಗು(ಬಳಿ)ಗಳೂ ಹೊಂದಿಕೆ ಯಾಗುತ್ತವೆ. ಈ ಕುರಿತು ಮುಂದೆ ವಿವರಣೆ ಇದೆ.

ಪರ್ಯಾಯ ನಾಮಗಳು

**ದಂಡಿಗೆ ದಾಸರು:** ಈ ಮೇಲೆ ಹೇಳಿದಂತೆ ಭಿಕ್ಷಾಟನೆಗೆ ಹೋದಾಗ ಹರಿಯ ಕೀರ್ತನೆಗಳನ್ನು ಶೃತಿಯಾಗಿ ಹಾಡಲು ಬಳಸುವ ತಂತಿವಾದ್ಯ ದಂಡಿಗೆಯನ್ನು ಪ್ರಮುಖ ವಾಗಿ ಬಳಸುವುದರಿಂದ ಈ ಗುಂಪಿನವರನ್ನು ದಂಡಿಗೆ ದಾಸರೆಂದು ಕರೆಯಲಾಗಿದೆ.

ಅಲ್ಲದೆ ಯುದ್ಧ ಸಂದರ್ಭದಲ್ಲಿ ಸೈನ್ಯ(ದಂಡಿ/ದಂಡು)ದೊಡನೆ ಸೈನಿಕರ ಮನರಂಜನೆ ಗಾಗಿ ತಮ್ಮ ಹೆಣ್ಣುಗಳೊಂದಿಗೆ ದಂಡಿಗೆ ವಾದ್ಯ ನುಡಿಸಿ ಹಾಡುತ್ತ ಕುಣಿಯುತ್ತಿದ್ದುದರಿಂದ ದಂಡಿನ ಮುಂದಿರುವ ದಂಡಿಗೆ ದಾಸರೆಂದು ಕರೆದಿರುವರು ಎಂಬ ಹೇಳಿಕೆಗಳಿವೆ ಹಾಗೂ ಈ ಗುಂಪಿನವರಿಗೆ ಕಾಂಚೀಪುರದ ಅರಸರು ದಂಡೆ, ತಾಳ, ತಂಬೂರಿಗಳನ್ನು ಸನ್ಮಾನವಾಗಿ ನೀಡಿದರೆಂದೂ, ಆ ಕಾರಣಕ್ಕಾಗಿಯೇ ಅಂದಿನಿಂದ ಅವರು ದಂಡಿಗೆ ದಾಸರು ಅಥವಾ ದಂಡೆದಾಸರೆನಿಸಿಕೊಂಡರೆಂಬ ಪ್ರತೀತಿಯಿದೆ (ರಾಮಚಂದ್ರರಾವ್, ಸಾ ಕೃ:೨೦೦೩:೩೦೭). ಏನೇ ಇದ್ದರೂ ಕೂಡ ದಂಡಿಗೆ ವಾದ್ಯವನ್ನು ಪ್ರಮುಖವಾಗಿ ಬಳಸುವ ದಾಸರ ಒಂದು ಗುಂಪಿಗೆ ದಂಡಿಗೆ ದಾಸರು ಎಂಬ ಹೆಸರು ಬಂದಿದೆ. ಈ ಪದದಡಿಯಲ್ಲಿರುವವರು ಬೆಳಗಾವಿ, ಬಾಗಲಕೋಟ, ಗದಗ, ಹಾವೇರಿ, ಧಾರವಾಡ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ಇವರು ಚೆನ್ನ ದಾಸರಾಗಿದ್ದರೂ ಜನರೂಢಿಯಲ್ಲಿ ದಂಡಿಗೆ ದಾಸರು, ಜಂಬುದಾಸರು, ದಾಸರು ಎಂದೂ ಕರೆಯುತ್ತಾರೆ.

**ದೊಂಬಿದಾಸರು:** ಈ ದಾಸರು ಹಾಡುವಾಗ, ಆಟವಾಡುವಾಗ ದೊಂಬಿ (ಗಲಭೆ)

ಎದ್ದುದರಿಂದ 'ದೊಂಬಿದಾಸರು' ಪದ ಹುಟ್ಟಿಕೊಂಡಿತೆನ್ನುವುದು ಕಪೋಲಕಲ್ಪಿತ ಮಾತಾಗಿದೆ. ಈ ಪದದ ಮೂಲವನ್ನು ಅರ್ಥೈಸಲು ಸಾಧ್ಯವಾಗದಿದ್ದುದರಿಂದ ಯಾವುದೋ ಒಂದನ್ನು ಹೇಳಿ ಜಾರಿಕೊಂಡಿರುವ ಅಧ್ಯಯನಕಾರರ ತಪ್ಪು ತೀರ್ಮಾನ ಇದಾಗಿದೆ.

ಇನ್ನೊಂದು ಅಭಿಪ್ರಾಯದಂತೆ ಇವರು ತಂಬೂರಿ (ಏಕತಾರಿ) ಬಳಸಿ ಹಾಡುವಾಗ ಇವರ ಸ್ವರ ದುಂಬಿಯಂತೆ ಇಂಪಾಗಿ ಇರುವುದರಿಂದ ದುಂಬಿದಾಸರು ಎಂದು ಕರೆದುದೇ ದೊಂಬಿದಾಸರು ಎನ್ನುವ ಪದದ ಹುಟ್ಟಿಗೆ ಕಾರಣ ಎನ್ನಲಾಗಿದೆ.

ಆದರೆ, ಒಡೆದು ಕಾಣುವ ಅಂಶವೆಂದರೆ ಈ ಗುಂಪಿನವರು ಭಿಕ್ಷಾಟನೆಗೆ ಹೊರಟಾಗ ಬಳಸುವ ಪ್ರಮುಖ ವಾದ್ಯವೆಂದರೆ ತಂಬೂರಿ ಇದಕ್ಕೆ ಒಂದೇ ತಂತಿ ಇರುವುದರಿಂದ ಇದನ್ನು 'ಏಕತಾರಿ' ಎಂದೂ ಕರೆಯುತ್ತಾರೆ. ಆದರೆ ಜನ ಕರೆಯುವುದು ಮತ್ತು ಹಿಂದಿನ ಸಾಹಿತ್ಯದ ದಾಖಲೆಗಳಲ್ಲಿ ತಂಬೂರಿ ಎಂದೇ ಬಳಕೆಯಾಗಿದೆ. ದಂಬೂರಿ ದಾಸರು, ತಂಬೂರಿ ದಾಸರು > ದಂಬೂರಿ ದಾಸರು > ದೊಂಬಿ ದಾಸರು ಎಂದೇ ಈ ಪದದ ನಿಷ್ಪನ್ನವಾಗಿದೆ. ನಾಲಿಗೆಯ ತೊದಲಿನಿಂದಾಗಿ ದೊಂಬದಾಸ ಎಂದೂ ಪ್ರಾರಂಭದ ಇಂಗ್ಲಿಷಿನ 'ಡಿ' ಅಕ್ಷರದಿಂದಾಗಿ ಡೊಂಬದಾಸ ಎಂದೂ ಕೆಲವೆಡೆ ಬಳಕೆಗೊಂಡಿರುವುದುಂಟು. ಚೆನ್ನದಾಸರ ಮೂಲದ ಈ ಗುಂಪಿನ ಜನ ಮೈಸೂರು ಭಾಗದ ಪ್ರಾಂತದಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

ಜೀ ಶಂ ಪರಮಶಿವಯ್ಯ ಆದಿಯಾಗಿ ಬಹುತೇಕರು ಇವರನ್ನು ದೊಂಬಿದಾಸರು ಪ್ರತ್ಯೇಕ ಜನಾಂಗವೆಂದು ದಾಖಲಿಸಿರುವುದರಿಂದ ಮತ್ತು ಇತಿಹಾಸಕಾರರು ಗೆಝೆಟೀಯರ್‌ಗಳಲ್ಲಿ ಹಾಗೆಯೇ ದಾಖಲಿಸಿರುವುದರಿಂದ ಜಾತಿಯ ಲಾಭವೇ ಗೊತ್ತಿಲ್ಲದ ಅಶಿಕ್ಷಿತ ಭಿಕ್ಷುಕ ವೃತ್ತಿಯ ಈ ಸಮುದಾಯ ಆ ಕುರಿತು ತಲೆ ಕೆಡಿಸಿಕೊಳ್ಳದೇ ನಿರ್ಲಕ್ಷ್ಯವಹಿಸಿರುವುದರಿಂದ ಮತ್ತು ವೃತ್ತಿಯಲ್ಲಿಯ ಬದಲಾವಣೆಯಿಂದಾಗಿ ದೊಂಬಿದಾಸರೆಂಬ ಹೆಸರೇ ಗಟ್ಟಿಯಾಗಿ ಅಂಟಿಕೊಂಡಿರುವುದು ಕಂಡು ಬರುತ್ತದೆ.

**ಚಕ್ರವಾದ್ಯ ದಾಸರು:** ಚಕ್ರವಾದ್ಯವೆನ್ನುವುದು ಇದೊಂದು ಚರ್ಮವಾದ್ಯ ಚಕ್ರದ ಆಕಾರದಲ್ಲಿರುವ ಈ ಚರ್ಮವಾದ್ಯವನ್ನು ಭಿಕ್ಷೆಗೆ ಹೋದಾಗ ಮತ್ತು ವಿಶೇಷವಾಗಿ ಹನುಮಂತದೇವರ ಪೂಜೆಯ ಸಂದರ್ಭದಲ್ಲಿ ನುಡಿಸುವುದುಂಟು. ಈ ಚಕ್ರವಾದ್ಯವನ್ನು ನುಡಿಸುವವರನ್ನೇ 'ಚಕ್ರವಾದ್ಯ ದಾಸರು' ಎಂದು ಕರೆಯಲಾಗಿದೆ.

ಈ ಚಕ್ರವಾದ್ಯ ದಾಸರನ್ನು ವಾದ್ಯದ ಹಿನ್ನೆಲೆಯಲ್ಲಿ ಗುರುತಿಸದೆ ಹಲವಾರು ಅಧ್ಯಯನಕಾರರು ಇವರನ್ನು ಚಕ್ರವರ್ತಿ ದಾಸರೆಂದು ದಾಖಲಿಸಿದ್ದಾರೆ. ಚಕ್ರವರ್ತಿ ದಾಸರು ಯಾರೆಂಬುದೇ ತಿಳಿಯಲಾರದೆ ಗೊಂದಲಕ್ಕೆ ಕಾರಣವಾಗಿದೆ.

**ಶಂಖದಾಸರು:** ಭಿಕ್ಷಾಟನೆಗೆ ಪ್ರಮುಖವಾಗಿ ಶಂಖವನ್ನೇ ಬಳಸುವವರು ಶಂಖ ದಾಸರಾಗಿದ್ದಾರೆ. ಮನೆ ಮುಂದೆ ನಿಂತು ಜಾಗಟೆ ಹೊಡೆದು ಶಂಖವನ್ನು ಊದಿ ವೆಂಕಟರಮಣ ಗೋವಿಂದ ಗೋವಿಂದ' ಎಂದು ಉಗ್ಗಡಿಸಿ ಇವರು ಭಿಕ್ಷೆ ಬೇಡುತ್ತಾರೆ.

ಇವರು ಭಿಕ್ಷೆಗೆ ಹೋದಾಗ ಹಾಡುವುದಿಲ್ಲವಾದ್ದರಿಂದ ಇವರಲ್ಲಿ ದಂಡಿಗೆ, ತಂಬೂರಿ ಶೃತಿ ವಾದ್ಯಗಳಿರುವುದಿಲ್ಲ. ಇವರನ್ನು ದಾಸಯ್ಯ, ಶಂಖದಾಸಯ್ಯ ಎಂದು ಜನ ಸಂಬೋಧಿಸುತ್ತಾರೆ. ಈ ಜನರೂ ಕೂಡ ಮೈಸೂರು ಪ್ರಾಂತದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡುಬರುತ್ತಾರೆ.

**ಗೋಪಾಳಬುಟ್ಟಿ ದಾಸರು:** ಚೆನ್ನದಾಸರ ಸಮುದಾಯದ ಎಲ್ಲ ಉಪನಾಮದ ಸಮುದಾಯಗಳವರು ಗೋಪಾಳಬುಟ್ಟಿಯನ್ನು ಬಳಸುವ ವಾಡಿಕೆಯಿದೆ. ಭಿಕ್ಷೆಯ ಅಕ್ಕಿ ಮತ್ತು ದವಸ ಧಾನ್ಯಗಳನ್ನು ಈ ಗೋಪಾಳಬುಟ್ಟಿಯಲ್ಲಿಯೇ ನೀಡಿಸಿಕೊಳ್ಳುತ್ತಾರೆ. ಗೋಪಾಳಬುಟ್ಟಿಯು ಚೆನ್ನದಾಸರ ಸಮುದಾಯದ ಕುಲಸಂಕೇತವೇ ಆಗಿದೆ. ಕೆಲವು ಕಡೆ ಭಿಕ್ಷಾಟನೆಗೆ ಗೋಪಾಳಬುಟ್ಟಿಯ ಬದಲಿಗೆ ಜೋಳಿಗೆಯನ್ನು ಒಯ್ದರೂ ಮನೆಯಲ್ಲಿಯಾದರೂ ಅದನ್ನು ಇಟ್ಟಿರುತ್ತಾರೆ. ಕೆಲವರು ಆ ವೃತ್ತಿಯನ್ನು ಬಿಟ್ಟಿದ್ದರೂ ತಮ್ಮ ಊರಿನ ಸಮೀಪದ ಹನುಮಂತ ದೇವರ ಜಾತ್ರೆಯ ಸಂದರ್ಭದಲ್ಲಿ ದೇವಸ್ಥಾನದ ಮುಂದಿರುವ ಗೋಪಾಳಬುಟ್ಟಿಯನ್ನು ಹೆಗಲಿಗೆ ಹಾಕಿಕೊಂಡು ಅಲ್ಲಿಯೇ ನಾಲ್ಕು ಜನರಿಂದ ಭಿಕ್ಷೆ ಬೇಡುವ ಸಂಪ್ರದಾಯವಿದೆ. ನಿರಂತರವಾಗಿ ಗೋಪಾಳಬುಟ್ಟಿಯಲ್ಲಿಯೇ ಭಿಕ್ಷಾಟನೆ ಮಾಡುವವರನ್ನು ಗೋಪಾಳ ಬುಟ್ಟಿದಾಸರೆಂದು ಕರೆಯಲಾಗುತ್ತದೆ.

ವಿಶೇಷವಾಗಿ ವಿಜಾಪೂರ, ಬಾಗಲಕೋಟ ಜಿಲ್ಲೆಗಳಲ್ಲಿ ರೈತರು ರಾಶಿ ಮಾಡುವಾಗ ಆಯಗಾರಿಕೆಯಲ್ಲೊಬ್ಬರಾದ ಹೊಲೆದಾಸರು ಗೋಪಾಳಬುಟ್ಟಿಯನ್ನಿಟ್ಟು ಧಾನ್ಯ ಪಡೆಯುವ ರೂಢಿ ಈಗಲೂ ಇದೆ. ಗೋಪಾಳಬುಟ್ಟಿಗೆ ಧಾನ್ಯ ಹಾಕಿದ ನಂತರವೇ ತಮ್ಮ ಧಾನ್ಯ ತುಂಬುವ ಕಾರ್ಯ ರೈತರು ಪಾಲಿಸಿಕೊಂಡು ಬಂದಿರುವುದಿದೆ. ಅಕಸ್ಮಾತ್ ಗೋಪಾಳಬುಟ್ಟಿದಾಸರು ಬರದಿದ್ದರೆ ಅವರ ಪಾಲಿನ ಧಾನ್ಯಗಳನ್ನು ತೆಗೆದಿರಿಸಲಾಗುತ್ತದೆ.

ಈ ಮೇಲಿನ ದಾಸ ಸಮುದಾಯದ ಪರ್ಯಾಯ ನಾಮಗಳು ವೈಷ್ಣವ ದೀಕ್ಷೆ ಪಡೆದ ಹರಿದಾಸ ಸಂಪ್ರದಾಯದಲ್ಲಿ ಭಿಕ್ಷಾಟನೆಗೆ ಹೋಗುವಾಗ ಬಳಸುವ ವಾದ್ಯ ಪರಿಕರಗಳ ಮೂಲಕ ಬಂದಿರುವಂತಹವುಗಳಾಗಿವೆ. ಎಷ್ಟೋ ಸಮುದಾಯಗಳಲ್ಲಿ ವಾದ್ಯಗಳ ಮೂಲಕವಾಗಿಯೇ ಗುರುತಿಸಿಕೊಂಡಿರುವ ಸಂಗತಿಗಳಿವೆ. ಉದಾಹರಣೆಗೆ ಚೌಡಿಕೆಯವರು, ಕಹಳೆ (ಶಿಂಗೆ) ಯವರು, ಹಲಗೆಯವರು ಇತ್ಯಾದಿ ಎಷ್ಟೋ ಸಾರಿ ವಾದ್ಯಗಳೇ ಜಾತಿಯನ್ನು ಸೂಚಿಸುವ ಸಂಕೇತಗಳಾಗಿವೆ. ಮತ್ತು ಆ ವಾದ್ಯಗಳು ಆಯಾ ಜಾತಿಗಳಿಗೆ ಸೀಮಿತವಾಗಿವೆ. ಡಾ ಎಂ ಚಿದಾನಂದ ಮೂರ್ತಿಯವರು ಪರ್ರೈಯನ್ ಶಬ್ದ ಪರ್ರೈಯರ್‌ದಿಂದ ಜನಿಸಿದ್ದು ಪರ್ರೈಯರ್ ಎಂದರೆ ಪರೆ(ಪರೆ, ಹರೆ) ವಾದ್ಯವನ್ನು ನುಡಿಸುವವರು ಎಂದು ವಿವೇಚಿಸಿದ್ದಾರೆ. ಹೀಗೆ ಭಿಕ್ಷಾಟನೆ ಸಂದರ್ಭದಲ್ಲಿ ತಾವು ಬಳಸಿದ ಪ್ರಮುಖ ವಾದ್ಯಗಳೇ ದಾಸ ಸಮುದಾಯದ ಉಪನಾಮಗಳಾಗಿ ಮಾರ್ಪಟ್ಟಿವೆ.

ಒಂದೇ ಸಮುದಾಯದ ಬೇರೆ ಬೇರೆ ವೃತ್ತಿಗಳು ಸಮುದಾಯದ ಪರ್ಯಾಯ

ಪದಗಳಿಗೆ ಜನ್ಮ ನೀಡಿವೆ. ಒಂದೇ ಮೂಲದ ದಾಸ ಸಮುದಾಯವು ವೃತ್ತಿ ಬೇಧದಿಂದಾಗಿ ಬೇರೆ ಬೇರೆಯಾಗಿ ಗುರುತಿಸಿಕೊಂಡಿದೆ.

**ದಶವಂತರು:** ವೈಷ್ಣವ ಭಕ್ತರಾಗಿರುವುದರಿಂದ ವಿಷ್ಣುವಿನ ದಶಾವತಾರದ ಪ್ರಸಂಗಗಳನ್ನು ಅಭಿನಯಿಸುವುದರಿಂದ ಈ ಹೆಸರುಬಂದಿಂದೆಯೆಂದು ಆ ಸಮುದಾಯದ ಹಿರಿಯರು ಹೇಳಿಕೊಳ್ಳುತ್ತಾರೆ. ಜನಪದ ವಿದ್ವಾಂಸರಾದ ಹೆಂಡಿಯವರು ಈ ಕುರಿತು ಬರೆಯುತ್ತ "ಆಟದ ದಾಸರಿಗೆ 'ದಶಂತ' (ದಶವಂತ)ರೆಂದು ನಾಮಾಂತರವಿರುವುದು. ಅವರ ಆಟದ ಮೂಲ ವಸ್ತು ದಶಾವತಾರ ಲೀಲೆಯಾಗಿತ್ತೆಂದು ಊಹಿಸಲು ಆಸ್ಪದವೀಯುತ್ತಿದೆ (ಸುಂಕಾಪುರ, ಎಂ ಎಸ್:೧೯೭೭:೯೮) ಎಂದಿರುವುದು ಸರಿಯಾಗಿದೆ. ಈಗಲೂ ಆ ಸಮುದಾಯದವರಲ್ಲಿ ಅನೇಕ ಪಾರಿಜಾತ ಕಲಾವಿದರಿದ್ದಾರೆ. ಸ್ತ್ರೀ ಕಲಾವಿದರು ಹೆಚ್ಚಿಗಿದ್ದಾರೆ ವಿಜಾಪುರ ಜಿಲ್ಲೆಯಲ್ಲಿ ಮತ್ತು ಗುಲಬರ್ಗಾ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಈ ಸಮುದಾಯದ ಜನ ಕಂಡು ಬರುತ್ತಾರೆ.

**ಆಟದ ದಾಸರು:** ಇವರೂ ಕೂಡ ದಶವಂತ ಸಮುದಾಯದಂತಯೇ ವಿಷ್ಣುವಿಗೆ ಸಂಬಂಧಿಸಿದ ಲೀಲೆಗಳನ್ನು ಬಯಲಾಟಗಳ ಮೂಲಕ ಪ್ರದರ್ಶಿಸುವವರು. ಉತ್ತರ ಕರ್ನಾಟಕದಲ್ಲಿ ಇವರನ್ನು ಆಟದ ದಾಸರೆಂದರೆ ಮೈಸೂರು ಪ್ರಾಂತದ ಕಡೆಗೆ ಭಾಗವತ ದಾಸರೆಂದು ಕರೆಯುತ್ತಾರೆ. ಇವರಲ್ಲಿ ಕೆಲವರು ಗಂಡಸರೇ ಹೆಣ್ಣಿನ ಪಾತ್ರ ಹಾಕುತ್ತಾರೆ. ಕೆಲವೆಡೆ ಹೆಂಗಸರೇ ರಂಗದ ಮೇಲೆ ಪಾತ್ರ ವಹಿಸುತ್ತಾರೆ. ಈಗಿನ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಗುಳೇದಗುಡ್ಡ ಮತ್ತು ಹಂಸನೂರಿನ ಕಲಾವಿದೆಯರು ರಂಗಭೂಮಿಯಲ್ಲಿ ಹೆಸರು ಮಾಡಿದವರಾಗಿದ್ದಾರೆ. ರಂಗಭೂಮಿಯ ಮೇಲೆ ಮೊದಲು ಕಾಣಿಸಿಕೊಂಡ ಕಲಾವಿದೆಯರೆಂದರೆ ಈ ಊರಿನ ಚೆನ್ನದಾಸ ಸ್ತ್ರೀಯರು. ಯಲ್ಲಾಸಾನಿ ಮತ್ತು ಗಂಗಾಸಾನಿಯವರು ಸುಪ್ರಸಿದ್ಧರು. ದಶವಂತ ಸಮಾಜದ ಸ್ತ್ರೀ ಕಲಾವಿದರೂ ಶ್ರೀಕೃಷ್ಣಪಾರಿಜಾತ ಬಯಲಾಟಕ್ಕೆ ಪ್ರಸಿದ್ಧರಾಗಿದ್ದಾರೆ.

ಮೈಸೂರು ಪ್ರಾಂತದಲ್ಲಿ ದೊಂಬಿದಾಸರಲ್ಲಿ ಆಟದವರಿಗೆ ಭಾಗವತದಾಸರೆಂಬ ಹೆಸರಿದೆ. ಅಲ್ಲಿ ಪುರುಷರೇ ಸ್ತ್ರೀ ವೇಷಹಾಕುವುದರಿಂದ ಇವರನ್ನು ಹೆಣ್ಣು ವೇಷದವರೆಂದೂ ಕರೆಯುತದ್ದಾರೆ. ಈ ವೃತ್ತಿಗಳೇ ಜಾತಿಗಳೆಂಬಂತೆ ಹಿಂದಿನ ಅಧ್ಯಯನ ಕಾರರು ಭಾವಿಸಿ ದಾಖಲಿಸಿದ್ದಾರೆ.

**ಹೊಲೆಯದಾಸರು:** "ಏಕತಾರಿ, ದಮ್ಮಡಿ, ಕೈಚಿಟಿಕಿಗಳನ್ನು ಹಿಡಿದು ಹಾಡುತ್ತ ಮನೆ ಮನೆತಿರುಗಿ ಸುಗ್ಗಿಯಲ್ಲಿ ಕಣಗಳಿಗೆ ಅಡ್ಡಾಡಿ, ಗೋಪಾಳ ಬುಟ್ಟಿಯಲ್ಲಿ ಭಿಕ್ಷೆ ಎತ್ತಿ ಉಪಜೀವನ ಸಾಗಿಸುವ ದಾಸ ಪಂಗಡವನ್ನು ಗೋಪಾಳ ಬುಟ್ಟಿಯ ದಾಸರು, ಹೊಲೆ (ಈ ಪದಪ್ರಯೋಗ ಈಗ ಬಹಿಷ್ಕೃತ) ದಾಸರು ಎಂದು ಕರೆಯಲಾಗು ತ್ತಿದ್ದಿತು(ಅವರೇ: ೧೯೭೭:೯೭)" ಎಂದು ಬಿ ಬಿ ಹೆಂಡಿಯವರು ಉಲ್ಲೇಖಿಸಿದ್ದಾರೆ. 'ಹೊಲೆ' ಶಬ್ಧ 'ಪೊಲ' ಎನ್ನುವ ಹಳಗನ್ನಡ ಪದದಿಂದ ನಿಷ್ಪನ್ನವಾಗಿದೆ. 'ಪೊಲ' ಹೊಲ ಎನ್ನುವ ಅರ್ಥ ನೀಡುತ್ತದೆ. ಹೊಲದ ಕೆಲಸ ಅಥವಾ ಕೃಷಿಕ ಮೂಲದವರು

ಎನ್ನುವ ಅರ್ಥ ನೀಡುತ್ತದೆ. ಹನುಮಂತದೇವರ ಭಕ್ತರಾಗಿರುವ ಇವರು ದೇವರ ಹೊಲವನ್ನು ಉಳುಮೆ ಮಾಡುವ ಪರಿಪಾಠವೂ ಇದೆ. ಮೂಲದಲ್ಲಿ ಇವರು ಹೊಲದ ಒಡೆಯರಾಗಿರುವುದರಿಂದ ಈ ದಾಸರಿಗೆ ಹೊಲೆಯದಾಸರು ಎಂಬ ಅರ್ಥ ಬಂದಿದೆ. "ಮಾನವಶಾಸ್ತ್ರ ಸಂಸ್ಕೃತಿಯಲ್ಲಿ ಬರುವ ಆಹಾರೋತ್ಪನ್ನೆಯ ಆರಂಭದ ಹಂತದಲ್ಲಿ ಆಗ ಹೊಲೆಯ ಎಂಬ ಹೆಸರಿಲ್ಲದ ಅವನು ತನ್ನ ಪೂರ್ವಜರ ಬಳುವಳಿಯಾಗಿ ನೆಲದ ಆ ಹಕ್ಕು ಪಡೆದಿದ್ದಾನೆ(ಭರಣಿ, ಸುಭಾಷ್:೨೦೦೫:೩೨)".

"ಹೊಲೆಯ ದಾಸರಿ ವೃತ್ತಿ ಜೀವನ ವಿಧಾನಮು" ಎನ್ನುವ ತೆಲುಗಿನ ಕೃತಿಯಲ್ಲಿ ಹೀಗೆ ಹೇಳಲಾಗಿದೆ.

"ಹೊಲೆಯ ದಾಸರು ಎಂಬ ಶಬ್ಧ ಕರ್ನಾಟಕದ ಕನ್ನಡ ಮಾತೃಭಾಷೆಯ ಕಾರಣದಿಂದಾಗಿ ಬಂದಿದೆ. 'ಹೊಲ' ಎಂದರೆ ಕೃಷಿಗಾಗಿ ಬಳಸುವ ಭೂಮಿ ಎಂದರ್ಥ. ಅಂದರೆ ಭೂಮಿಗೆ ಸೇವಕನಾಗಿ, ದಾಸನಾಗಿ ಇರುವುದರಿಂದ ಹೊಲದ ದಾಸ, ಹೊಲೆದಾಸ, ಹೊಲೆಯದಾಸ, ಹೀಗಾಗಿದೆ. (ಬಿತ್ತುವುದಕ್ಕೆ, ಕೊಯ್ಯುವುದಕ್ಕೆ, ರಾಶಿಗೆ ಮುನ್ನ ಹೊಲದ ಸೇವಕನಾದ, ದಾಸನಾದ ಅವನಿಗೆ ಮೊದಲ ಆದ್ಯತೆಯಾಗಿ ದಾನ, ಧರ್ಮದಸ್ಥಾನ ಸಿಗುತ್ತಿತ್ತು). ಆಂಧ್ರ ರಾಜ್ಯದಲ್ಲಿ 'ಹೊಲಿಯ' ಹೇಗೆ ಬಂತೆಂದರೇ ತೆಲುಗಿನಲ್ಲಿ 'ಓಲಿ' ಅಂದರೆ 'ಶುಲ್ಕ' ಅಂದರೆ ಕನ್ಯಾ ಶುಲ್ಕ ಅಂತಾರೆ. ದಾಸರ ಕುಲ ದಲ್ಲಿ ಮದುವೆಗೆ ಮುಂಚೆ 'ಓಲಿ' ಕೊಡುವ ಆಚಾರವಿದೆ. ಬ್ರಾಹ್ಮಣ ಮತ್ತು ಅವರ ಭೂಮಿಯ ದಾಸರಾದ ಇವರಿಗೆ ಅವರ ದಾಸತ್ವಕ್ಕಾಗಿ 'ಓಲಿ' (ತೆರುವು) ತೆಗೆದು ಕೊಳ್ಳುತ್ತಿದ್ದರು. ಹೀಗಾಗಿ ದಾಸರ ಜೊತೆ 'ಓಲಿ' ತೆಗೆದುಕೊಳ್ಳುವ ದಾಸರಾಗಿ ಓಲಿದಾಸರು, ನಂತರ ಹೊಲಿದಾಸರು, ಹೊಲೆದಾಸರು, ಹೊಲೆಯದಾಸರಾಗಿ ಪರಿವರ್ತನೆಯಾಗಿದೆ ಎನ್ನಲಾಗಿದೆ.

"ಗೋಪಾಳಬುಟ್ಟಿ ದಾಸರು" ಭಾಗದಲ್ಲಿ ಹೇಳಿದಂತೆ ಹೊಲೆಯ ದಾಸರು ರಾಶಿಯ ಮೊದಲ ಪಾಲು ಪಡೆಯುವವರಾಗಿದ್ದಾರೆ. ಅಂದರೆ ಈ ನೆಲದ, ಹೊಲದ ಮಾಲೀಕರು ಅಥವಾ ಮೂಲ ನಿವಾಸಿಗಳು ಅವರಾಗಿದ್ದು, ಕಾಲಾನಂತರದಲ್ಲಿ ಅದು ಬೇರೆಯವರ ಕೈವಶವಾಗಿ ಈಗ ಅದರ ನೆನಪಿಗಾಗಿ ಅವರ ಪಾಲು ಮೊದಲು ಸಲ್ಲಿಸುವ ಕ್ರಮದಿಂದ, ರಾಶಿಯ ಮೊದಲ ಭಾಗ ರೈತರು ಗೋಪಾಳಬುಟ್ಟಿಗೆ ನೀಡುವ ಆಚರಣೆಯ ಸಂಪ್ರದಾಯ ಉಳಿದುಕೊಂಡು ಬಂದಿರುವ ಸಾಧ್ಯತೆಯಿದೆ.

ಉತ್ತರ ಕರ್ನಾಟಕ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ಹೊಲೆಯ ದಾಸರೆಂದೂ, ಆಂಧ್ರ ಭಾಗದ ಕರ್ನಾಟಕ ಜಿಲ್ಲೆಗಳಲ್ಲಿ ಹೊಲೆಯದಾಸರಿ ಎಂದು ಕರೆಯಲಾಗಿದೆ.

ಮಾಲದಾಸರಿ: ಆಂಧ್ರದ ಗಡಿಗೆ ಹೊಂದಿಕೊಂಡಿರುವ ಗುಲಬರ್ಗಾ, ಬೀದರ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಈ ಸಮುದಾಯವಿದೆ."ಮಾಲದಾಸರಿ ಎನ್ನುವುದು ದಾಸವರ್ಗಗಳಲ್ಲಿ ಒಂದು ಹೀನ ಕುಲವೆಂದೂ ಹೇಳಬಾರದ ಕುಲವೆಂದೂ

ಮಾತುಗಳಿವೆ. ಆದರೆ ಇಲ್ಲಿನ ಮಾಲದಾಸ ಮಹಾವಿಷ್ಣುಭಕ್ತ. ಕುರಂಗುಡಿಯ ಅರ್ಚಾಮೂರ್ತಿ ಅವನ ಇಷ್ಟದೈವ. ಅವನ ಹೆಗ್ಗಳಿಕೆಯಿಂದ ಬ್ರಹ್ಮರಾಕ್ಷಸನಿಗೂ ಮುಕ್ತಿ ದೊರೆಯಿತು(ರಾಮಚಂದ್ರರಾವ್, ಸಾ ಕೃ:೨೦೦೩:೩೦೭). ಎನ್ನುವ ಕಥೆ ಮಾಲದಾಸರಿ ಕಥೆ' ಎಂಬ ಕಾವ್ಯದಲ್ಲಿ ಚಿತ್ರಣಗೊಂಡಿದೆ." ಈ ಮಾಲದಾಸರಿಯ ವಂಶವೇ ಮಾಲದಾಸರಿಗಳು' ಎಂಬ ಪ್ರತೀತಿ ಇದೆ. ಇದು ವಿಜಯನಗರದ ಅರಸು ಶ್ರೀಕೃಷ್ಣದೇವರಾಯ ರಚಿಸಿರುವ ಆಮುಕ್ತ ಮಾಲ್ಯದ' ಎಂಬ ತೆಲುಗು ಕಾವ್ಯದಲ್ಲಿ ಮೂಡಿಬಂದಿದೆ. ಕ್ರಿ ಶ ೬-೭ ನೇ ಶತಮಾನದ ಆಳ್ವಾರರಿಗೆ ಸಂಬಂಧಿಸಿದ ಕಥೆಗಳಲ್ಲಿ ವಿಷ್ಣುಭಕ್ತ ಪೆರಿಯಾಳ್ವಾರರ ಕುರಿತು ಕೃತಿಯಲ್ಲಿ ಬಂದಿದೆ.

ಹೀಗೆ ವೃತ್ತಿ ಮತ್ತು ವೃತ್ತಿಯಾಧಾರಿತ ವಾದ್ಯಗಳ ಮೂಲಕ ಈ ದಾಸ ಸಮುದಾಯದ ಚರಿತ್ರೆಯ ನಂಟಿದೆ. ಥರ್ಸ್ಟನ್ ಅವರ ಪ್ರಬಂಧದಲ್ಲಿ ಇದನ್ನು ಸೂಚ್ಯವಾಗಿ ಹೇಳಲಾಗಿದೆ. "Dasar is not a Caste, but Simply an Occupational division" ಎನ್ನಲಾಗಿದೆ. ಹಾಗೆಯೇ ಕೆ ಎಸ್ ಸಿಂಗ್ ಅವರ "People of India-Karnataka" ಗ್ರಂಥದಲ್ಲೂ ಕೂಡ "ದಾಸರಿಗಳಲ್ಲಿ ಸಾಮಾಜಿಕ ವಿಭಜನೆ, ಸಾಮಾಜಿಕ ಶ್ರೇಣಿ ಹಾಗೂ ಉಪವಿಭಾಗಗಳಿರುವುದಿಲ್ಲ. ಆದರೆ ಅವರು ಮಾಡುವ ಉದ್ಯೋಗದಿಂದ ಶಂಖದಾಸರಿ, ಶನಿವಾರ ದಾಸರಿ, ನಾಮಧಾರಿ ದಾಸರಿ ಮತ್ತು ಧರ್ಮದಾಸರಿ ಎಂದು ವ್ಯತ್ಯಾಸ ಮಾಡುವುದುಂಟು" ಎಂದು ಹೇಳಲಾಗಿದೆ. ಭಿಕ್ಷೆ ಬೇಡುವ ವೈಷ್ಣವ ಪಂಥದ ಈ 'ದಾಸ' ಸಮುದಾಯ ಕಲಾನಿಪುಣರ ಸಮುದಾಯವೇ ಆಗಿದೆ.

ವೃತ್ತಿ ಮತ್ತು ವೃತ್ತಿಪರ ಪರಿಕರಗಳ ಮೂಲಕ ಚೆನ್ನದಾಸರ ಸಮುದಾಯವು ಬೇರೆ ಬೇರೆ ಹೆಸರುಗಳಿಂದ ನಾಡಿನಾದ್ಯಂತ ಚದುರಿದೆ. ನೆರೆಯ ರಾಜ್ಯಗಳಾದ ಆಂಧ್ರ ಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ಅಲ್ಲದೆ ಗುಜರಾತ್‌ಗಳಲ್ಲಿಯೂ ಚೆನ್ನದಾಸರ ಸಮುದಾಯವಿರುವುದಾಗಿ ತಿಳಿದು ಬರುತ್ತದೆ.

ಭಾರತ ಸರಕಾರದ ೧೯೩೬ರ ಆರ್ಡರ್ಸ್ ಇನ್ ಕೌನ್ಸಿಲ್(Orders-in-Council) ದಲ್ಲಿಯ ಒಂದು ಪರಿಶಿಷ್ಟದಲ್ಲಿ ಅಸ್ಪೃಶ್ಯ ಎಂದು ಪರಿಗಣಿಸಲ್ಪಟ್ಟಿರುವ ಜನಾಂಗ ಇಲ್ಲವೆ ಪಂಗಡ ಇಲ್ಲವೆ ಗುಂಪುಗಳ ಪಟ್ಟಿಯನ್ನು ಕೊಡಲಾಗಿದೆ. ಅದನ್ನು ಬಾಬಾಸಾಹೇಬ ಅಂಬೇಡ್ಕರ್ ಅವರು ತಮ್ಮ "ಅಸ್ಪೃಶ್ಯರು ಯಾರು?" ಎಂಬ ಕೃತಿಯಲ್ಲಿ ದಾಖಲಿಸಿದ್ದಾರೆ. ವಿವಿಧ ರಾಜ್ಯಗಳಲ್ಲಿನ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಚೆನ್ನದಾಸರ, ಚಕ್ರವಾದ್ಯ ದಾಸರ, ಮಾಲದಾಸರಿ, ಮಾಲದಾಸು, ಹೊಲೆಯ ದಾಸರಿ, ನಟ, ಮುಂತಾಗಿ ಈ ಸಮುದಾಯದ ಹೆಸರುಗಳಿವೆ. ನಟ, ಎನ್ನುವ ಪದ ನಟುವರಾದ ದಾಸರಿಗೆ ಬಳಸುವ ಪದವಾಗಿದೆ. ಈ 'ನಟ' ಜಾತಿ ಉತ್ತರದ ಹಲವಾರು ರಾಜ್ಯಗಳ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿದೆ. ಅಂದರೆ ಈ ಸಮುದಾಯ ಭಾರತದ ತುಂಬ ಹರಡಿರುವ ಸಾಧ್ಯತೆ ಇದೆ ಎಂಬುದನ್ನು ಸೂಚಿಸುತ್ತದೆ.

## ಪೌರಾಣಿಕ ಹಿನ್ನೆಲೆ

ಪ್ರತಿಯೊಂದು ಸಮುದಾಯವು ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು, ಪರಂಪರೆಯನ್ನು ಕಟ್ಟಿಕೊಳ್ಳುವುದು ನಮ್ಮಲ್ಲಿ ರೂಢಿಗೆ ಬಂದಿದೆ. ಈ ಹಿನ್ನೆಲೆ ಅಥವಾ ಪರಂಪರೆಯು ಧಾರ್ಮಿಕ ಮೂಲ ಪುರುಷನಿಂದಿರಬಹುದು, ಪೌರಾಣಿಕ ವ್ಯಕ್ತಿ ಅಥವಾ ಸಂಗತಿಯಿಂದಿರಬಹುದು. ಚಾರಿತ್ರಿಕ ವ್ಯಕ್ತಿ ಅಥವಾ ಘಟನೆಯನ್ನಾಧರಿಸಿರಬಹುದು ಇಲ್ಲವೆ ಸಾಮಾಜಿಕ ಸಂಗತಿಯನ್ನವಲಂಬಿಸಿರಬಹುದು. ತನ್ನ ಸಮುದಾಯಕ್ಕೊಂದು ದೀರ್ಘ ಮತ್ತು ಹೆಮ್ಮೆ ತರುವ ಪರಂಪರೆ ಇರಬೇಕೆಂದು ಪ್ರತಿ ಸಮುದಾಯವು ಇಚ್ಛಿಸುತ್ತದೆ.

ಚೆನ್ನದಾಸರ ಸಮುದಾಯವು ಚದುರಿ ಹೋಗಿರುವ ಕಡಿಮೆ ಜನಸಂಖ್ಯೆಯ ಸಮುದಾಯವಾಗಿದೆ. ಶೈಕ್ಷಣಿಕವಾಗಿಯೂ ತೀರಾ ಹಿಂದುಳಿದಿದೆ. ಸಂಘಟನಾತ್ಮಕವಾಗಿಯೂ ಅಷ್ಟೇ ಹಿಂದಿದೆ. ಹೀಗಿರುವ ಈ ಸಮುದಾಯ ತನಗೊಂದು ಐತಿಹಾಸಿಕ ಹಿನ್ನಲೆಯಿದೆ ಎಂಬುದನ್ನು ಗಮನಿಸಲು ಮುಂದಾಗಿಲ್ಲ. ಪೌರಾಣಿಕವಾಗಿಯೂ ಅಷ್ಟೆ. 'ಪ್ರತಿ ಸಮುದಾಯವು ತಮ್ಮ ವಂಶವು ಒಬ್ಬ ಮಹರ್ಷಿಯಿಂದ ಆರಂಭವಾದ ಗೋತ್ರಕ್ಕೆ ಸಂಬಂಧಿಸಿದ್ದೆಂದು ಸಾಮಾನ್ಯವಾಗಿ ಹೇಳುವ ರೂಢಿ ನಮ್ಮ ದೇಶದಲ್ಲಿದೆ. ಆದರೆ ದಾಸರ ವಂಶ ಮೂಲಪುರುಷನು ಯಾವ ಋಷಿಯೂ ಆಗಿರದೆ ಸಾಮಾನ್ಯ ಮಾನವನಾಗಿದ್ದಾನೆ. ಆತನೇ ಅಜಮಿಳನು. ಈತ ಊರ ಹೊರಗೆ ಜೀವಿಸುತ್ತಿದ್ದನು. ಅಂತ್ಯಜ ಕುಲದವನಾಗಿದ್ದನೆಂದು ಹೇಳುವರು. ಆತನು ಸಮೀಪದ ಅರಣ್ಯದಿಂದ ಸೌದೆ ತಂದು ಮಾರಿ ಉಪಜೀವನ ಸಾಗಿಸುತ್ತಿದ್ದನು. ಅದೇ ಹಳ್ಳಿಯ ಇನ್ನೊಂದು ಹೊರಬದಿಯಲ್ಲಿ ಬಹಿಷ್ಕೃತ ಉಚ್ಚಕುಲದ ಸ್ತ್ರೀಯೋರ್ವಳು ರೂಪ ಜೀವಿಯಾಗಿ ಜೀವಿಸುತ್ತಿದ್ದಳು. ಅಜಮಿಳನಿಗೂ ಅವಳಿಗೂ ಶರೀರ ಸಂಬಂಧ ಬೆಳೆದು, ಇಬ್ಬರೂ ಕೂಡಿ ಜೀವಿಸಹತ್ತಿದರು. ಕಾಲಾಂತರದಲ್ಲಿ ಅವನಿಗೆ ಅನೇಕ ಗಂಡು ಮತ್ತು ಹೆಣ್ಣು ಮಕ್ಕಳು ಹುಟ್ಟಿದರು. ಅಜಮಿಳನು ಅತೀ ಕಾಮುಕ. ತನ್ನ ಮಗಳನ್ನೇ ಕೂಡಿ ತನ್ನ ಕಾಮೇಚ್ಛೆಯನ್ನು ತಣಿಸಿಕೊಂಡವ. ತನ್ನ ಅವಸಾನ ಕಾಲದಲ್ಲಿ ಅಪ್ರಯತ್ನವಾಗಿ ತನ್ನ ಕೊನೆಯ ಮಗನಾದ ನಾರಾಯಣನನ್ನು ಕೂಗಿದನು. ಪ್ರಾಣ ಹೋಗುವ ಸಮಯದಲ್ಲಿ ಭಗವಂತನ ನಾಮಸ್ಮರಣೆ ಮಾಡಿದ್ದರಿಂದ ಆತನು ಮಾಡಿದ ಪಾಪಗಳೆಲ್ಲಾ ತೊಳೆದು ಹೋಗಿ, ಆತನನ್ನು ವೈಕುಂಠಕ್ಕೆ ಒಯ್ಯಲಾಯಿತು. ಈ ಸಂತತಿಯೇ ಈಗಿನ ದಾಸರು" (ಧೂಪದ, ಎಂ ಟಿ: ೧೯೭೧:೨೧೬-೭) ಎಂದು ಉಲ್ಲೇಖಿಸಲಾಗಿದೆ. ಈ ಹಿನ್ನಲೆಯ ಆಶಯವನ್ನು ಅಲ್ಲಿ ಸಮಾಜಶಾಸ್ತ್ರ, ನರಕುಲ ವಿಜ್ಞಾನದ ಅರ್ಥದಲ್ಲಿ ಹೀಗೆ ನಿರೂಪಿಸಿದ್ದಾರೆ. ಬಹಿಷ್ಕಾರ ಹೊಂದಿದ ಸ್ತ್ರೀ ಆರ್ಯಳಾಗಿಯೂ, ಪುರುಷನು ದ್ರಾವಿಡನೂ ಇರಬಹುದು. ದಾಸ ಸಮುದಾಯವು ಕ್ಷತ್ರಿಯರೆಂದು, ಮಾರುತಿಯ ಪೂಜಾರಿಗಳೆಂದೂ ತಿಳಿದು ಬಂದಿತು. ಉತ್ತರ ಕರ್ನಾಟಕದ ಪ್ರತಿ ಹಳ್ಳಿಯಲ್ಲಿಯೂ ಹನುಮಂತ, ಮಾರುತಿಯ ದೇವಾಲಯವಿದೆಯೆಂದರೂ ತಪ್ಪಿಲ್ಲ. ಅನೇಕ ಆಂಜನೇಯ ಪೂಜಾರಿಗಳು ಕ್ಷತ್ರಿಯರಾಗಿದ್ದಾರೆ (ಅವರೇ:೧೯೭೧:೨೧೭).

ಈ ಹಿನ್ನೆಲೆಯ ಅಜಮಿಳನ ಪ್ರಸಂಗವನ್ನು ಬಿ ಫ್ಹಿ ಗುಂಜೆಟ್ಟಿಯವರು ಹೀಗೆ ಉಲ್ಲೇಖಿಸಿದ್ದಾರೆ. ದಾಸರ ಮೂಲ ಪುರುಷ ಅಜಾಮಿಳನೆಂದು ಒಂದು ಆಖ್ಯಾನಯಿಕೆ ಯುಂಟು. ಅಜಮಿಳನೆಂಬ ಕನ್ಯಾಕುಬ್ಜದಲ್ಲಿ ಬ್ರಾಹ್ಮಣ ಮಾತಾಪಿತೃಗಳನ್ನು, ಧರ್ಮ ಪತ್ನಿಯನನ್ನು ಪರಿತ್ಯಾಗ ಮಾಡಿ ಶೂದ್ರ ಸ್ತ್ರೀ ಸಂಪರ್ಕ ಮಾಡಿ ಅನೇಕ ಮಕ್ಕಳನ್ನು ಹೊಂದಿದನು. ಆ ಮಕ್ಕಳೇ ದಾಸಕುಲದವರಾದರೆಂದು ಹೇಳುವುದುಂಟು (ಸುಂಕಾಪುರ, ಎಂ ಎಸ್: ೧೯೮೦: ೮೫).

ಮತ್ತೊಂದು ನಂಬಿಕೆಯ ಪ್ರಕಾರ ಬ್ರಾಹ್ಮಣನಾದ ಅಜಮಿಳನು ಕೆಳಜಾತಿಯ ಹೆಣ್ಣನ್ನು ಮದುವೆಯಾದನು. ಮುಂದೆ ಅವನಿಗೊಂದು ಗಂಡು ಮಗು ಹುಟ್ಟಿತು. ಎರಡೂ ಕುಲದವರು ಈ ಮಗುವನ್ನು ತಮ್ಮವನೆಂದು ಸ್ವೀಕರಿಸಲಿಲ್ಲ. ಬಳಿಕ ಆ ಮಗುವು ದಿಕ್ಕಿಲ್ಲದೆ ಭಿಕ್ಷೆ ಬೇಡುತ್ತ ತಿರುಗುತ್ತ ಹೊರಟ. ಅವನೇ ಚೆನ್ನದಾಸ, ಅವನ ಸಂತತಿಯವರೇ ಚೆನ್ನದಾಸರು (ಮಾಹಿತಿದಾರ: ಮುತ್ತಿನಗೆರೆ, ತುಕಾರಾಮ) ಎಂದು ಹೇಳುವರು.

ಅಜಮಿಳನ ಪ್ರಸಂಗ ಭಾಗವತದಲ್ಲಿ ಬರುತ್ತದೆ. ಪುರಾಣ ಭಾರತ ಕೋಶದಲ್ಲಿ ಹೀಗೆ ಹೇಳಲಾಗಿದೆ. ಅಜಮಿಳನು ಕನೋಜಿನ ಒಬ್ಬ ಬ್ರಾಹ್ಮಣ. ಅತ ಹೊಲತಿಯೊಬ್ಬಳನ್ನು ಕಂಡು ಮೋಹಿಸಿ, ಅವಳೊಡನೆ ಸಂಸಾರಿಯಾಗಿದ್ದು ಹಲವು ಮಕ್ಕಳನ್ನು ಪಡೆದ. ಈತನು ಸಾಯುವ ಕಾಲದಲ್ಲಿ ಯಮದೂತರನ್ನು ಕಂಡು ಭಯದಿಂದ ನಾರಾಯಣ ನೆಂಬ ತನ್ನ ಕಿರಿಯ ಮಗನ ಹೆಸರನ್ನು ಹಿಡಿದು ಕೂಗಲು ಆ ಹರಿನಾಮಸ್ಮರಣೆಯಿಂದಲೇ ಇವನು ವೈಕುಂಠವನ್ನು ಪಡೆದನು. (ಪಂಡಿತಯಜ್ಞ ನಾರಾಯಣ ಉಡುಪ:೧೯೭೫:೨).

ಇನ್ನೊಂದು ಆಖ್ಯಾಯಿನಿಕೆಯ ಪ್ರಕಾರ ವೈಷ್ಣವ ಸಂತನಾದ ಏಕಾಂಗರಂಗಸ್ವಾಮಿಯ ಬಣಜಿಗ ಶಿಷ್ಯ ಹಾಗೂ ಓರ್ವ ಕುರುಬರ ಹೆಂಗಳೆ ಇವರ ಸಂತತಿಯವರೆಂದು ಹೇಳಲಾಗುತ್ತದೆ. ಕಂಚಿ ತಾತಾಚಾರ್ಯರೇ ತಮ್ಮ ಮೂಲ ಪುರುಷನೆಂದು ಹೇಳುವ ಒಂದು ಗುಂಪೂ ಉಂಟು (ಸುಂಕಾಪುರ, ಎಂ ಎಸ್: ೧೯೮೦: ೮೬).

ಎಚ್ ಎ ಸ್ಟುವರ್ಟ್ ಎನ್ನುವಂತಹ ವಿದ್ವಾಂಸರು ದಾಸರ ಕುರಿತು ಹೀಗೆ ಹೇಳಿ ದ್ದಾರೆ. ದಾಸರು ಉತ್ತರ ಜಿಲ್ಲೆಗಳೊಂದರ ಸಿರಿವಂತ ಶೂದ್ರನ ಖ್ಯಾತ ವಂಶಜರು. ಅವನು ಮಕ್ಕಳಿಲ್ಲದ್ದರಿಂದ ತನಗೆ ಮಕ್ಕಳಾದರೆ ಅವರಲ್ಲಿ ಒಬ್ಬರನ್ನು ದೇವರ ಸೇವೆಗೆ ಅರ್ಪಿಸುವೆನೆಂದು ಬೇಡಿಕೊಂಡ. ಅನಂತರದಲ್ಲಿ ತನಗೆ ಹುಟ್ಟಿದ ಹಲವು ಮಕ್ಕಳಲ್ಲಿ ಒಬ್ಬನನ್ನು ದೇವರ ಸೇವೆಗೆಂದು ದಾಸನು (ಸೇವಕ) ಎಂದು ಹೆಸರಿಟ್ಟು ದೇವರ ಸೇವೆಗೆ ಒಪ್ಪಿಸಿದನು. ಅಂದಿನಿಂದ ದಾಸನು ತನ್ನ ತಂದೆಯ ಆಸ್ತಿಯಲ್ಲಿ ತನ್ನ ಪಾಲನ್ನು ಕಳೆದುಕೊಂಡನಲ್ಲದೆ ಆತನ ಮಕ್ಕಳೂ ಆ ಹಕ್ಕಿಗೆ ಎರವಾಗಿ ಭಿಕ್ಷುಕರಾದರು ಅವರೇ ದಾಸರೆಂದೆನಿಸಿದರು ಎಂದು ಅಭಿಪ್ರಾಯಪಟ್ಟಿರುವರು(ಅವರೇ:೧೯೮೦: ೮೬).

ಅಜಮಿಳನ ಆಖ್ಯಾಯಿನಿಕೆಯ ಪ್ರಕಾರ ದಾಸಕುಲವೆಂಬುದು ಆರ್ಯ ಮತ್ತು

ದ್ರಾವಿಡ ಮಿಶ್ರ ಸಂತಾನವನ್ನು ಸೂಚಿಸುವಂತಿದೆ. ಈ ಸಂತಾನಕ್ಕೆ ಚಾತುರ್ವರ್ಣದಲ್ಲಿ ಮತ್ತು ಕಾಲಾನಂತರದ ಸಾಮಾಜಿಕ ವಿಭಜನೆಯ ಜಾತಿ ಪದ್ಧತಿಯಲ್ಲಿ ಹೀನ ಕುಲವೆಂದು ತುಚ್ಛೀಕರಿಸಿರುವ ಸಾಧ್ಯತೆಯಿದೆ. ನಾರಾಯಣ ಎನ್ನುವುದು ವಿಷ್ಣುವಿನ ಅಥವಾ ವೈಷ್ಣವ ಧರ್ಮದ ಪ್ರತೀಕವಾಗಿದ್ದು ಅದನ್ನು ಸೇರಿದ ಇಂಥ ಹೀನ ಕುಲಗಳಿಗೆ ಒಂದು ಸಾಮಾಜಿಕ ಮತ್ತು ಧಾರ್ಮಿಕ ಮನ್ನಣೆ ನೀಡಿ ಗೌರವಿಸಿದುದರ ಪ್ರತೀಕವಾಗಿದೆ. ಅಂದರೆ ತುಚ್ಛೀಕರಣಕ್ಕೊಳಗಾಗಿದ್ದ ದಾಸ ಕುಲವು ವೈಷ್ಣವ ಧರ್ಮವನ್ನು ಸ್ವೀಕರಿಸಿ ಸಾಮಾಜಿಕ ಮತ್ತು ಧಾರ್ಮಿಕ ಮನ್ನಣೆಯನ್ನು ಗಳಿಸಿಕೊಂಡಿದೆ ಎಂದು ಭಾವಿಸಬಹುದಾಗಿದೆ.

### ಐತಿಹಾಸಿಕ ಹಿನ್ನೆಲೆ

ದಾಸ ಸಮುದಾಯಕ್ಕೆ ಈಗ ಲಭ್ಯವಿರುವ ಸಾಹಿತ್ಯದಲ್ಲಿ ಕೆಲವು ಚಾರಿತ್ರಿಕ ಸಂಗತಿಗಳ ಹಿನ್ನೆಲೆಯಿರುವುದನ್ನು ಹಲವಾರು ವಿದ್ವಾಂಸರು ಗುರುತಿಸಿದ್ದಾರೆ. ೧೫, ೧೬ನೇ ಶತಮಾನದಲ್ಲಿ ಹರಿದಾಸ ಪಂಥದ ವೈಷ್ಣವ ಧರ್ಮವನ್ನು ಸ್ವೀಕರಿಸುವ ಮುಂಚೆಯೇ ಈ ಸಮುದಾಯ ದಾಸ ಅಥವಾ ದಾಸರು ಎನ್ನುವ ಜಾತಿಯಿಂದಲೇ ಹೆಸರಾಗಿತ್ತು ಎನ್ನುವುದಕ್ಕೆ ಹಲವಾರು ನಿದರ್ಶನಗಳು ದೊರೆಯುತ್ತವೆ.

ಆರ್ಯರನ್ನು ಪ್ರತಿಭಟಿಸಿದ ದ್ರಾವಿಡರೇ ದಸ್ಯುಗಳಾಗಿ ದಾಸರಾಗಿದ್ದರೆಂದೂ, ಕಲಾನಿಪುಣರಾಗಿದ್ದ ಅವರನ್ನು ನಟುವರೆಂದೂ ಕರೆದಿದ್ದಾರೆಂದೂ, ಅವರೇ ಮುಂದೆ ೬, ೭ನೇ ಶತಮಾನದಷ್ಟೊತ್ತಿಗೆ ವೈಷ್ಣವ ಧರ್ಮಕ್ಕೆ ಸೇರ್ಪಡೆಯಾಗುತ್ತ ವೈಷ್ಣವ ಭಿಕ್ಷುಕರಾದರೆಂದೂ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಭಾರತೀಯ ಗ್ಯಾಸೆಟೀಯರ್‌ನಲ್ಲಿ ಹೀಗೆ ಹೇಳಲಾಗಿದೆ. ಆರ್ಯ ಮತ್ತು ಅನಾರ್ಯ ಬುಡಕಟ್ಟುಗಳು ಒಂದೆಡೆ ನೆಲೆಯೂರಿ ಜೊತೆಗೆ ಬೆರೆಯುತ್ತಿದ್ದಂತೆ ಏಕಜಾತಿ ಪರಂಪರೆಯು ದೇವ ಹಾಗೂ ಅಸುರ ಅಥವಾ ಆರ್ಯ ಹಾಗೂ ದಾಸ (ಧಣಿ ಗುಲಾಮ) ಈ ದ್ವಿಜಾತಿ ಸಮಾಜ ವ್ಯವಸ್ಥೆ ಮಾಡಿಕೊಂಡಿತು. ಇದು ಮೂಲ ಮಿಸನ್ ಒಡೆಯುವಿಕೆಯಿಂದ ಆದುದಲ್ಲ. ಇದು ಆದುದು ಹಿಂದೆ ಹಗೆಗಳಾಗಿದ್ದು, ಮೂಲವಾಸಿಗಳನ್ನು ಆರ್ಯ ಸಮಾಜದಲ್ಲಿ ಭೃತಕರು ಮತ್ತು ಕೂಲಿಗಳಾಗಿ ಸೇರಿಸಿಕೊಂಡುದರ ಪರಿಣಾಮವಾಗಿ ಋಗ್ವೇದವು ಹೆಸರಿಸುವಂತೆ ಬಿಳಿ ಚರ್ಮದವರು ಮತ್ತು ಕರಿಚರ್ಮದವರು ಎಂಬ ಧಣಿಗಳು ಮತ್ತು ದಾಸರೆಂಬ ಎರಡು ಜಾತಿ ಅಥವಾ ವರ್ಣಗಳು ಆದವು ಎಂದು ಚಂದ್ರಗುಪ್ತ, ಅ ರಾ ಅವರು ಭಾರತದ ಗ್ಯಾಸೆಟೀಯರ್ ೨ರಲ್ಲಿ ಉಲ್ಲೇಖಿಸಿದ್ದಾರೆ.

ಎಂ ಟಿ ಧೂಪದ ಅವರು ದಾಸವೆನ್ನುವುದು ಒಂದು ಸಾಂಸ್ಕೃತಿಕ ಹಿನ್ನೆಲೆಯನ್ನೊಳಗೊಂಡ ಸಮುದಾಯವಾಗಿದೆ. ಆರ್ಯರು ದಕ್ಷಿಣ ಭಾರತಕ್ಕೆ ಬಂದು, ಇಲ್ಲಿಯವರನ್ನು ತಮ್ಮ ದಾಸರನ್ನಾಗಿ ಮಾಡಿಕೊಂಡ ಸಮುದಾಯ ಇದ್ದರೂ ಇರಬಹುದು ಅಥವಾ ಆರ್ಯ ಮತ್ತು ದ್ರಾವಿಡರ ಸಂಗಮದ ಸಂತತಿ ಎಂದು ಭಾವಿಸಲೂ

ಸಾಧ್ಯವಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ. ಮುಂದುವರಿದು ದೂಪದ ಅವರು ಕೆಲವು ಅಭಿಪ್ರಾಯಗಳನ್ನು ಹೀಗೆ ದಾಖಲಿಸಿದ್ದಾರೆ.

"ಕೆಲವು ಸಂಸ್ಕೃತ ಗ್ರಂಥಗಳಲ್ಲಿ ದಾಸರನ್ನು ದಸ್ಯುಗಳೆಂದು ವರ್ಣಿಸಿದ್ದಾರೆ. ಆರ್ಯರನ್ನು ಪ್ರತಿಭಟಿಸಿದ ದ್ರಾವಿಡರೇ ದಸ್ಯುಗಳೆಂದು ವಿವರಣೆಯಿದೆ.

ನಟುವ ಜನಾಂಗವನ್ನು ಹೋಲುವಂತಹ ಜನರೆಂದು ತಿಳಿಸಲಾಗಿದೆ. ನರಕುಲ ವಿಜ್ಞಾನಿಗಳ ಪ್ರಕಾರ ನಟು ಜನಾಂಗವು ಒಂದು ಅಲೆಮಾರಿ ಜನಾಂಗ. ಕ್ರೂಕ್‌ರ ಅಭಿಪ್ರಾಯದಂತೆ ಜಿಪ್ಸಿಯಂತಹ ಒಂದು ಜನಾಂಗ. ಇವರು ನೃತ್ಯಗಾರರು. ಆಟ ಪಾಡುವ, ರೂಪ ಜೀವಿಗಳಾದ ಒಂದು ಜನಾಂಗ. ಈ ಜನಾಂಗದ ಉಗಮಸ್ಥಾನದ ಬಗ್ಗೆ ನರಕುಲ ವಿಜ್ಞಾನಿಗಳು ಇನ್ನೂ ಒಂದು ನಿಶ್ಚಿತ ಅಭಿಪ್ರಾಯವನ್ನು ತಳೆದಿಲ್ಲ.... ನಟು ಜನಾಂಗದ ಉಗಮವು ದಾಸ ಜನಾಂಗದ ಉಗಮದಂತಿದೆ (ಧೂಪದ, ಎಂ ಟಿ:೧೯೭೧:೨೧೭) ಎಂಬ ಅಭಿಪ್ರಾಯ ತಳೆದಿದ್ದಾರೆ.

ಮತ್ತೊಂದೆಡೆ ವೇದ ಪುರಾಣದಲ್ಲಿ ಬರುವ ಶುಷ್ಣ ಶಂಬರ ಇತ್ಯಾದಿಗಳು ಭಾರತದಲ್ಲಿ ಅಡಿಯಿಟ್ಟ ಆರ್ಯರ ಆಕ್ರಮಣಗಳನ್ನು ತಡೆಗಟ್ಟುವಲ್ಲಿ ಮಹತ್ವದ ಪಾತ್ರವಹಿಸಿದ ಐತಿಹಾಸಿಕ ವ್ಯಕ್ತಿಗಳೇ ಆಗಿದ್ದಾರೆ. ಅವರನ್ನೇ ದಾಸ ಎಂದು ಕರೆದಿರಬಹುದು. ದಾಸ ಎನ್ನುವುದು ಉತ್ತರ ಭಾರತದ ಪಶ್ಚಿಮ ಭಾಗದ ದಾಹ' ಎನ್ನುವ ಬುಡಕಟ್ಟಿಗೆ ಸದೃಶ್ಯವಾಗಿದೆ ಎಂದು ಎನ್ನಲಾಗಿದೆ(ಪಕಾರಿ, ದೇವೇಂದ್ರ ಕುಮಾರ:೧೯೮೭:೧೭).

ಇನ್ನೊಂದೆಡೆ ದಾಸರ ಕುರಿತ ವಿವೇಚನೆಯಲ್ಲಿ "ಸಾಮಾನ್ಯವಾಗಿ ಮಾರಾಟಮಾಡಿದ ಹೆಣ್ಣಲ್ಲಿ ಹುಟ್ಟಿದ ಮಗು ಆ ಮನೆಗೆ ದಾಸನಾಗಿರುತ್ತಿದ್ದ ಎಂದು ಹೇಳಲು, ಊಹಿಸಲು ಅವಕಾಶವಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖಿತವಾದ ಜನ್ಮದಾಸರು ಇಂಥವರೇ ಆಗಿದ್ದಿರಬಹುದು. ಇವರಿಗೆ ಸಾಯುವವರೆಗೆ ಒಂದು ಮನೆಯಿಂದ ಬಿಡುಗಡೆಯಿಲ್ಲ, ಇವರು ಹುಟ್ಟುವಾಗಲೇ ದಾಸರು, ಮನುಸ್ಮೃತಿಯಲ್ಲಿ ಉಲ್ಲೇಖಿತವಾದ ಏಳು ಪ್ರಕಾರದ ದಾಸರಲ್ಲಿ ದಾಸೀಪುತ್ರರದ್ದು ಒಂದು ಗುಂಪು. ನಾರದ ಸ್ಮೃತಿಯಲ್ಲಿ ದಾಸಿ ದಕ್ಷಿಣೆಗಳಿಂದ ಬಂದವರು ಎಂಬ ವಿವರವಿದೆ. ಹಾಗೇ ಕೊಳ್ಳಲ್ಪಟ್ಟವರು ಎಂಬ ಮಾತಿದೆ. ಈ ಮಾತುಗಳೆಲ್ಲ ಮಾರಾಟ ಮಾಡಲ್ಪಟ್ಟ ಇಲ್ಲವೇ ಹುಟ್ಟುತ್ತಲೇ ದಾಸರಾದ ಜನವರ್ಗ ವೊಂದನ್ನು ಹೇಳುತ್ತವೆ (ಬಿಳಿಮಲೆ, ಪುರುಷೋತ್ತಮ:೧೯೮೯:೫).

ಈ ಮೇಲಿನ ವಿವಿಧ ಅಭಿಪ್ರಾಯಗಳಲ್ಲಿ ಮೂರು ಪ್ರಮುಖ ಅಂಶಗಳು ಎದ್ದು ಕಾಣುತ್ತವೆ.

೧. ಆರ್ಯ ದ್ರಾವಿಡರ ಸಂಘರ್ಷ: ದ್ರಾವಿಡರು ಆರ್ಯರನ್ನು ಎದುರಿಸಿ ಹೋರಾಡಿದುದರಿಂದಾಗಿ ಅವರಿಂದ ದಾಸರೆನಿಸಿಕೊಂಡರು. ಹಾಗೂ ಉತ್ತರ ಭಾರತದಿಂದ ದ್ರಾವಿಡರನ್ನು ಸೋಲಿಸಿದ ಆರ್ಯರು ಅವರನ್ನು ದಾಸರನ್ನಾಗಿಸಿಕೊಂಡು ದಾಸ, ದಸ್ಯುಗಳೆಂದು ಕರೆದರು. ಆ ದಾಸರೆ ಅಸುರ, ರಾಕ್ಷಸ, ದಾಸರಾದರು.

೨. ದಾಸರು, ಮಾರಾಟ ಮಾಡಲ್ಪಟ್ಟ ಇಲ್ಲವೇ ಹುಟ್ಟುತ್ತಲೇ ದಾಸರಾದ ಜನವರ್ಗವೊಂದನ್ನು ಸೂಚಿಸುತ್ತದೆ.

೩. ದಾಸರು ಒಂದು ಸಾಂಸ್ಕೃತಿಕ ಸಮುದಾಯವಾಗಿದ್ದು, ನಟುವರಂತಿರುವವರು, ಆಟವಾಡುವ ರೂಪ ಜೀವಿಗಳು ಎನ್ನಲಾಗಿದೆ.

ಜಾನಪದ ವಿದ್ವಾಂಸರು, ಮಾನವಶಾಸ್ತ್ರಜ್ಞರು ಮತ್ತು ಭಾರತೀಯ ಇತಿಹಾಸಕಾರರ ಬಹುಮುಖ್ಯವಾದ ಅಭಿಪ್ರಾಯ, ಸಂಶೋಧನೆಗಳನ್ನು ಗಮನಿಸಿದರೆ ಈ ಅಭಿಪ್ರಾಯಗಳು ನಿಜವೆಂದೆನಿಸುತ್ತವೆ.

ದಾಸ ಸಮುದಾಯದವು ಕ್ಷತ್ರಿಯರೆಂದು, ಮಾರುತಿಯ ಪೂಜಾರಿಗಳೆಂದೂ ತಿಳಿದುಬಂದಿತು. ಉತ್ತರ ಕರ್ನಾಟಕ ಪ್ರತಿ ಹಳ್ಳಿಯಲ್ಲಿಯೂ ಹನುಮಂತನ, ಮಾರುತಿಯ ದೇವಾಲಯವಿದೆಯೆಂದರೂ ತಪ್ಪಿಲ್ಲ. ಅನೇಕ ಆಂಜನೇಯನ ಪೂಜಾರಿಗಳು ಕ್ಷತ್ರಿಯವರಾಗಿದ್ದಾರೆ (ಧೂಪದ, ಎಂ ಟಿ: ೧೯೭೧:೨೧೭).

ಬೆಟಗೇರಿ ಕೃಷ್ಣಶರ್ಮ ಅವರು ಈ ದಾಸರ ಜಾತಿಯ ಪೂಜಾ ದೈವತ ಹನುಮಪ್ಪ. ತಾವು ಕ್ಷತ್ರಿಯ (ಛತ್ರಿ) ವರ್ಗಕ್ಕೆ ಸೇರಿದವರೆಂದು ಈ ಜಾತಿಯವರು ಹೇಳುವುದುಂಟು.

ಬಿ ಬಿ ಹೆಂಡಿ ಅವರು ಉತ್ತರ ಕರ್ನಾಟಕದಲ್ಲಿನ ಬ್ರಾಹ್ಮಣೇತರ ದಾಸರ ಒಂದು ಪಂಗಡವನ್ನು ಕುರಿತು ಇನ್ನೊಂದು ವರ್ಗದ ದಾಸರು ಇವರು ತಮ್ಮದು ಕ್ಷತ್ರಿಯ ಕುಲವೆಂದು ಹೇಳುತ್ತಾರೆ. ಇವರಲ್ಲಿಯೂ ವೇಶ್ಯಾವೃತ್ತಿಯಿದ್ದಿತು. ಆದರಿವರು ಅಸ್ಪೃಶ್ಯರೆಂದು ಗಣನೆಯಾದರಲ್ಲ. ದೇವದಾಸಿಯರು, ಹರಿದಾಸರು, ದಶವಂತರು ಎಂದು ಇವರನ್ನು ಕರೆಯಲಾಗುತ್ತಿದೆ(ಸುಂಕಾಪುರ, ಎಂ ಎಸ್:೧೯೭೮:೯೭).

ಅದೇ ರೀತಿ ಬಿ ವಿ ಗುಂಜೆಟ್ಟಿ, ನಿಂಗಣ್ಣ ಸಣ್ಣಕ್ಕಿ, ಬಸವರಾಜ ಮಲಶೆಟ್ಟಿ ಮುಂತಾದವರು ದಾಸ ಸಮುದಾಯದ ಉಪನಾಮಗಳನ್ನು ಹೆಸರಿಸುವಾಗ ಛತ್ರಿ' ದಾಸರು ಪದ ಬಳಸಿದ್ದಾರೆ. ಅಲ್ಲದೆ ಚಿದಾನಂದ ಮೂರ್ತಿಯವರು ಭಾಗವತ ಧರ್ಮವು ಪ್ರಧಾನವಾಗಿ ಕ್ಷತ್ರಿಯರದು ಎಂದಿರುವರು.

ಈಗಲೂ ಕೂಡ ಉತ್ತರ ಕರ್ನಾಟಕದ ಹಲವು ಕಡೆ ಈ ಸಮುದಾಯದವರು ತಾವು ಕ್ಷತ್ರಿಯ ಕುಲದವರೆಂದೇ ಹೇಳಿಕೊಳ್ಳುತ್ತಾರೆ. ಅವರನ್ನು ಅದು ಹೇಗೆ ಎಂದು ಕೇಳಿದರೆ, ನಮ್ಮ ಹಿರಿಯರು ಹೇಳುತ್ತಿದ್ದರು. ಅದಕ್ಕಾಗಿ ನಾವು ಶ್ರೇಷ್ಠ ಕುಲದವರು ಎಂದು ಹೇಳುತ್ತಾರೆ. ಈ ಮಾತಿನ ಜಾಡು ಹಿಡಿದು ದಾಸ ಪದದ ಮೂಲಕ್ಕೆ ಹೊರಟಾಗ ಈ ಸಮುದಾಯದ ಮತ್ತೊಂದು ಚರಿತ್ರೆ ಬಿಚ್ಚಿಕೊಳ್ಳುತ್ತದೆ. ದಾಸ ಸಮುದಾಯ ಕ್ಷತ್ರಿಯ ಕುಲವೇ ಎನ್ನುವ ಪ್ರಶ್ನೆ ಎದುರಾಗುತ್ತದೆ. ಹಾಗಾದರೆ ಕ್ಷತ್ರಿಯರು ದಾಸರೇಗಾದರು? ದಾಸ ಅಥವಾ ದಾಸರು ಪದ ಯಾವ ಅರ್ಥವನ್ನು ಒಳಗೊಂಡಿದೆ ಎಂಬುದು ಬಹುಮುಖ್ಯವಾಗುತ್ತದೆ.

**ಚೆನ್ನದಾಸರ ಸಮುದಾಯದ ಪ್ರಾಚೀನ ನೆಲೆ**

ಡಾ ಬಿ ಆರ್ ಅಂಬೇಡ್ಕರ್ ಮತ್ತು ಹಲವಾರು ಮಾನವ ಶಾಸ್ತ್ರಜ್ಞರು ಹೇಳುವಂತೆ ಈ ದೇಶದ ನಾಗವಂಶದ ದಾಸ ಅಥವಾ ದಸ್ಯುಗಳೇ ಮುಂದೆ ಅನೇಕ ಅಸ್ಪೃಶ್ಯ ಜಾತಿಗಳಾಗಿ ಮಾರ್ಪಟ್ಟಿವೆ. ಅಂಥ ಹಲವು ಸಮುದಾಯಗಳಲ್ಲಿ ಇಂದಿನ ಚೆನ್ನದಾಸರ

ಸಮುದಾಯದ ಈ ಉಪನಾಮಗಳ ಗುಂಪು ಕೂಡಾ ಒಂದಾಗಿರುವ ಸಾಧ್ಯತೆಯಿದೆ. ಏಕೆಂದರೆ ಡಾ ಅಂಬೇಡ್ಕರ್ ಹೇಳಿರುವ ನಾಗರು: ಆಂಧ್ರ ಪ್ರದೇಶ ಮತ್ತು ಕರ್ನಾಟಕಗಳ ಮಧ್ಯಭಾಗದಲ್ಲೂ ಇದ್ದರು.

'ನಾಗರು ಕುಲೀನರು. ಇವರು ಉಚ್ಚಮಟ್ಟದ ಸಾಂಸ್ಕೃತಿಕ ನೆಲೆಯಲ್ಲಿ ಜೀವಿಸುತ್ತಿದ್ದರು. ಇತಿಹಾಸದ ಪುಟಗಳು ತೋರಿಸುವಂತೆ ಅವರು ಭಾರತದ ಬಹುಪ್ರಮಾಣದ ಭಾಗದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಮಹಾರಾಷ್ಟ್ರವು ನಾಗರ ಮೂಲ ಆವಾಸಸ್ಥಾನವಾಗಿದ್ದಿತೆಂದು ಬೇರೆ ಹೇಳಬೇಕಾಗಿಲ್ಲ. ಮಹಾರಾಷ್ಟ್ರ ಪ್ರದೇಶದ ಜನ ಮತ್ತು ರಾಜರು ನಾಗರೇ ಆಗಿದ್ದರು.

ಕ್ರಿಸ್ತಶಕೆಯ ಮೊದಲ ಶತಮಾನಗಳಲ್ಲಿ ಆಂಧ್ರ ಪ್ರದೇಶ ಮತ್ತದರ ನಿಕಟವರ್ತಿ ಪ್ರದೇಶಗಳು ನಾಗರ ಆಳ್ವಿಕೆಗೆ ಒಳಪಟ್ಟಿದ್ದವು. ಇದಕ್ಕೆ ಹಲವಾರು ಆಧಾರಗಳಿಂದ ಸೂಚನೆ ಸಿಗುತ್ತದೆ. ಶಾತವಾಹನರು ಮತ್ತು ಅವರ ನಂತರ ಬಂದ ಚುಟುಕುಲ ಶಾತಕರ್ಣಿಗಳು ಹೆಚ್ಚುಕಡಿಮೆ ನಾಗಕುಲದಿಂದ ಮೂಡಿಬಂದ ರಕ್ತಸಂಬಂಧಿಗಳು. ಡಾ ಎಚ್ ಸಿ ರಾಯ್ ಚೌಧುರಿ ಗುರುತಿಸಿರುವಂತೆ ದ್ವಾತ್ರಿಮ ಸುತ್ತುಕಲಿತ್ತನು ಶಾಲಿವಾಹನನನ್ನು ಪ್ರತಿನಿಧಿಸುತ್ತಾನೆ. ಈ ಶಾಲಿವಾಹನನು ಶಾತವಾಹನ ಸಂತತಿಯ ಪೌರಾಣಿಕ ಪ್ರತಿನಿಧಿ ಎನ್ನಬಹುದು ಮತ್ತು ಅವನು ಬ್ರಾಹ್ಮಣ ಮತ್ತು ನಾಗರ ಬೆರಿಕೆಯ ಸಂತಾನದವನು. ಆ ಸಂತತಿಯಲ್ಲಿ ಆಳಿದವರ ಹೆಸರುಗಳ ಪಟ್ಟಿಯಲ್ಲಿ ನಾಗರಿಗೆ ವಿಶಿಷ್ಟವಾದ ಹೆಸರುಗಳಿರುವುದರಿಂದ ಇದಕ್ಕೆ ಸಾಕಷ್ಟು ಪುಷ್ಟಿ ದೊರೆಯುತ್ತದೆ. ಶಾತವಾಹನರ ಆಳ್ವಿಕೆಯ ಕಡೆಯ ಘಟ್ಟದ ವೇಳೆಗೆ ನಾಗರು ಬಹಳ ಪ್ರಬಲರಾಗಿ ವರ್ಧಿಸಿದ್ದರೆಂಬುದು ಅನೇಕ ಸಂಗತಿಗಳಿಂದ ಖಚಿತಗೊಳ್ಳುತ್ತದೆ. ಶಾತವಾಹನರ ಪ್ರಮುಖ ಸಂತತಿಯವರಲ್ಲಿ ಕಡೆಯ ರಾಜನಾದ ಪುಲುಮಾವಿ ಎಂಬುವನ ಆಳ್ವಿಕೆಯ ಕಾಲದಲ್ಲಿ ಸ್ಕಂದನಾಗ ಎಂಬ ನಾಯಕನೊಬ್ಬನು ಬಳ್ಳಾರಿ ಜಿಲ್ಲೆಯ ಅಧಿಪತಿಯಾಗಿದ್ದುದು ಕಂಡುಬರುತ್ತದೆ. ಎರಡನೆಯದಾಗಿ, ಚುಟು ರಾಜನೊಬ್ಬನ ಮಗಳಾದ ನಾಗ ಮುಲಾನಿಕಾ ಎಂಬುವಳು ದಾನವೊಂದನ್ನು ಕೊಟ್ಟಂತೆ ಉಲ್ಲೇಖವಾಗಿದೆ. ಅವಳು ಕೊಟ್ಟ ದಾನವು ಒಂದು ನಾಗ ಹಾಗೂ ಶಿವಕಂದ ನಾಗಶ್ರೀ ಎಂಬ ಹೆಸರಿನ ಅವಳ ಮಗ. ಈ ಸಂತತಿಯ ಎಲ್ಲ ಉಲ್ಲೇಖಿತ ರಾಜರಿಗೂ ಒಂದೇ ಹೆಸರಿರುವುದು ಇನ್ನೊಂದು ವಿಶೇಷ, ಅದು ಸಹ ನಾಗರ ಜೊತೆ ಈ ಸಂತತಿಯವರಿಗೆ ಹತ್ತಿರದ ಸಂಪರ್ಕವಿದ್ದಿತೆಂಬುದನ್ನು ಸ್ಪಷ್ಟಪಡಿಸುತ್ತದೆ. ಮೂರನೆಯದಾಗಿ ಸೋರಿಂಗೋಯ್‌ನ ರಾಜಧಾನಿಯಾದ ಉರಗಪುರ ಎಂಬ ಹೆಸರು ಯಾರೋ ಒಬ್ಬ ನಾಗರ ದೊರೆಯ ಒಂಟಿಯಾದ ಆಳ್ವಿಕೆಯನ್ನು ಸೂಚಿಸುವುದಿಲ್ಲ. ಬದಲಾಗಿ ಸಾಕಷ್ಟು ದೀರ್ಘಾವಧಿಯ ವರೆಗೆ ಸ್ಥಾಪನೆಗೊಂಡಿದ್ದ ಒಂದು ನಾಗರ ಪಾಳೆಯವನ್ನದು ಸೂಚಿಸುತ್ತದೆ (ರಾಜಶೇಖರಯ್ಯ, ಎ ಎಂ:೧೯೯೮:೪೦೫–೬).

ದಕ್ಷಿಣ ಭಾರತ ಅದರಲ್ಲೂ ಕರ್ನಾಟಕಾಂಧ್ರ ಪ್ರದೇಶದಲ್ಲಿ ನಾಗ ದೊರೆಗಳ ರಾಜ

ಮನೆತನಗಳಿದ್ದವು ಎಂಬುದಾಗಿ ತಿಳಿದುಬರುತ್ತದೆ. ಅಲ್ಲದೆ ಭಾಷೆಯ ವಿಷಯದಲ್ಲೂ ಉತ್ತರದ 'ಅಸುರ'ರ ಭಾಷೆ ದಕ್ಷಿಣದ ದ್ರಾವಿಡರ ಭಾಷೆಗೆ ಹತ್ತಿರವಿರುವ ಭಾಷೆಯಾಗಿದ್ದು ಅದು ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿರುವುದನ್ನು ಅಂಬೇಡ್ಕರ್ ಅವರು ಪ್ರಸ್ತಾಪಿಸಿದ್ದಾರೆ. ಅದು ಹೀಗಿದೆ.

"ತಮಿಳು ಮತ್ತು ತತ್ಸಂಬಂಧಿತ ಭಾಷೆಗಳು ಪ್ರಾಚೀನವಾದ ಅಸುರ ಭಾಷೆಯ ಆಯಕಟ್ಟಿನ ಮೇಲೆ ನಿಂತಿವೆಯೆಂಬ ಈ ದೃಷ್ಟಿಕೋನಕ್ಕೆ ಇನ್ನೊಂದಂಶವು ಪುಷ್ಟಿ ನೀಡುತ್ತದೆ. ಅದೇನೆಂದರೆ ಸಿಂದ್ ಸೀಮಾರೇಖೆಯ ಬಳಿಯ ಒಂದು ಬುಡಕಟ್ಟಾದ ಬ್ರಹೀಗಳ ಭಾಷೆಯು (ತಮಿಳು ಮತ್ತು ತತ್ಸಂಬಂಧಿತ) ಭಾಷೆಗಳೊಡನೆ ಬಹುವಾಗಿ ಹೋಲುತ್ತದೆ. ಇದೆಷ್ಟರ ಮಟ್ಟಿನ ಹೋಲಿಕೆಯೆಂದರೆ ಡಾ ಕಾಲ್ಡ್‌ವೆಲ್ ಹೇಳುವಂತೆ "ಬ್ರಾಹುಯಿ (ಭಾಷೆಯು) ದ್ರಾವಿಡ ಜನಾಂಗವನ್ನು ಸಿಂಧೂ ನದಿಯಿಂದಾಚೆಗೆ, ಅಂದರೆ ಮಧ್ಯ ಏಷ್ಯಾದ ದಕ್ಷಿಣ ಭಾಗಗಳವರೆಗೆ, ಗುರುತಿಸಲು ಸಾಧ್ಯಮಾಡಿಕೊಡುತ್ತದೆ. ನಾನು ಮೊದಲೇ ನಮೂದಿಸಿರುವಂತೆ ಈ ಪ್ರದೇಶವು ಅಸುರರ ಅಥವಾ ನಾಗರ ಆವಾಸಸ್ಥಾನವಾಗಿತ್ತು. ದ್ರಾವಿಡ ಅಧಿಪತ್ಯಗಳ ಪ್ರತಿಷ್ಠಾಪಕರು ಈ (ಅಸುರ ಅಥವಾ ನಾಗ) ಜನಾಂಗಕ್ಕೆ ಸೇರಿದವರಾಗಿದ್ದಿರಬೇಕು" (ಅದೇ:೪೧೫-೧೬).

"ಹೀಗೆ ಕ್ರೋಢೀಕರಿಸಲ್ಪಟ್ಟಿರುವ ಎಲ್ಲ ಪುರಾವೆಗಳನ್ನೂ ಗಣನೆಗೆ ತೆಗೆದುಕೊಂಡರೆ ನಮಗೆ ತೋರುವ ಒಂದೇ ಸಾಧ್ಯತೆಯೆಂದರೆ ಭಾರತದ ದಕ್ಷಿಣಕ್ಕೆ ಸೇರಿದ ದ್ರಾವಿಡರು ಉತ್ತರದ ಅಸುರರ ಅಥವಾ ನಾಗರ ಸಂತತಿಗೆ ಸೇರಿದವರೇ ಆಗಿದ್ದಾರೆ".

ವಿದ್ವಾಂಸರುಗಳ ಉಲ್ಲೇಖಗಳನ್ನಾಧರಿಸಿ ಡಾ ಅಂಬೇಡ್ಕರ್ ಅವರು ಹೇಳಿರುವ ಮೇಲಿನ ಈ ವಿವರಣೆಯಿಂದ ತಿಳಿದು ಬರುವ ಸಂಗತಿಯೆಂದರೆ, ಸಿಂಧ್ ಪ್ರಾಂತದ ಮೂಲಕ ಭಾರತವನ್ನು ಪ್ರವೇಶಿಸಿರುವ ಆರ್ಯರು ಮೊದಲು ಉತ್ತರದಲ್ಲಿರುವ ನಾಗರನ್ನು (ದ್ರಾವಿಡ ಭಾಷೆಯನ್ನಾಡುವವರು) ಸೋಲಿಸಿದರು. ಸೋತ ಈ ನಾಗಕುಲದ ಕೆಲಸಮುದಾಯಗಳು ಆರ್ಯರ ಆಕ್ರಮಣವನ್ನು ಸಹಿಸದೆ ಅವರ ದಾಸ್ಯತ್ವವನ್ನು ಒಪ್ಪದೆ ದಕ್ಷಿಣ ಭಾರತದೆಡೆಗೆ ಚಲಿಸುತ್ತ ಬಂದಿರಬೇಕು. ವೇದಗಳ ರಚನೆಗಿಂತ ಮೊದಲೇ ಸೋತ ಈ ದಸ್ಯು, ದಾಸರು ಉತ್ತರ ಭಾರತದಿಂದ ದಕ್ಷಿಣಕ್ಕೆ ಬರತೊಡಗಿದರು. ಆಗ ದಕ್ಷಿಣದಲ್ಲಿ ದ್ರಾವಿಡರು ಇನ್ನು ಆಳುತ್ತಿದ್ದರು. ಇದಕ್ಕೆ ಅಂಬೇಡ್ಕರ್ ಅವರ ಈ ಸಂಶೋಧನಾ ಬರಹಗಳೇ ಸಾಕ್ಷಿಯೊದಗಿಸುತ್ತವೆ. ದ್ರಾವಿಡ ನಾಗಕುಲದ ದೊರೆಗಳನ್ನು, ಸಮುದಾಯಗಳನ್ನು ಮತ್ತೇ ಮತ್ತೇ ಸೋಲಿಸುತ್ತ ಬಂದ ಆರ್ಯರು ಮತ್ತಷ್ಟು ಕಠಿಣರಾಗಿ ಅವರನ್ನು ಅಂತ್ಯಜರನ್ನಾಗಿ ಪರಿಗಣಿಸಿರಬೇಕು. ಉತ್ತರಭಾರತದಿಂದ ಕ್ರಿ.ಶ. ವೇಳೆಗೆ ಅಲೆದಾಡುತ್ತ ಬಂದ ಈ ನಾಗಕುಲದ ಅಂತ್ಯಜರನ್ನು ದಕ್ಷಿಣದಲ್ಲಿ ಇನ್ನೂ ಆಳುತ್ತಿದ್ದ ದ್ರಾವಿಡ ನಾಗಕುಲದ ಸಮಕಾಲೀನ ಸಂದರ್ಭದಲ್ಲಿ 'ದಾಸ'ರೆಂದು ಅರ್ಥ ಬರುವ ರೀತಿಯಲ್ಲಿ ಕರೆದಿರಬೇಕು. ನಂತರದಲ್ಲಿ ಸೋತ ದಕ್ಷಿಣದ ದ್ರಾವಿಡರನ್ನು ಆರ್ಯರು ಅಸ್ಪೃಶ್ಯರೆಂದು ಪರಿಗಣಿಸಿರಬೇಕು. ಈ ಅಸ್ಪೃಶ್ಯ ಅಥವಾ ಅಂತ್ಯಜ ಸಮುದಾಯದೊಳಗೆ ಈ ದಾಸ ಸಮುದಾಯವೂ ಸೇರಿಕೊಂಡಿದೆ.

ಹೀಗೆ ಆರ್ಯರಿಂದ ಸೋಲಿಸಲ್ಪಟ್ಟ ಸಮುದಾಯಗಳು, ಆರ್ಯರು ಹೇರಿರುವ ಹೀನ ಕಟ್ಟಳೆಗಳನ್ನು ಧಿಕ್ಕರಿಸುತ್ತ ಬರತೊಡಗಿದವು. ಅವು ತಮ್ಮ ಮೂಲ ಸ್ವಂತಿಕೆಯನ್ನು ಪ್ರತ್ಯೇಕವಾಗಿ ಕಾಯ್ದುಕೊಳ್ಳಲು ಮತ್ತು ಸ್ವಾಭಿಮಾನವನ್ನು ಉಳಿಸಿಕೊಳ್ಳಲು ನಿರಂತರ ಹೋರಾಡುತ್ತಿದ್ದವು. ಇಂಥ ಸಂದರ್ಭದಲ್ಲಿಯೇ ಮಾನವೀಯ ಸಂಬಂಧಗಳನ್ನು, ಗಟ್ಟಿಗೊಳಿಸುವ ವೈಷ್ಣವ ಮತ್ತು ವೀರಶೈವ ಧರ್ಮಗಳು ಸುಧಾರಣಾವಾದಿ ಪ್ರಯತ್ನಗಳನ್ನು ಕೈಗೆತ್ತಿಕೊಂಡವು. ವೈದಿಕ ವ್ಯವಸ್ಥೆಯ ಶೋಷಣೆಯಿಂದಾಗಿ ಈ ಸಮುದಾಯಗಳು ಇಷ್ಟೊತ್ತಿಗೆ ಜಾತಿಗಳಾಗಿ ಪರಿವರ್ತಿತಗೊಂಡಿದ್ದವು. ಇಂಥ ಹಲವಾರು ಸಮುದಾಯ ಗಳಲ್ಲಿ ಈ ಚೆನ್ನದಾಸರ ಸಮುದಾಯವೂ ಒಂದು.

'ದಾಸ' ಸಮುದಾಯವನ್ನು ಕುರಿತು ಬರೆದಿರುವ ಎಲ್ಲ ವಿದ್ವಾಂಸರೂ ಇವರನ್ನು "ವೈಷ್ಣವ ಭಿಕ್ಷುಕ"ರೆಂದೇ ಗುರುತಿಸಿರುವರು. ಹಾಗಾದರೆ ಈ ವೈಷ್ಣವ ಧರ್ಮಕ್ಕೂ ಈ ಚೆನ್ನದಾಸರ ಸಮುದಾಯಕ್ಕೂ ಇರುವ ಸಂಬಂಧವೇನು? ಇವರೇಕೆ ವೈಷ್ಣವ ಭಿಕ್ಷುಕರಾದರು? ಯಾವ ಸಂದರ್ಭದಲ್ಲಾದರು? ಯಾಕಾದರು? ಎಂಬುದನ್ನು ಕೆಲವು ಆಧಾರಗಳನ್ನು ಬಳಸಿಕೊಂಡು ವಿಶ್ಲೇಷಿಸಲಾಗಿದೆ.

**ವೈಷ್ಣವ ಧರ್ಮದ ಪ್ರಭಾವಳಿ**

ಕರ್ನಾಟದಲ್ಲಿ ವೈಷ್ಣವ ಧರ್ಮದ ಚಟುವಟಿಗಳು ೧೧ನೆಯ ಶತಮಾನಕ್ಕಿಂತ ಮೊದಲಿನಿಂದಲೇ ನಡೆದಿವೆ. ಅದರ ಪ್ರವರ್ಧಮಾನವನ್ನು ೧೫ನೇಯ ಶತಮಾನದಲ್ಲಿ ಕಾಣುತ್ತೇವೆ. ಈ ಶತಮಾನವನ್ನು ಹರಿದಾಸ ಸಾಹಿತ್ಯದ ಉಗಮವೆಂದೂ ಹೇಳಲಾಗುತ್ತದೆ (ನಾಗರತ್ನ ಟಿ ಎಸ್: ೧೯೯೪:೨೩). ವಿಜಯನಗರದ ಶ್ರೀಕೃಷ್ಣದೇವರಾಯನ ಪ್ರೋತ್ಸಾಹ ದಿಂದಾಗಿ ವ್ಯಾಸರಾಯರ ಮುಂದಾಳತ್ವದಲ್ಲಿ ವೈಷ್ಣವ ಧರ್ಮ ಉನ್ನತಿಗೇರಿತ್ತು, ಧರ್ಮಪ್ರಸಾರದ ನಿಮಿತ್ತ ವ್ಯಾಸಪೀಠ ಮತ್ತು ದಾಸಪೀಠಗಳು ತಲೆ ಎತ್ತಿದವು. ಈ ಸಂದರ್ಭದಲ್ಲಿ ದೇಶದ ರಾಜಕೀಯ ಸಾಮಾಜಿಕ ಪರಿಸ್ಥಿತಿ ವಿಷಮತೆಯಿಂದ ಕೂಡಿತ್ತು.

"ನಾಡಿನ ಧಾರ್ಮಿಕ ನಿಲುವು, ಸಾಮಾಜಿಕ ವ್ಯವಸ್ಥೆ, ಜನಜೀವನದ ರೀತಿ ನೀತಿ ಇವು ಒಂದು ಘಟ್ಟದಿಂದ ಇನ್ನೊಂದು ಘಟ್ಟಕ್ಕೆ ಮುಟ್ಟಿದ ಕಾಲ. ನಾಡಿನಲ್ಲಿ ಪರ್ಶಿಯನ್, ಮುಸ್ಲಿಂ ಸಂಸ್ಕೃತಿಗಳು ಬಂದೊದಗಿದ್ದುವು, ಕ್ರೈಸ್ತ ಶ್ರದ್ಧಾ ಪ್ರಚಾರಕರು ನಾಡಿನಲ್ಲಾಗಲೆ ಬಂದಿಳಿದಿದ್ದರು. ಪರ್ಶಿಯದಿಂದ ಬಂದ ಕ್ರೈಸ್ತರು (ನೆಸ್ಟೋರಿಯನ್ನರು) ಇದ್ದರು. ಉತ್ತರಭಾರತದಲ್ಲಿ ಮೊಗಲ ಸಾಮ್ರಾಜ್ಯ ಸುಭದ್ರವಾಗಿ ಮೈದಳೆದಿದ್ದಿತು. ಜನರಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ, ಪಾರ್ಸಿ ಪಂಗಡಗಳು ಕಾಣಿಸಿಕೊಳ್ಳತೊಡಗಿದ್ದುವು. ಆರ್ಥಿಕ ವಾಗಿ ನಾಡು ಹೊರನಾಡುಗಳೊಂದಿಗೆ ಸಂಪರ್ಕವನ್ನು ಬೆಳೆಸಿಕೊಂಡಿದ್ದಿತು. ಧಾರ್ಮಿಕ ವಾಗಿ ನಾಡಿನಲ್ಲೇ ವಾದ ವಿವಾದಗಳು, ಮತಪರಿವರ್ತನೆಗಳು, ಖಂಡನ ಮಂಡನಗಳು ಹರಡಿಕೊಳ್ಳುತ್ತಿದ್ದುವು. ಗ್ರಾಮಸಂಸ್ಕೃತಿಯು ನಗರ ಸಂಸ್ಕೃತಿಗೆ ಎಡೆಮಾಡಿಕೊಡುತ್ತಿದ್ದಿತು. ವ್ಯಾಪಾರ, ವಾಣಿಜ್ಯ, ಉದ್ಯಮಗಳು ಹೆಚ್ಚುತ್ತಿದ್ದುವು. ವರ್ಣಾಶ್ರಮ ಧರ್ಮದ ಕಟ್ಟುಪಾಡು ಸಡಿಲವಾಗುತ್ತಿದ್ದಿತು. ಜನಜೀವನದಲ್ಲಿ ಸುಖಸಾಧನೆಗಳು ಹೆಚ್ಚುತ್ತಿದ್ದುವು. ಆದರೂ

ಜನರ ಮನಸ್ಸಿನಲ್ಲಿ ಆತಂಕದ ಹೊಗೆಯಾಡುತ್ತಲೇ ಇದ್ದಿತು. ಅಲ್ಲಲ್ಲಿ ಪಾಳೆಯಪಟ್ಟುಗಳು, ಸಣ್ಣಪುಟ್ಟ ರಾಜ್ಯಗಳು, ಆಡಳಿತದಲ್ಲಿ ಅಧಿಕಾರಿಗಳಿಂದ ಜನರ ಸುಲಿಗೆ, ಕ್ಷೇತ್ರಗಳಲ್ಲಿ ಪುರೋಹಿತ ಪಂಡರಿಂದ ಸುಲಿಗೆ, ನಗರಗಳಲ್ಲಿ ಕಾಮುಕ ಜನರಿಂದ ಪೀಡೆ, ಗ್ರಾಮಾಂತರ ಪ್ರದೇಶಗಳಲ್ಲಿ ತೆರಿಗೆಯ ಭೀತಿ, ಪ್ರಯಾಣದಲ್ಲಿ ದರೋಡೆಕಾರರ ಹಾವಳಿ, ಸಮಾಜದ ವ್ಯವಸ್ಥೆ ಸಮರ್ಪಕವಾಗಿರಲಿಲ್ಲ; ಸಮಾಜವು ಹೆಚ್ಚುಹೆಚ್ಚು ಸಂಕೀರ್ಣವಾಗುತ್ತಿದ್ದುದು ಮುಖ್ಯ ಕಾರಣ.

ಇಂಥ ಪರ್ವಕಾಲದಲ್ಲಿ ನಾಡಿನ ಹಲವೆಡೆ ಹಿರಿಯ ಚೇತನಗಳು ಕಾಣಿಸಿಕೊಂಡುದು ಯುಗಧರ್ಮದ ಪರಿಣಾಮವಾಗಿಯೇ. ಕರ್ನಾಟಕದಲ್ಲಿ ಶ್ರೀಪಾದರಾಜರು, ವ್ಯಾಸರಾಯ ಸ್ವಾಮಿಗಳು, ಪುರಂದರದಾಸರು, ಕನಕದಾಸರು, ವಾದಿರಾಜರು ಬದುಕಿ ಬಾಳಿದ ಸಮಯದಲ್ಲೇ ಉತ್ತರ ಭಾರತದಲ್ಲಿ ರಾಮಾನಂದರು (೧೪೦೦– ೧೪೭೦), ಕಬೀರ ದಾಸರು (೧೪೪೦–೧೫೧೮), ರಾಜಾಸ್ಥಾನದಲ್ಲಿ ಮೀರಾಬಾಯಿ (ಜನನ ೧೪೭೦), ಪಂಜಾಬಿನಲ್ಲಿ ಗುರುನಾನಕದೇವರು (೧೪೬೯–೧೫೩೯), ಬಂಗಾಳದಲ್ಲಿ ಕೃಷ್ಣಚೈತನ್ಯರು (೧೪೮೫–೧೫೩೩), ಮಹಾರಾಷ್ಟ್ರದಲ್ಲಿ ನಾಮದೇವ ಸಿಂಪಿಗಳು (೧೪೦೦ರ ಸುಮಾರು), ಗುರು ಅಮರದಾಸರು (೧೫೭೪ರ ಸುಮಾರು), ಬ್ರಜ ಭೂಮಿಯಲ್ಲಿ ಸೂರದಾಸರು (೧೫೯೬ರ ಸುಮಾರು), ಕಾಶಿಯ ಕಡೆ ತುಳಸೀದಾಸರು (೧೫೩೨–೧೬೨೩) ಮೊದಲಾದ ಸಂತರು ಕಾಣಿಸಿಕೊಂಡರು(ರಾಮಚಂದ್ರರಾವ್, ಸಾ ಕೃ:೨೦೦೫:೩೨೦).

ಇಂಥ ಸಂದರ್ಭದಲ್ಲಿ ತಿರುಪತಿ ಬಳಿಯ ಚಂದ್ರಗಿರಿಯ ಪ್ರಾಂತಕ್ಕೆ ದೊರೆಯಾಗಿದ್ದ ಸಾಳ್ವ ನರಸಿಂಹ ಮತ್ತು ಶ್ರೀಪಾದರಾಜರ ಕಾಲದಲ್ಲಿ ತಿರುಪತಿ ತಿಮ್ಮಪ್ಪ ಅಥವಾ ಶ್ರೀನಿವಾಸನ ಪೂಜೆಯ ಪ್ರಕ್ರಿಯೆಯಿಂದ ವೈಷ್ಣವ ಧರ್ಮ ಪ್ರಸಾರಕ್ಕೆ ಚಾಲನೆ ದೊರೆಯಿತು. ಶ್ರೀಪಾದರಾಜರ ಪ್ರಯತ್ನದಿಂದಾಗಿ ವ್ಯಾಸರಾಯರು ಶ್ರೀನಿವಾಸನ ಅರ್ಚಕರಾಗಿ ಚಂದ್ರಗಿರಿ ರಾಜ್ಯದ ಆಸ್ಥಾನ ಗುರುವಾಗಿ ನೇಮಕಗೊಂಡರು. ಸತತ ೧೨ ವರುಷಗಳ ಕಾಲ ಈ ಕಾರ್ಯವನ್ನು ಮುಂದುವರೆಸಿಕೊಂಡು ಬಂದರು. ಅಲ್ಲದೆ ವ್ಯಾಸರಾಯರು ವಿಜಯನಗರದಲ್ಲಿದ್ದ ಸಾಳುವ ನರಸನಾಯಕನ ನೆರವಿನಿಂದ ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ನಂತರ ಈ ವಿದ್ಯಾಪೀಠ ಶ್ರೀಕೃಷ್ಣ ದೇವರಾಯನ ಆಳ್ವಿಕೆಯಲ್ಲಿ ಅತ್ಯುನ್ನತ ಮಟ್ಟಕ್ಕೇರಿತು. ಈ ಮೂಲಕ ಹರಿದಾಸರ ದೊಡ್ಡ ಪಂಕ್ತಿಯೇ ನಿರ್ಮಾಣಗೊಂಡಿತು ವ್ಯಾಸರಾಯರ ಕಾಲದಲ್ಲೇ ವೈಷ್ಣವ ಧರ್ಮ ಪ್ರಸಾರಕ್ಕಾಗಿ ವ್ಯಾಸಕೂಟ, ದಾಸಕೂಟಗಳೆಂಬ ಎರಡು ಪಂಥಗಳು ಹುಟ್ಟಿಕೊಂಡವು. ಅವೆರಡರ ಉದ್ದೇಶ ಧರ್ಮ ಪ್ರಸಾರವಾಗಿದ್ದರೂ ಅವುಗಳ ಕಾರ್ಯಸೂಚಿ ವಿಭಿನ್ನ ವಾಗಿರುವುದು ಕಂಡು ಬರುತ್ತದೆ.

"ವ್ಯಾಸಕೂಟದವರು ವೇದಾಂತ ಚಿಂತನದ ದಾರಿಯಲ್ಲಿ ಹೋದರೆ ದಾಸಕೂಟದವರು ನಾಮಸ್ಮರಣೆ, ಹರಿಕಥೆ, ಭಜನೆ, ಮಾನಸಪೂಜೆಗಳ ದಾರಿಯಲ್ಲಿ ಹೊರಟರು. ವ್ಯಾಸ ಕೂಟದವರ ಅಂತಿಮ ಗುರಿ ಆತ್ಮೋದ್ಧಾರ. ದಾಸಕೂಟದವರ ಅಂತಿಮ ಧ್ಯೇಯ

ಲೋಕೋದ್ಧಾರ. ವ್ಯಾಸಕೂಟ ವೇದ ಮಂತ್ರಗಳ ಗಂಭೀರ ಧ್ವನಿಯ ರಾಜಮಾರ್ಗದಲ್ಲೇ ಉಳಿದು ಬಂತು. ದಾಸಕೂಟ ಜಾನಪದ ಜಗತ್ತನ್ನು ತನ್ನ ಸಾಹಿತ್ಯದಲ್ಲಿ ಅಳವಡಿಸಿ ಕೊಂಡಿತು. ವ್ಯಾಸಕೂಟದವರಿಗೆ ಸಂಘದ ಅಥವಾ ಗುಂಪಿನ ಸಂಘಟನೆ ಇರಲಿಲ್ಲ. ದಾಸಕೂಟದವರಿಗೆ ಹೆಚ್ಚಿನ ಸಂಘಟನೆ ಮುಖ್ಯವಾಯಿತು.

ಒಟ್ಟಿನಲ್ಲಿ ವ್ಯಾಸಕೂಟ ದಾಸಕೂಟಗಳೆರಡರ ವ್ಯತ್ಯಾಸವನ್ನು ಗಮನಿಸಿದಾಗ ನಿಷ್ಠಾವಂತರಾದ, ಶಾಸ್ತ್ರಗಳಲ್ಲಿ ಅದ್ವಿತೀಯ ಪಾಂಡಿತ್ಯಗಳಿಸಿದ. ಸ್ವಮತ ಮಂಡನೆ ಪರಮತ ಖಂಡನೆಯೇ ಪಾರಮಾರ್ಥಕ್ಕೆ ದಾರಿ ಎಂದು ಹಠ ಹಿಡಿದ ವಿದ್ವಾಂಸರ ಗುಂಪಿಗೆ ವ್ಯಾಸಕೂಟವೆಂದು ಹೆಸರಾಯಿತು. ಇದರಲ್ಲಿ ಸೇರಿದವರಿಗೆ ಸಂಸ್ಕೃತ ಪಾಂಡಿತ್ಯ, ಸಚ್ಛಾಸ್ತ್ರಾ ವ್ಯಾಸಂಗ, ಸಿದ್ಧಾಂತ ಪ್ರಮೇಯಗಳ ಯುಕ್ತಿ ಯುಕ್ತ ಸಾಧನೆ, ಶಾಸ್ತ್ರಾಭ್ಯಾಸದಿಂದ ಪಡೆದ ಜ್ಞಾನ, ವರ್ಣಾಶ್ರಮ ಧರ್ಮಗಳ ಕಟ್ಟುನಿಟ್ಟಾದ ಪಾಲನೆ ಇವು ಮುಖ್ಯವಾದವು. ಇವರು ಭಕ್ತಿಯ ಅಗತ್ಯವನ್ನು ಪ್ರಮೇಯ ರೂಪದಲ್ಲಿ ಗ್ರಹಿಸಿದರೂ ಅವರ ಒಲವೆಲ್ಲ ಜ್ಞಾನದ ಕಡೆಗೆ. ಸಾಧನೆಯ ಸ್ವಾರಸ್ಯವನ್ನು ಅವರು ಗ್ರಂಥಗಳಲ್ಲಿ ಬಲ್ಲರೇ ಹೊರತು ಅನುಭವದಲ್ಲಿ ಕಂಡರಿಯರು.

ಆದರೆ ದಾಸಕೂಟದವರಿಗೆ ಭಕ್ತಿ ಮುಖ್ಯ. ಶಾಸ್ತ್ರ ಜ್ಞಾನಗೌಣ. ಸಾಧನೆಯ ಅನುಭವ ಮುಖ್ಯ. ಸಿದ್ಧಾಂತ ಗೌಣ. ದಾಸರು ವಾದ ವಿವಾದಗಳಿಗೆ ಮನ ಸೋತವರಲ್ಲ. ವ್ಯಾಸಂಗ ಪ್ರವಚನಗಳಲ್ಲಿ ಬಾಳನ್ನು ಕಳೆದವರಲ್ಲ. ಅವರ ಬಾಳಿನಲ್ಲಿ ಸಾಧನೆಗೆ ಹಿರಿಯ ಪಟ್ಟ. ಸಾಧನೆ ಎಂದರೆ ಭಗವತ್ತತ್ವ ಸಾಕ್ಷಾತ್ಕಾರ, ಭಕ್ತಿ. ಆದರೂ ದಾಸರು ಮಧ್ವಮತ ಪ್ರಚಾರದಲ್ಲಿ ಮುಂದಾಗಿದ್ದರು. ದ್ವೈತಶಾಸ್ತ್ರ ನಿರೂಪಣೆಗಾಗಿ ಹಲವಾರು ದೇವರ ನಾಮಗಳು, ಸುಳಾದಿಗಳು ಮುಂತಾದವು ರಚಿಸಲ್ಪಟ್ಟವು.(ನಿರುಪಮಾ ಮತ್ತು ಲಲಿತಾಶಾಸ್ತ್ರಿ:೧೯೯೯:೧೨೪).

ವ್ಯಾಸರಾಯರು ವೈಷ್ಣವ ಧರ್ಮವನ್ನು ಜನಪ್ರಿಯಗೊಳಿಸುವತ್ತ ಹೆಚ್ಚು ಒತ್ತು ಕೊಡತೊಡಗಿದರು. ಸಹಜವಾಗಿಯೇ ಮಡಿವಂತಿಕೆಯ ವ್ಯಾಸ ಕೂಟಕ್ಕಿಂತ 'ದಾಸ ಕೂಟ'ಕ್ಕೆ ಪ್ರೋತ್ಸಾಹ ಕೊಟ್ಟರು.

'ದಾಸಕೂಟ'ದವರಲ್ಲಿ ಆಧ್ಯಾತ್ಮದ ನಿಷ್ಠೆಯಿದ್ದರೂ ಮತದ ಛಲ ಕಣ್ಣು ಕುಕ್ಕುವುದಿಲ್ಲ; ನೀತಿಗೆ ಆದರವಿದ್ದರೂ ಮಡಿವಂತಿಗೆಯ ಹಟವಿಲ್ಲ; ಆಚಾರಕ್ಕೆ ಮಾನ್ಯತೆಯಿದ್ದರೂ ಅದು ದಾರಿಯಾಗಿ ಅಷ್ಟೆ; ಅದೇ ಗುರಿಯೆಂದಲ್ಲ. ವ್ಯಾಸತೀರ್ಥರ ದಾಸಕೂಟದಲ್ಲಿ ಇದ್ದವರೆಲ್ಲ ಮಾಧ್ವ ಸಂಪ್ರದಾಯದವರಲ್ಲ. ಪುರಂದರದಾಸರೇನೋ ಮಾಧ್ವಸಂಪ್ರದಾಯ ದವರು. ಆದರೆ ವ್ಯಾಸತೀರ್ಥರ ಶಿಷ್ಯರಲ್ಲಿ ವೈಕುಂಠದಾಸರು ಶ್ರೀವೈಷ್ಣವ ಪಂಥದವರು, ನಾರಾಯಣಯತಿ ಸ್ಮಾರ್ತ ಭಾಗವತರು, ಕನಕದಾಸರು ಬ್ರಾಹ್ಮಣರೇ ಅಲ್ಲ, ಅಂಡೆ ಕುರುಬರು. ಆದರೆ ಎಲ್ಲರೂ ದಾಸಕೂಟದಲ್ಲಿ ಸಮಾನರೇ. ಅವರೆಲ್ಲ ವೇದಾಂತದ ಪ್ರಮೇಯಗಳನ್ನೇ ನಂಬುವವರಾದರೂ ಅವನ್ನು ಅರಿತುಕೊಳ್ಳಲು ಸಂಸ್ಕೃತವೇ ಗತಿ ಎಂದು ನಂಬುವುದಿಲ್ಲ. ತಮ್ಮ ತಾಯ್ನುಡಿಯಲ್ಲೇ ಎದೆಯಾಳದ ಭಾವನೆಗಳನ್ನು

ಭಕ್ತಿಯ ಹೊನಲಿನಲ್ಲಿ ಹೊರಹೊಮ್ಮಿಸಿದರೆ ಭಗವತ್ ಪ್ರೀತಿಗೆ ಏನೇನೂ ಆತಂಕ ವಿರದೆಂದು ಅವರ ನಂಬಿಕೆ. ಹೀಗಾಗಿ ಅವರು ಬಳಸುವ ಹಾಡುಗಳೆಲ್ಲ ಕನ್ನಡದವೇ, ಮಟ್ಟುಕನ್ನಡದ್ದೇ; ನುಡಿಗಟ್ಟು ಕನ್ನಡದ್ದೇ; ತಿರುಳೂ ಕನ್ನಡ ಜಾಯಮಾನದ್ದೇ (ರಾಮಚಂದ್ರರಾವ್: ಸಾ ಕೃ:೨೦೦೩:೧೧೭).

ಹೀಗೆ ತೆರೆದ ಮನಸ್ಸಿನಿಂದ ದಾಸಕೂಟ ಹರಿದಾಸ ಪರಂಪರೆಯನ್ನು ಚಳುವಳಿಯ ರೀತಿಯಲ್ಲಿ ಜನಸಾಮಾನ್ಯರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳ ತೊಡಗಿತು. ದಾಸಕೂಟಕ್ಕೆ ಬಂದು ಸೇರಿದವರೆಲ್ಲ ತಮ್ಮ ಈ ಮೊದಲಿನ ಜಾತಿ ಸೂತಕವನ್ನು ಕಳಚಿ ಹರಿದಾಸರೆನಿಸಿ ಕೊಳ್ಳತೊಡಗಿದರು. ಹೀಗೆ ವ್ಯಕ್ತಿಗಳು, ಸಮುದಾಯಗಳು ವೈಷ್ಣವ ಧರ್ಮಕ್ಕೆ ಸೇರತೊಡಗಿತು. ಹರಿಯ ಸೇವಕರೆಲ್ಲಾ ಒಂದೇ. ಭಿನ್ನ ಭೇದವಿಲ್ಲ. ಜೊತೆಗೆ 'ಮಧುಕರ' ವೃತ್ತಿಯು ವ್ಯಕ್ತಿಯ ಅಹಂಕಾರವನ್ನು ನೀಗಿ ಸಾಮಾನ್ಯನನ್ನಾಗಿಸುತ್ತದೆ.

'ಮಧುಕರ' ವೃತ್ತಿಯೆಂದರೆ, ಮನಸ್ಸಿನಲ್ಲಿ ಶಾಂತಿಯನ್ನೂ ಸಮಾಧಾನವನ್ನೂ ತಾಳಿ, ಸುಖಿಯಾಗಿ, ಅಂದಂದಿನ ಕೂಳನ್ನು ಅಂದಂದುಗಳಿಸಿ, ನಾಳೆಗೆಂದು ಏನನ್ನೂ ಉಳಿಸದೆ, ಊರೂರು ಕೇರಿ, ಕೇರಿ ಅಲೆಯುತ್ತ ಯಾರ ಹಂಗೂ ಇಲ್ಲದೆ ಸ್ವತಂತ್ರರಾಗಿ ರುವುದು. ದುಂಬಿಯು ಹೂವುಗಳ ಬಳಿಸುಳಿದು, ರಸವುಂಡು, ಅಲ್ಲಿ ನಿಲ್ಲದೆ ಓಡುವಂತೆ ಇರುವ ಈ ವೃತ್ತಿಗೆ 'ಮಧುಕರವೃತ್ತಿ' ಎಂದು ಹೆಸರು (ರಾಮಚಂದ್ರರಾವ್, ಸಾ ಕೃ:೨೦೦೩:೧೩).

**ಚೆನ್ನದಾಸರು ವೈಷ್ಣವ ಭಿಕ್ಷುಕರಾದ ಬಗೆ**

ಹರಿದಾಸರಾದವರು ಮಧುಕರ (ಭಿಕ್ಷೆ) ವೃತ್ತಿಗೆ ಹೊರಡಬೇಕಾದರೆ 'ಇಂಥಿಂಥವೇ ವೇಷ ಭೂಷಣಗಳಿರಬೇಕು. ನಿಂತು ಹರಿನಾಮ ಸಂಕೀರ್ತನೆ ಮಾಡಬೇಕು. ಗಾಯನ ನರ್ತನ ಇರಬೇಕು' ಎನ್ನುವುದು ಈ ಮೊದಲು ವೈಷ್ಣವ ಹರಿದಾಸರ ಲಕ್ಷಣವಾಗಿರಲಿಲ್ಲ. ಅದು ವೃತ್ತಿಯಿಂದ ಕಲಾವಿದರೂ ಭಿಕ್ಷುಕರೂ ಆಗಿದ್ದ ಜನಪದ ಚೆನ್ನದಾಸರ ಲಕ್ಷಣ ವಾಗಿತ್ತು. ಚೆನ್ನದಾಸರು ಮೂಲತಃ ಕಲಾವಿದರಾಗಿದ್ದರು. ಭಿಕ್ಷೆಯಂತೆಯೇ ಕಲೆಯೂ ಅವರ ಜೀವನದ ಉಸಿರಾಗಿತ್ತು. ಕಲೆ ತಳವರ್ಗದ ಉಸಿರು ಎನ್ನುವುದಕ್ಕೆ ಕೋಟಗಾನಹಳ್ಳಿ ರಾಮಯ್ಯನವರ ಮಾತುಗಳು ಹೀಗಿವೆ.

"ಈ ಸಮಾಜದ ತಳಹದಿಯಾಗಿಯೂ ಕೀಳೆನ್ನಿಸಿಕೊಂಡಿರುವ ದಲಿತ ಜನಾಂಗಕ್ಕೂ ಕಲೆಗೂ ಕರುಳಬಳ್ಳಿಯ ಸಂಬಂಧ ಎಂದೇ ಹೇಳಬೇಕು. ಇವರಲ್ಲಿ ಯಾವುದೇ ವ್ಯಕ್ತಿ ಯನ್ನು ಕೊಂಚಹಿಡಿದು ಅಲುಗಾಡಿಸಿದರೆ ಸಾಕು ಕತೆಯೋ, ಕವಿತೆಯೋ, ಒಗಟೋ, ಗಾದೆಯೋ, ಏನಾದರೊಂದು ಉದುರವುದು ಗ್ಯಾರಂಟಿ. ಈ ಜನಾಂಗದ ಯಾವುದೋ, ಐದು ಜನರನ್ನು ಆಯ್ದು ಪರೀಕ್ಷಿಸಿದರೆ, ಈ ಐದು ಜನರಲ್ಲಿ ಹಾಡು ಹಾಡಲು ಬಂದವ ಒಬ್ಬನಿರಬಹುದು ಅಥವಾ ಕಥೆಹೇಳಲು ಬಾರದವನೊಬ್ಬ ಇರಬಹುದು. ಇಲ್ಲ ತಮಟೆ ತಬಲಾ ಇತ್ಯಾದಿ ವಾದ್ಯ ಬಾರಿಸಲು ಬಂದವ ಒಬ್ಬನಿರಬಹುದು. ಆದರೆ ಏನೊಂದೂ ಬಾರದವನೊಬ್ಬ ಸಿಗುವುದೇ ಇಲ್ಲ".

ಈ ಮಾತುಗಳು ಅಕ್ಷರಶಃ ಚೆನ್ನದಾಸರ ಸಮುದಾಯಕ್ಕೂ ಹೊಂದಿಕೊಳ್ಳುತ್ತವೆ. ಅಂದರೆ ಹರಿದಾಸರ ವೇಷ ಭೂಷಣ, ಗಾಯನ ನರ್ತನಗಳೆಲ್ಲ ಈ ಚೆನ್ನದಾಸರ ಬಳುವಳಿಯೇ ಆಗಿವೆಯೆಂಬುದು ಸತ್ಯ.

ಪುರಂದರ ದಾಸರಾದಿಯಾಗಿ ಹರಿದಾಸರು ತಮ್ಮ ಕೀರ್ತನೆಗಳನ್ನು ಹಾಡುವಿಕೆಗಾಗಿ ಸಂಗೀತ ಹಿನ್ನೆಲೆಯಲ್ಲಿ ರಚಿಸಿದವರಲ್ಲ ಎಂಬ ಮಾತನ್ನು ಗಮನಿಸಬೇಕು. "ಅವರ ಕೃತಿಗಳು ಉನ್ನತ ಮಟ್ಟದ ರಾಗಸಂಚಾರಗಳನ್ನು ನಿರೂಪಿಸುವ ಅತ್ಯುತ್ತಮ ನಿದರ್ಶನಗಳು" ಎಂಬ ಮಾತು ಅತಿವ್ಯಾಪ್ತಿ ದೋಷವುಳ್ಳದ್ದೆನಿಸುತ್ತದೆ... ಹರಿದಾಸರ ಇಂಥ ಕೃತಿ ಇಂಥ ರಾಗ-ತಾಳಗಳಲ್ಲೇ ರಚನೆಯಾಗಿತ್ತೆಂದು ಹೇಳಲು ಸಾಧ್ಯವೇ ಇಲ್ಲ. ಅಂದರೆ ಅವುಗಳ ಮೂಲ ರಾಗ-ತಾಳಗಳು ಹೇಗಿದ್ದವು ಎಂಬುದನ್ನು ಈಗ ನಾವು ತಿಳಿಯುವಂತಿಲ್ಲ. ಆದರೆ ಸಂಪ್ರದಾಯದ ಹಾಡುಗಳನ್ನು ಹಾಡುವ ದಾಟಿಯಲ್ಲಿ ದಾಸರ ಪದಗಳನ್ನು ಹಾಡುತ್ತಿದ್ದರೆಂದು ಊಹಿಸಬಹುದು. ಅನಂತರ ಸಂಗೀತ ವಿದ್ವಾಂಸರು ಆ ದಾಟಿಗಳು ಶಾಸ್ತ್ರೀಯ ಸಂಗೀತದ ಯಾವ ರಾಗದ ಸ್ವರ ಸ್ಥಾಯಿಗಳನ್ನು ಪಡೆದಿದೆ ಯಾವ ರಾಗದ ಸಂಚಾರವನ್ನು ಅದರಲ್ಲಿ ಗುರುತಿಸಬಹುದು ಎಂಬುದನ್ನು ಗಮನಿಸಿ ಆಯಾರಾಗದ ಹೆಸರುಗಳನ್ನು ಅಯಾ ಕೃತಿಗೆ ಲಗತ್ತಿಸಲು ಪ್ರಾರಂಭಿಸಿರಬೇಕು. ಅವುಗಳನ್ನು ಅಂತೆಯೇ ಹಸ್ತಪ್ರತಿಗಳಲ್ಲೂ ದಾಖಲಿಸುವ ಸಾಹಸ ಮಾಡಿರಬೇಕು" (ನಾಗರತ್ನ: ಟಿ ಎಸ್:೧೯೯೪:೩೦).

ಅದೇ ರೀತಿ ಭಿಕ್ಷೆ ಬೇಡುವ ಹಾಗೂ ವಾದ್ಯಪರಿಕರಗಳ ಮೂಲಕ ಹಾಡಿ ಕುಣಿಯುವಿಕೆಯೂ ಕೂಡ ಹರಿದಾಸರದ್ದಲ್ಲ. ಅದು ಕೂಡ ಚೆನ್ನದಾಸರ ಸಮುದಾಯಗಳದ್ದೇ ಆಗಿದೆ. ಪುರಂದರ ದಾಸರ ಈ ಕೀರ್ತನೆಯನ್ನು ಗಮನಿಸಬೇಕು. ಹೆಂಡತಿಯ ಪ್ರಭಾವದಿಂದಾಗಿ ತಾನು ಹರಿದಾಸರಾಗಿರುವ ಕುರಿತು ನೀಡಿದ ವಿವರ ಹೀಗಿದೆ.

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾಸಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯಂತೆ ನಾಚುತಲಿದ್ದೆ
ಆ ಪತ್ನಿಯು ತಾ ಪ್ರೀತಿಯಿಂದಲಿ
ಗೋಪಾಳಬುಟ್ಟಿಯ ಹಿಡಿಸಿದಳಯ್ಯ ೨

ತುಳಸೀಮಾಲೆಯ ಹಾಕುವುದಕ್ಕೆ
ಅಲಸಿಕೊಂಡು ನಡೆಯುತಲಿದ್ದೆ
ಜಲಜಾಕ್ಷಿಯು ಶ್ರೀ ಪುರಂದರ ವಿಠಲನ
ತುಳಸೀಮಾಲೆಯ ಹಾಕಿಸಿದಳಯ್ಯ ೩

ಈ ಮೇಲಿನ ಕೀರ್ತನೆಯಲ್ಲಿ ಬರುವ 'ನಾಚುತಲಿದ್ದೆ' ಎನ್ನುವ ಶಬ್ದ 'ಭಿಕ್ಷುಕ ದಾಸರ' ವೃತ್ತಿಗೆ ತಾನು ಇಳಿಯುತ್ತಿರುವುದರಿಂದ ಆಗಿರುವ ಮುಜುಗುರವನ್ನು ಎತ್ತಿ ಹೇಳುತ್ತದೆ. ಯಾಕೆಂದರೆ ಪುರಂದರ ದಾಸರು ಈ ಮುಂಚೆಯೇ ವಾದ್ಯಪರಿಕರಗಳನ್ನಿಡಿದು ಹಾಡಿ ಕುಣಿದಿದ್ದರೆ ಈ ಸಂಕೋಚದ ಪ್ರಮೇಯವೇ ಬರುತ್ತಿರಲಿಲ್ಲ. ಪುರಂದರಾದಿ ಹರಿದಾಸರುಗಳಿಗಿಂತ ಮುಂಚೆಯೇ ಈ ಪದ್ಧತಿ ಜನಪದ ದಾಸರಲ್ಲಿತ್ತು ಎಂಬುದನ್ನು ವಿದ್ವಾಂಸರಾದ ಸಾ ಕೃ ರಾಮಚಂದ್ರರಾವ್ ಅವರು ಸುದೀರ್ಘ ವಿಶ್ಲೇಷಿಸಿದ್ದಾರೆ.

"ಹರಿಯದಾಸರೆಂದು ತಮ್ಮನ್ನು ಭಾವಿಸಿಕೊಂಡು ಹರಿಯ ಸೇವೆ, ನಾಮ ಸಂಕೀರ್ತನೆ, ಕ್ಷೇತ್ರಗಳಲ್ಲೇ ಬಾಳನ್ನು ಕಳೆಯುವ ಜನರು ಪುರಂದರದಾಸರ, ವ್ಯಾಸರಾಯ ಸ್ವಾಮಿಗಳ, ಶ್ರೀಪಾದರಾಜರ ಕಾಲಕ್ಕೆ ಎಷ್ಟೋ ಹಿಂದಿನಿಂದ ಇದ್ದರು. ದ್ರಾವಿಡದೇಶದಲ್ಲಿ ಆಳ್ವಾರುಗಳು ಈ ಗುಂಪಿಗೆ ಸೇರಿದವರೇ; ಕ್ರಿಸ್ತಾಬ್ದ ಆರು ಏಳನೆಯ ಶತಮಾನಗಳಿಂದ ಇಂಥವರು ದಕ್ಷಿಣದೇಶದಲ್ಲೆಲ್ಲ ಇದ್ದರು. ಇವರು ಹಲವಾರು ಜಾತಿಗಳಿಗೆ ಸೇರಿದವರು, ಬೇರೆ ಬೇರೆ ಕುಲಗಳವರು, ನಾನಾ ಸಂಪ್ರದಾಯದವರು. ಕೆಲವರು ಬ್ರಾಹ್ಮಣರಿದ್ದರೂ ಇತರರ ಸಂಖ್ಯೆ ದೊಡ್ಡದು. ಇತರರಲ್ಲೂ ಸಮಾಜಿಕವಾಗಿ ಕೀರ ಕೀಳೆಂದು ಬಗೆಯಲ್ಪಟ್ಟ ಜನಾಂಗಗಳವರೇ ಹೆಚ್ಚುಮಂದಿ. ನರಸೇವೆ ಮಾಡುವುದು ಸಮಾಜದ ಕಟ್ಟುಪಾಡಾಗಿರು ವಾಗ ಇವರು ನರಸೇವೆಯನ್ನು ನಿರಾಕರಿಸಿ ಹರಿಸೇವೆಯನ್ನು ಕೈಗೊಂಡುದ್ದು ಸಾಹಸವೇ, ಕ್ರಾಂತಿಯ ಮನೋಧರ್ಮವೇ. ಹೀಗೆ ದಾಸರೆಂಬ ಜನಾಂಗಗಳು ತಮಿಳುನಾಡು, ಆಂಧ್ರ ಪ್ರದೇಶ, ಕರ್ನಾಟಕಗಳಲ್ಲಿ ಮೊದಲಿನಿಂದ ಇದ್ದವು. ಈಗಲೂ ಇವೆ. ತೆಲುಗು ದೇಶದಲ್ಲಿ ಬುಕ್ಕದಾಸರಿ, ಪಾಗದಾಸರಿ, ಬುಟ್ಟದಾಸರಿ, ದಂಡೆದಾಸರಿ, ಚೆನ್ನದಾಸರಿ, ಮಾಲದಾಸರಿ, ಭಾಗವತ ದಾಸರಿಗಳೆಂಬ ವಿಭಾಗಗಳೂ ಇದ್ದುವು.

ವ್ಯಾಸರಾಯಸ್ವಾಮಿಗಳು ದಾಸಕೂಟವನ್ನು ಏರ್ಪಡಿಸಿದಾಗ 'ದೇಸಿ'ಯಾಗಿದ್ದ ಒಂದು ವಿವರವನ್ನು 'ಮಾರ್ಗಿ'ಯವಾಗಿ ಮಾರ್ಪಡಿಸಿದರು; ಜಾನಪದವಾದ ಒಂದು ಪ್ರವೃತ್ತಿಯನ್ನು ಸಭ್ಯತೆಯ ಚೌಕಟ್ಟಿನಲ್ಲಿ ಅಳವಡಿಸಿದರು. ಗ್ರಾಮಾಂತರಗಳಲ್ಲಿ ಓಡಿಯಾಡು ತ್ತಿದ್ದ ದಾಸರ ಮೊದಲಾಕೃತಿಯನ್ನೇ ಅನುಸರಿಸಿ ದಾಸಕೂಟದವರಲ್ಲೂ ಉಂಛವೃತ್ತಿ (ತಿರುಪೆಗೆ ಸಂಸ್ಕೃತದ ಹೆಸರು; ಪುರಂದರದಾಸರು ತಮ್ಮ ವೃತ್ತಿಯನ್ನು 'ತಿರುಪ'ವೆಂದೇ ಬಣ್ಣಿಸಿಕೊಂಡಿದ್ದಾರೆ). ದಂಡಿಗೆ, ಬೆತ್ತ, ತಂಬೂರಿ, ಚಿಟಿತಾಳ, "ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ, ಆಲಾಪಿಸುತ್ತ ಬಲು ಒಲಗ'' ಮಾಡುವುದು (ಪುರಂದರದಾಸರ ವರ್ಣನೆ), 'ಗೀತ ನರ್ತನದಿಂದ ಕೃಷ್ಣನನ್ನು ಪೂಜಿಸುವುದು' (ವ್ಯಾಸರಾಯಸ್ವಾಮಿಗಳ ಒಕ್ಕಣೆ), ಗೋಪಾಳಬುಟ್ಟಿ ಮೊದಲಾದ ವಿವರಗಳನ್ನು ವಿಧಿಸಿದ್ದರು (ದಾಸಯ್ಯನ ಗರುಡಗಂಭವನ್ನೇನೋ ಕೈಬಿಟ್ಟರೆನ್ನಿ) (ರಾಮಚಂದ್ರ: ಸಾ ಕೃ:೩೦೫-೭).

ಇಷ್ಟಲ್ಲದೆ ವ್ಯಾಸರಾಯರಿಗಿಂತ ಮುಂಚೆ ಹರಿದಾಸರಾಗಿದ್ದವರ ಕುರಿತು ಉದಾಹರಣೆ ಕೊಡಲಾಗಿದೆ. ಶ್ರೀಕೃಷ್ಣ ದೇವರಾಯನು ತನ್ನ 'ಆಮುಕ್ತ ಮಾಲ್ಯದ' ಮಾಲದಾಸರಿ'ಯ ಕಥೆ, ವಿಷ್ಣುವಿನ ಕೆಳಜಾತಿಯ ಭಕ್ತನೊಬ್ಬನ ಕಥೆ ಪ್ರಮುಖ ಉದಾಹರಣೆಯಾಗಿದೆ.

ಈ ಮೊದಲು ಜನಪದ ದಾಸರು ಭಿಕ್ಷೆ ಬೇಡುವ ಕ್ರಮ ಹೀಗಿತ್ತು. 'ಗುರುಗಳಿಂದ ದೀಕ್ಷೆಯನ್ನು ಪಡೆದು ಚಕ್ರಾಂಕವನ್ನು ತಳೆದು, ಅಷ್ಟಾಕ್ಷರಿ ಮಂತ್ರವನ್ನು ಜಪಿಸುತ್ತಾರೆ. ತುಳಸೀ ಮಣಿಯ ಮಾಲೆಯನ್ನು ತೊಡುತ್ತಾರೆ. ಹಣೆಯ ಮೇಲೆ ಊರ್ಧ್ವಪುಂಡ್ರವನ್ನು ಧರಿಸುತ್ತಾರೆ; ತಿರುಪತಿಯ ವೆಂಕಟೇಶ್ವರನೇ ಬಹುಮಟ್ಟಿಗೆ ಇವರ ದೈವ. ಉಳಿದಂತೆ ನರಸಿಂಹ ಮತ್ತು ಹನುಮಂತ ಇವರ ಪೂಜೆಯೂ ವಿಶೇಷವಾಗಿ ನಡೆಯುತ್ತದೆ. ಇವರ ಕಸುಬು ದೇವರ ಹೆಸರನ್ನು ಹೇಳಿಕೊಂಡು ಊರೂರು, ಕೇರಿಕೇರಿ ತಿರುಗುತ್ತ ತಿರುಪೆ ಎತ್ತುವುದು. ಗರುಡಗಂಭವನ್ನು (ಗರುಡಗಂಭವೆಂದು ಹೆಸರಾದರೂ ಇದು ದೀಪದ ಕಂಬವೇ) ಕೈಯಲ್ಲಿ ಹಿಡಿದು ನಡೆಯುತ್ತ, ಎಲ್ಲಾದರೊಂದು ಕಡೆ ನೆಲದ ಮೇಲಿರಿಸಿ ಶಂಖವನ್ನೂದಿ, ಜಾಗಟೆಯನ್ನು ಬಡಿದು, ತಂಬೂರಿಯನ್ನು (ಕಿನ್ನರಿಯನ್ನು) ಮೀಟಿ, ಸಂಕೀರ್ತನವನ್ನು ಮಾಡುವರು. ಗೋವಿಂದ ನಾಮೋಚ್ಚಾರಣೆಯನ್ನು ಮಾಡುವರು. ನೆರೆದ ಜನರು ಕಾಣಿಕೆಯನ್ನು ಇಟ್ಟುಹೋಗುವರು. ಇದು ಉಂಛವೃತ್ತಿಯ ಜಾನಪದ ನೆಲೆ. ಕೆಲವೊಮ್ಮೆ ಕಾವಡಿಯನ್ನು ಹೊತ್ತು, ಅದರಲ್ಲಿ ವಿಷ್ಣುವಿಗ್ರಹ, ಶಾಲಿಗ್ರಾಮ, ಶಂಖ, ತಿರುಮಣ್ಣು (ಶ್ರೀಚೂರ್ಣ) ಮೊದಲಾದವುಗಳನ್ನಿರಿಸಿಕೊಂಡು, ಜನರೆದುರು ಅವನ್ನು ತೋರಿಸಿ ದೇವರ ನಾಮಗಳನ್ನು ಹಾಡುವರು, ತಿರುಮಣ್ಣನ್ನು ಪ್ರಸಾದವಾಗಿ ಕೊಡುವರು. ಜನರಿಂದ ಕಾಣಿಕೆಯನ್ನು ಸ್ವೀಕರಿಸಿ ಮುಂದೆ ಹೋಗುವರು.

ಇವರಲ್ಲಿ ಆಟದ ದಾಸರು ಅಥವಾ ಭಾಗವತದಾಸರೆಂಬ ಗುಂಪಿನ ಗಂಡಸರು ಸ್ತ್ರೀವೇಷವನ್ನು ತೊಟ್ಟು ಕಾಲಿಗೆ ಗೆಜ್ಜೆ ಕಟ್ಟಿಕೊಂಡು. ತಾಳ ಮೃದಂಗದ ಗತಿಗೆ ನಾಟ್ಯ ಮಾಡುವರು; ಭಾಗವತದ ಪುರಾಣದ ಪ್ರಸಂಗಗಳನ್ನು ಎತ್ತಿಕೊಂಡು ನಾಟಕವನ್ನಾಡು ವುದೂ ಉಂಟು. ಕೆಲವರು ಕೋಲೆಬಸವನನ್ನು ಮುಂದೆಮಾಡಿಕೊಂಡು ಹೋಗುತ್ತ ಅದರಿಂದ ಆಟವಾಡಿಸುವರು. ದಂಡೆದಾಸರೆಂಬ ಗುಂಪಿನವರಿಗೆ ಕಾಂಚೀಪುರದ ಅರಸರು ದಂಡೆ, ತಾಳ, ತಂಬೂರಿಗಳನ್ನು ಸನ್ಮಾನವಾಗಿ ನೀಡಿದರೆಂದು ಅವರಲ್ಲಿ ಪ್ರತೀತಿಯಿದೆ. ಅಂದಿನಿಂದ ಅವರು ದಂಡಿಗೆಯ ದಾಸರು ಅಥವಾ ದಂಡೆದಾಸರೆನಿಸಿ ಕೊಂಡರಂತೆ. ಇವರು ವಿಶೇಷವಾಗಿ ಹಾಡುವರು; ಹಾಡುವಾಗ ಏಕನಾದದಂಥ ಸರಳವಾದ ತಂಬೂರಿಯನ್ನು ಮೀಟುವರು(ಅದೇ:೩೦೬).

ಈ ರೀತಿಯಾಗಿ ಈ ಮುಂಚೆ ಇದ್ದ ಚೆನ್ನದಾಸರ ಸಮುದಾಯದ ಜನಪದ ವಾದ್ಯ ಮತ್ತು ಭಿಕ್ಷಾ ಉಪಕರಣಗಳನ್ನು ವೇಷ ಭೂಷಣಗಳನ್ನುಧರಿಸಿ ಜನಸಾಮಾನ್ಯರನ್ನು ಆಕರ್ಷಿಸುವ ಹಾಡುಗಾರಿಕೆಯನ್ನು ಹರಿದಾಸರು ಬಳಸಿಕೊಂಡರಲ್ಲದೆ, ಜಾತೀಯತೆಯ ಅವಮಾನಕ್ಕೀಡಾಗಿದ್ದ ಈ ಸಮುದಾಯಕ್ಕೆ ವೈಷ್ಣವ ಧರ್ಮದೀಕ್ಷೆ ನೀಡಿ ತಮ್ಮ ಧರ್ಮಪ್ರಸಾರಕ್ಕೆ ಅವರನ್ನು ಬಳಸಿಕೊಂಡರು.

ಹಾಡುವವರಿಗೆ ಹರಿಸ್ಮರಣೆಯ ಹಾಡುಗಳನ್ನು ನೃತ್ಯನಟನೆ ಮಾಡುವವರಿಗೆ ವಿಷ್ಣುವಿನ ದಶಾವತಾರದ ಲೀಲೆಗಳ ಪ್ರಸಂಗಗಳನ್ನು ನೀಡಿ ಜನಸಾಮನ್ಯರ ಮಧ್ಯದಲ್ಲಿ ಅವರನ್ನು ಬಿಟ್ಟರು. ಈ ಜನಪದ ಚೆನ್ನದಾಸರು ಗುರುಗಳಿಂದ ಚಕ್ರಾಂಕ ಹಾಕಿಸಿಕೊಂಡು

ದೀಕ್ಷೆ ಪಡೆದು ಹರಿದಾಸರೆನಿಸಿಕೊಂಡವರು. ಹೀಗೆ ತಮ್ಮ ವೈಷ್ಣವ ಧರ್ಮಪ್ರಸಾರಕ್ಕೆ ಭಿಕ್ಷುಕ ಕಲಾವಿದರಾದ ಚೆನ್ನದಾಸರನ್ನು ಹರಿದಾಸ ಪರಂಪರೆಯವರು ಬಳಸಿ ಕೊಂಡಿರುವುದು ಕಂಡು ಬರುತ್ತದೆ. ಚೆನ್ನದಾಸರು ಹರಿದಾಸರಾಗಿರುವುದನ್ನು ತೋರಿಸಿ ಕೊಡುತ್ತದೆ.

**ಚೆನ್ನದಾಸರು ವೈಷ್ಣವ ಭಿಕ್ಷುಕರು ಏಕಾದರು?**

ಕರ್ನಾಟಕದ ೧೫, ೧೬ ನೇ ಶತಮಾನದ ಹರಿದಾಸ ಚಳುವಳಿಗಿಂತ ಮುಂಚೆಯೆ ವೈಷ್ಣವ ಧರ್ಮದ ಪ್ರಚಾರ ಮತ್ತು ಪ್ರಸಾರ ಕಾರ್ಯ ಶುರುವಾಗಿತ್ತು. ಅದಕ್ಕೆ ಮೂಲ ತಮಿಳುನಾಡಿನ ಶ್ರೀ ವೈಷ್ಣವ ಭಕ್ತರಾದ ಆಳ್ವಾರರ ಭಕ್ತಿ ಚಳುವಳಿ. ಕ್ರಿ ಶ ೭ ನೆಯ ಶತಮಾನದಿಂದ ೯ನೆಯ ಶತಮಾನದ ಅವಧಿಯಲ್ಲಿದ್ದ ಹನ್ನೆರಡು ಜನ ಆಳ್ವಾರರ ತತ್ವಭೋದನೆ, ವಿಷ್ಣು ಭಕ್ತಿಯ ಸುಧಾರಣಾವಾದದ ಚಿಂತನೆ ಅಲ್ಲಿತ್ತು. ಇವರಲ್ಲಿ ಎಲ್ಲ ಜಾತಿಯವರೂ ಇದ್ದರು. ಬ್ರಾಹ್ಮಣ, ಕ್ಷತ್ರಿಯ, ಅಂತ್ಯಜ, ಕಳ್ಳರ್, ವೆಳ್ಳಾಳ್ ಇತ್ಯಾದಿ ಜಾತಿಗಳವರಿದ್ದರು.

"ಸ್ತ್ರೀ– ಪುರುಷ, ಜಾತಿ– ಮತ, ವೃತ್ತಿ– ಸ್ಥಾನಗಳಾಚೆ ನಿಂತು ಪರಿಶುದ್ಧ ಮಾನವರಾಗಿ ಭಕ್ತಿಯೇ ಮುಕ್ತಿಗೆ ದಾರಿ, ಭಕ್ತಿಗೆ ಎಲ್ಲರೂ ಅಧಿಕಾರಿಗಳು, ಶರಣಾಗತಿಯೇ ಭಕ್ತಿಯ ಸುಲಭೋಪಾಯ ಎಂಬ ಶ್ರೀ ವೈಷ್ಣವ ತತ್ವಕ್ಕೆ ಆಳ್ವಾರರು ಮೂಲ ಸಾಧಕರಾಗಿದ್ದಾರೆ (ಗೀತಾಚಾರ್ಯ, ನಾ:೨೦೦೪:೧೨).

ಸಮಾಜದಲ್ಲಿನ ಎಲ್ಲ ವರ್ಗದವರನ್ನು ಸ್ಪಂದಿಸಿರುವ ಈ ಚಳುವಳಿ ವಿಶೇಷವಾಗಿ ಬ್ರಾಹ್ಮಣವರ್ಗವು, ಶೂದ್ರವರ್ಗದವರನ್ನು ಆದರಿಸುವ, ಗೌರವಿಸುವ, ಹೊತ್ತು ಮೆರೆಸು ವಂತಹ ಮಹತ್ವದ ಕ್ರಾಂತಿಯಾಗಿದೆ. ಆದರೆ ಆ ಕ್ರಾಂತಿಯಲ್ಲಿ ವಚನ ಚಳುವಳಿಯಲ್ಲಿ ಆದಂತೆ ಪುರೋಹಿತಶಾಹಿ ವಿರೋಧದ ಅಲೆಯಾಗಲಿ, ವಾದ ಪ್ರತಿವಾದವಾಗಲಿ, ಮೇಲ್ವರ್ಗದವರ ಮೇಲೆ ಆಕ್ರಮಣವಾಗಲಿ, ದ್ವೇಷ ಅಸಹನೆಯಾಗಲಿ ಕಂಡುಬರದೆ ವೈದಿಕ ವರ್ಗದವರು ಯಾವ ಉನ್ನತ ಸ್ಥಾನವನ್ನು ಪಡೆದು ಗೌರವಾನ್ವಿತರಾಗಿದ್ದರೋ ಅದೇ ಉನ್ನತ ಸ್ಥಾನವನ್ನು ಅವರೆದುರೇ ಅವರ ಸಹವಾಸವಿಲ್ಲದೆ ಸಹಾಯವಿಲ್ಲದೆ ತಾವೂ ಪಡೆದು ಅವರಿಂದಲೇ ಗೌರವಕ್ಕೆ ಪಾತ್ರವಾಗಿರುವಂತಹ ಶೀತಲ ಸಮರವಾಗಿದೆ. ಅವರೆಲ್ಲರೂ ಇಂದಿಗೂ ವೈದಿಕ ವರ್ಗದವರಿಂದ ಪೂಜಿಸಲ್ಪಡುತ್ತಿರುವ ಆರಾಧ್ಯದೈವವಾಗಿದ್ದಾರೆ(ಅದೇ:೧೦).

ಇಲ್ಲಿಯೂ ಕೂಡ ಭಕ್ತ ನಾರಾಯಣನಲ್ಲಿ ಶರಣು ಹೊಂದಿ, ಲೋಕ ಜೀವನದ ಆಸೆಯನ್ನು ತೊರೆದು ವೈಷ್ಣವ ಧರ್ಮದ ಚಿನ್ಹೆಗಳಾದ ತಾಪ, ಪುಂಡ್ರ, ಪ್ರಪತ್ತಿ ನಾಮ, ಮಂತ್ರ ಮತ್ತು ಯಾಗ ಎಂಬ ಪಂಚಸಂಸ್ಕಾರಗಳನ್ನು ಧರಿಸುವ ಮೂಲಕ ಭಗವಂತನ ದಾಸನಾಗುವ ಆರಾಧನಾ ವಿಧಾನವಿದೆ. ಹೀಗೆ ಶ್ರೀ ವಿಷ್ಣುವಿನ ದಾಸರಾಗುವ ಪ್ರಕ್ರಿಯೆ ಇಲ್ಲಿ ಮುಖ್ಯವಾಗಿದೆ. ಜಾತಿಯ ಅಪಮಾನಕ್ಕೆ ಈಡಾದ ತಳವರ್ಗಗಳಲ್ಲಿ ಇಲ್ಲಿಂದಲ್ಲೇ ದಾಸರಾಗುವ ಪರಂಪರೆ ಬೆಳೆದು ಬಂದಿರುವುದು ತಿಳಿದುಬರುತ್ತದೆ.

ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ, ಏಳನೇ ಶತಮಾನದ ಆಳ್ವಾರರಿಗೆ ಸಂಬಂಧಿಸಿದ ಕಥೆಗಳಲ್ಲಿನ ಮಾಲದಾಸರಿ ಕಥೆ. ದಾಸ ವರ್ಗಗಳಲ್ಲಿನ ಹೀನಕುಲವೊಂದರ ವ್ಯಕ್ತಿ ಮಾಲದಾಸರಿ ಶ್ರೇಷ್ಠ ವಿಷ್ಣು ಭಕ್ತನಾಗಿ ಮಹಿಮಾವಂತನಾಗಿರುವುದು.

ಆದರೆ ಈ ವಿಶಿಷ್ಟಾದ್ವೈತ ವೈಷ್ಣವ ಧರ್ಮ ಕರ್ನಾಟಕದಲ್ಲಿ ಪ್ರವರ್ಧಮಾನಕ್ಕೆ ಬರಲೇ ಇಲ್ಲ. ಆದರೆ ದಕ್ಷಿಣ ಭಾರತದಲ್ಲಿ ಅನೇಕ ತಳಸಮುದಾಯಗಳಿಗೆ ಧಾರ್ಮಿಕ ಹಕ್ಕು ನೀಡಿದ್ದು ಇದರ ಹೆಗ್ಗಳಿಕೆಯಾಗಿದೆ. ಇದರಿಂದಾಗಿ ಅನೇಕ ಸಮುದಾಯಗಳು ಶ್ರೀವೈಷ್ಣವ ದಾಸರಾದವು. ಅವರೇ ಹರಿದಾಸರೆನಿಸಿಕೊಂಡರು.

ತದನಂತರದಲ್ಲಿ ೧೩ನೇ ಶತಮಾನದಲ್ಲಿ ಕನ್ನಡ ನಾಡಿನಲ್ಲೇ ಹುಟ್ಟಿ ಬೆಳೆದು ತತ್ವಬೋಧನೆ ಮಾಡಿದ ಶ್ರೀ ಮಧ್ವಾಚಾರ್ಯರ ಶಿಷ್ಯ ಪರಂಪರೆಯಿಂದ ದ್ವೈತ ಪರವಾದ ವೈಷ್ಣವ ಧರ್ಮ, ಭಾಗವತ ಧರ್ಮದ ಒಂದು ಪಂಥವಾಗಿ ಬೆಳೆಯಿತು. ಈ ಭಾಗವತ ಸಂಪ್ರದಾಯ ಐದನೇ ಶತಮಾನದಿಂದಲೇ ಪಂಡರಾಪುರದಲ್ಲಿ ಇದ್ದುದಕ್ಕೆ ಆಧಾರವಿದೆ. ಪಾಂಡುರಂಗ ಅಥವಾ ವಿಠಲ ಈ ಪಂಥದ ಆರಾಧ್ಯ ದೈವ. ೧೬ನೇ ಶತಮಾನದವರೆಗೂ ಪಂಡರಾಪುರದ ದಕ್ಷಿಣ ಭಾಗ ಹಾಗೂ ಅದರ ಸುತ್ತಮುತ್ತಲ ಭಾಗಗಳು ಕರ್ನಾಟಕದ ಭಾಗಗಳೇ ಆಗಿದ್ದವು (ನಾಗರತ್ನ, ಟಿ ಎಸ್:೧೯೯೪:೭).

೧೫ನೇ ಶತಮಾನದ ವಿಜಯನಗರ ಸಾಮ್ರಾಜ್ಯದ ಆಶ್ರಯ ಪಡೆದ ಹರಿದಾಸ ಪರಂಪರೆಯು ಜಾತಿಹೀನ ಸಮುದಾಯಗಳಿಗೆ ಧರ್ಮದೀಕ್ಷೆ ನೀಡಿ ಸಾಂತ್ವಾನ ನೀಡಿತು. ತುಳಿತಕ್ಕೊಳಗಾದ, ಅಪಮಾನಕ್ಕೊಳಗಾದ ಎಲ್ಲ ಸಮುದಾಯಗಳು ವೈಷ್ಣವೀಕರಣಕ್ಕೊಳಗಾಗಿ ಮಾನ್ಯತೆ ಪಡೆದುಕೊಳ್ಳತೊಡಗಿದವು. ಅವುಗಳಂತೆ ಚೆನ್ನದಾಸರ ಮೂಲ ಸಮುದಾಯವೂ ಹರಿದಾಸ ದೀಕ್ಷೆ ಸ್ವೀಕರಿಸಿತು.

ಹರಿದಾಸರಿಗೆ ವೈದಿಕ ಧರ್ಮವನ್ನು ಉಳಿಸಬೇಕಾಗಿತ್ತು. ಹರಿದಾಸ ತತ್ವವಾದಿಗಳ ಪ್ರಮುಖ ಉದ್ದೇಶ ಧರ್ಮಪ್ರಸಾರ. ಹನ್ನೆರಡನೆಯ ಶತಮಾನದ ಶರಣ ಚಳುವಳಿ ಇಡೀ ವೈದಿಕ ವ್ಯವಸ್ಥೆಯ ವಿರುದ್ಧದ ಆಂದೋಲನವಾಗಿತ್ತು. ಇಡೀ ಕನ್ನಡ ನಾಡನ್ನೇ ತನ್ನ ಉದಾತ್ತ ತತ್ವಗಳಿಂದ ಧಾರ್ಮಿಕ ಪಥದಲ್ಲಿ ಕೊಂಡೊಯ್ದು, ದೇಶಭಾಷೆಯಲ್ಲಿ ಭಕ್ತಿ ಪ್ರಸಾರ ಮಾಡುವ ಮೂಲಕ ಸಮಗ್ರ ಕನ್ನಡ ಜನತೆಯನ್ನು ಮುಟ್ಟಿದ ಕರ್ನಾಟಕದ ಮೊಟ್ಟಮೊದಲ ದಾರ್ಮಿಕ ಪಂಥ ಎಂದು ಹೆಸರಾಗಿತ್ತು. ವೀರಶೈವ ಧರ್ಮ ವೇದ ಪ್ರಾಮಾಣ್ಯವನ್ನು ಧಿಕ್ಕರಿಸಿದ್ದರಿಂದ ಇಕ್ಕಟ್ಟಿನಲ್ಲಿದ್ದ ವೈದಿಕ ಧರ್ಮೀಯರಿಗೆ ಅದನ್ನು ಅರಿತುಕೊಳ್ಳುವುದು ಕಷ್ಟವಾಯಿತು. ಆದ್ದರಿಂದ ತಮ್ಮ ಧರ್ಮದಲ್ಲೇ ಆಂತರಿಕ ಬದಲಾವಣೆಗಾಗಿ ಕಾದು ಕುಳಿತು ಚಡಪಡಿಸುತ್ತಿದ್ದ ವೈದಿಕ ಧರ್ಮೀಯರಿಗೆ ಬಹುಶಃ ಮಧ್ವಾಚಾರ್ಯರ ದ್ವೈತ ಸಿದ್ಧಾಂತ ಬಲವಾದ ಆಲಂಬನೆಯಾಗಿ ದೊರೆತಿರಬೇಕು. ಸ್ವತಃ ಆಚಾರ್ಯರೇ ಮೂವತ್ತೇಳು ಗ್ರಂಥಗಳನ್ನು ರಚಿಸಿ ತಮ್ಮ ತತ್ವವನ್ನು ಬಿತ್ತರಿಸಿದ್ದಾರೆ (ಅದೇ:೩-೪). ಆದರೆ ಇಡೀ ಕರ್ನಾಟಕದ ಜನಮಾನಸದಲ್ಲಿ ವಚನ ಚಳುವಳಿಯ ತತ್ವಸಿದ್ಧಾಂತ ಮತ್ತು ವಚನಸಾಹಿತ್ಯ ಸೂರೆಗೊಂಡಿತ್ತು. ಇಂಥ ಸಂದರ್ಭದಲ್ಲಿ ವೈದಿಕ

ಧರ್ಮದ ಪ್ರಚಾರ ಹರಿದಾಸ ಪಂಥಕ್ಕೆ ದೊಡ್ಡ ಸವಾಲಾಯಿತು. ಜೊತೆಗೆ ಶರಣ ಚಳುವಳಿ ದುಡಿವ ಮತ್ತು ಅಸ್ಪೃಶ್ಯ ಸಮುದಾಯಗಳಿಗೆ ಧ್ವನಿಯಾಗಿ ವೈದಿಕ ವ್ಯವಸ್ಥೆಯ ಕರ್ಮಠತೆಗಳನ್ನೆಲ್ಲ ಬಯಲು ಮಾಡಿತ್ತು. ಸಾಮಾನ್ಯ ಜನತೆ ಬಹುತೇಕ ಅಸ್ಪೃಶ್ಯ ಸಮುದಾಯಗಳೆಲ್ಲ ವೀರಶೈವ ಧರ್ಮದಲ್ಲಿ ವಿಲೀನಗೊಂಡಿದ್ದವು.

ಇಂಥ ಸಂದಿಗ್ಧ ಸಂದರ್ಭದಲ್ಲಿ ವೈದಿಕ ಧರ್ಮವು ವೇದೋಪನಿಷತ್ತುಗಳನ್ನು ಹೇಗೆ ಪ್ರಚಾರ ಮಾಡಬೇಕು. ಯಾವ ಸಮುದಾಯಗಳನ್ನು ಬಳಸಿಕೊಳ್ಳಬೇಕು ಎಂಬ ದ್ವಂದ್ವದಲ್ಲಿತ್ತು. ಹಾಗಾಗಿ ವೈದಿಕ ಧರ್ಮವು ಅಂದರೆ ಹರಿದಾಸ ಪಂಥವು ವೇದ ಉಪನಿಷತ್ತುಗಳನ್ನು ರಾಮಾಯಣ, ಮಹಾಭಾರತ, ಪುರಾಣಗಳ ಜೊತೆ ಜೊತೆಗೆ ಜನಗಳ ಮುಂದೆ ಪ್ರಚಾರ ಮಾಡಲು ಮುಂದಾಯಿತು.

"ಶ್ರೀಮಧ್ವಾಚಾರ್ಯರು ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ವೇದೋಪ ನಿಷತ್ತುಗಳೊಂದಿಗೆ ರಾಮಾಯಣ, ಭಾರತ ಹಾಗೂ ಇತರ ಪುರಾಣಗಳನ್ನು ಅಂಗೀಕರಿಸ ಬಹುದಾಗಿ ಭಾರತ ತಾತ್ಪರ್ಯನಿರ್ಣಯದಲ್ಲಿ ಪ್ರಾರಂಭದಲ್ಲಿಯೇ ಸ್ಪಷ್ಟಪಡಿಸಿರುತ್ತಾರೆ. ಅದಕ್ಕನುಗುಣವಾಗಿ ಹರಿದಾಸರು ವೇದೋಪನಿಷತ್ತುಗಳೊಂದಿಗೆ ರಾಮಾಯಣ, ಮಹಾಭಾರತ, ಭಾಗವತ ಮತ್ತು ಇತರ ಪುರಾಣಗಳನ್ನು ತಮ್ಮ ವಿಷಯ ಸಮರ್ಥನೆಗೆ, ಭಕ್ತಿ ಪ್ರಸಾರಕ್ಕೆ ಮಾಧ್ಯಮಗಳಾಗಿ ಬಳಸಿಕೊಂಡಿದ್ದಾರೆ. ಅಲ್ಲದೆ ಹರಿದಾಸರು ಹರಿಯ ಅವತಾರಗಳನ್ನು ಒಪ್ಪಿಕೊಂಡ ವಿಷ್ಣು ಪಂಥೀಯರು. ಅದರಲ್ಲೂ ಹನುಮನಿಗೆ ಗುರುಸ್ಥಾನ ಕೊಟ್ಟಿರುವ ದ್ವೈತಿಗಳು, ಆಚಾರ್ಯರ ಹನುಮ ಭೀಮ ಮಧ್ವ ಅವತಾರತ್ರಯದಲ್ಲಿ ನಂಬಿಕೆಯಿರುವುದರಿಂದ ಹರಿಯ ರಾಮಾವತಾರದ ಕತೆಯೂ, ಹನುಮನ ಸಾಹಸದ ಪ್ರತೀಕವೂ ಆಗಿರುವ ರಾಮಾಯಣವನ್ನು ಹರಿದಾಸರು ಸ್ವೀಕರಿಸಿದ್ದಾರೆ. ಪಾಂಡವರ ಆರಾಧ್ಯ ದೈವವಾದ ಶ್ರೀಕೃಷ್ಣನ ಕತೆ ಹಾಗೂ ಆಚಾರ್ಯರ ದ್ವಿತೀಯ ಅವತಾರವಾದ ಭೀಮನು ಶೌರ್ಯ ಪರಾಕ್ರಮಗಳ ಪ್ರತೀಕವಾಗಿರುವ ಮಹಾಭಾರತ ಪ್ರಸಂಗಗಳು ದಾಸರ ಮನಸೆಳೆದಿವೆ. ಭಾಗವತವಂತೂ ಸಾಕ್ಷಾತ್ ಶ್ರೀ ಹರಿಯ ಲೀಲಾ ಕಥನವೇ ಆಗಿರುವುದರಿಂದ ಹರಿದಾಸರಿಗೆ ಅದರಿಂದ ಅಪಾರವಾದ ಸಾಮಗ್ರಿ ದೊರೆತಿದೆ. ಎಲ್ಲಕ್ಕಿಂತ ಹೆಚ್ಚಾಗಿ ಈ ಮೊದಲೇ ಪ್ರಸ್ತಾಪಿಸಿರುವಂತೆ ಈ ಅಧ್ಯಾತ್ಮ ಕೃತಿಗಳ ಹಿನ್ನೆಲೆಯಲ್ಲಿ ಏನನ್ನು ಹೇಳಿದರೂ ಅದು ಜನಸಾಮಾನ್ಯರನ್ನು ನೇರವಾಗಿ ತಲುಪುತ್ತದೆ. ಹೀಗೆ ಜನತೆಯ ಪುರಾಣಗಳ ಬಗೆಗಿನ ಮಾನಸಿಕ ಸಿದ್ಧತೆಯನ್ನು ಹರಿದಾಸರು ತಮ್ಮ ಪ್ರಸಾರದ ಉಪದೇಶದ ಸಶಕ್ತ ಮಾಧ್ಯಮವನ್ನಾಗಿ ದುಡಿಸಿಕೊಂಡಿದ್ದಾರೆ (ಅದೇ:೫೧–೨).

ಈ ಎಲ್ಲ ವಿಷಯಗಳನ್ನು ಜನಸಾಮಾನ್ಯರ ಮುಂದೆ ಹೋಗಿ ಬಿತ್ತರಿಸಲು ಹಲವು ಅಲೆಮಾರಿ ಸಮುದಾಯಗಳ ಕಲಾವಿದರನ್ನೇ ಈ ವೈದಿಕ ಮತವು ಬಳಸಿ ಕೊಂಡಿತು. ಹಾಡುವ, ಆಟವಾಡುವ, ನರ್ತಿಸುವ ದಾಸ ಸಮುದಾಯವನ್ನು ಈ ಮತವು ಬಳಸಿಕೊಂಡಿತು. ಅಲ್ಲದೆ ಜಾತಿಯ ಅಪಮಾನಕ್ಕೆ ತುತ್ತಾದ ಈ ದಾಸ

ಸಮುದಾಯಗಳಿಗೆ ತಮಗೊಂದು ಧರ್ಮದ ನೆಲೆ ಬೇಕಾಗಿತ್ತು. ಹಾಗೆಯೇ ಭಿಕ್ಷೆ ಬೇಡುವುದರ ಬದಲಾಗಿ ಒಂದು ಜನಪ್ರಿಯ ಧರ್ಮದ ಧಾರ್ಮಿಕ ವಿಧಿಯ ಮೂಲಕ, ಧರ್ಮ ಸೂಚಿತ ಸಂಕೇತಗಳನ್ನಾಧರಿಸಿ ಭಿಕ್ಷೆ ಬೇಡುವುದರಿಂದ ಅದಕ್ಕೊಂದು ಘನತೆ ಬರುತ್ತದೆ. ದಾನಿಗಳು ಗೌರವದಿಂದ ಕಾಣುತ್ತಾರೆ. ಹಾಗಾಗಿ ಇವರು ವೈಷ್ಣವ ಧರ್ಮ ಸ್ವೀಕರಿಸಿ ಭಿಕ್ಷುಕ ವೃತ್ತಿಗಿಳಿದರು. ಅದಕ್ಕಾಗಿ ಅವರು ವೈಷ್ಣವ ಧರ್ಮ ಸ್ವೀಕರಿಸಿ ಹರಿದಾಸ ಪಂಥಸೇರಿ ಹರಿದಾಸರೆನಿಸಿಕೊಂಡರು.

ಚೆನ್ನದಾಸರ ಸಮುದಾಯದಲ್ಲಿ ಕೆಲವರು ತಂಬೂರಿ(ಏಕತಾರಿ)ಯನ್ನು ಮತ್ತೆ ಕೆಲವರು ದಂಡಿಗೆಯನ್ನು ನುಡಿಸಿ ಇಂಪಾಗಿ ಹಾಡುತ್ತ ಭಿಕ್ಷೆ ಬೇಡುತ್ತಿದ್ದರು. ಜೊತೆಯಲ್ಲಿ ಕಾಲಲ್ಲಿಯ ಗೆಜ್ಜೆ, ಕೈ ಚಿಟಿಕೆ ಸ್ವರಗಾನಕ್ಕೆ ಮೆರಗು ತರುತಿತ್ತು. ಇನ್ನು ಕೆಲವರು ನರ್ತನ ಗಾಯನದಿಂದ ಬಯಲಾಟದ ಪ್ರಸಂಗಗಳನ್ನು ಅಭಿನಯಿಸಿ ಹೊಟ್ಟೆ ಹೊರೆಯುತ್ತಿದ್ದರು. ಕೇಳುಗ ಜನರನ್ನು ಈ ಚೆನ್ನದಾಸರ ಸಮುದಾಯವರು ಮಂತ್ರಮುಗ್ಧರನ್ನಾಗಿ ಸುತ್ತಿದ್ದರು. ಇಂಥ ಜನಾನುರಾಗಿ ಕಲೆ ಮತ್ತು ಕಲಾವಿದರನ್ನು ಧರ್ಮ ಪ್ರಸಾರಕ್ಕಾಗಿ ಹರಿದಾಸ ಪಂಥದವರು ಬಳಸಿಕೊಂಡರು.

ವಿಷ್ಣುವಿನ, ಕೃಷ್ಣನ, ರಾಮನ ಲೀಲೆಗಳ ಹಾಡುಗಳನ್ನು ಹಾಡಲು ತಂಬೂರಿ ಮತ್ತು ದಂಡಿಗೆ ದಾಸರಿಗೆ ವಹಿಸಿದರೆ, ವಿಷ್ಣುವಿನ ದಶಾವತಾರದ ಲೀಲೆಗಳನ್ನು ರಾಮಾಯಣ, ಮಹಾಭಾರತ ಕಥೆಗಳನ್ನು ಬಯಲಾಟಗಳ ಮೂಲಕ ಅಭಿನಯಿಸಿ ಹಾಡಿ ನರ್ತಿಸಲು ಆಟದ ದಾಸರಿಗೆ ವಹಿಸಿದರು ಮತ್ತು ಈ ದಾಸ ಸಮುದಾಯ ಅದನ್ನು ಶ್ರದ್ಧೆಯಿಂದ ಒಪ್ಪಿಕೊಂಡು ಮುಂದುವರಿಯಿತು. ಈ ಸಮುದಾಯ ಮತ್ತು ಇತರರನ್ನು ಪ್ರೋತ್ಸಾಹಿಸಲು ವೈದಿಕರು ವಿಶೇಷವಾಗಿ ಹನುಮನನ್ನು ಬಳಸಿಕೊಂಡರು. ಹನುಮನ ಮೂಲಕ ರಾಮಾಯಣವನ್ನು ಜನಮನದ ನಡುವೆ ಪ್ರಚಾರಗೊಳಿಸುವ, ಸೇವಕತನದ ಪರಮ ಲಾಂಛನವನ್ನಾಗಿಯೂ ಪ್ರಚುರಪಡಿಸುವುದರ ಸಲುವಾಗಿ ಈ ಸಮುದಾಯಕ್ಕೆ ನಂಟು ಅಂಟಿಸಿದರು. ಏಕೆಂದರೆ ವೇದ, ಪುರಾಣ, ರಾಮಾಯಣ, ಮಹಾಭಾರತಗಳ ಪೊಳ್ಳುತನವನ್ನು ಈ ಮುಂಚೆ ಬೌದ್ಧರು, ಜೈನರು, ಶರಣರು ಬಯಲಿಗೆಳೆದಿದ್ದರು. ಇಂಥ ಸಂದರ್ಭದಲ್ಲಿ ನೇರವಾಗಿ ಅವುಗಳ ಪ್ರಸಾರಕ್ಕೆ ಮುಂದಾಗಿದ್ದರೆ. ಪ್ರತಿರೋಧವನ್ನೆದುರಿಸಬೇಕಾಗುತ್ತಿತ್ತು. ಹಿನ್ನಡೆಯುಂಟಾಗುತ್ತಿತ್ತು. ಈ ಕಾರಣಕ್ಕಾಗಿ ಇಲ್ಲಿನ ಜನರ ಸ್ಥಳೀಯ ಪುರಾಣ ಇಲ್ಲವೆ ಸಾಂಸ್ಕೃತಿಕ ವೀರನ ಮೂಲಕ ತಮ್ಮ ಮತಧರ್ಮದ ಪ್ರಚಾರ ಮಾಡಬೇಕೆಂದು ಯೋಚಿಸಿದರು. ಅದಕ್ಕಾಗಿ ಹನುಮನನ್ನು ಮುಂದಿಟ್ಟುಕೊಂಡು ಅವುಗಳ ಪ್ರಚಾರಕ್ಕೆ ವೈದಿಕ ಗುರುಗಳು ಮುಂದಾದರು. ಎಷ್ಟೇ ಆಗಲಿ ಹನುಮ ಕರ್ನಾಟಕದವನು. ಆಗಲೂ ಈಗಲೂ ದಾಸ ಸಮುದಾಯದ ಎಲ್ಲ ಪಂಗಡದವರಿಗೂ ಹನುಮ ಇಂದಿಗೂ ಕುಲದೇವತೆ. ಎಷ್ಟೋ ಹನುಮಂತನ ಗುಡಿಗಳಿಗೆ ಈ ಸಮುದಾಯದವರೇ ಪೂಜಾರಿಗಳಾಗಿದ್ದಾರೆ.

ಹನುಮಂತನನ್ನು ಮುಂದಿಟ್ಟುಕೊಂಡು ವೈದಿಕ ಧರ್ಮ ಪ್ರಚಾರ ಮಾಡುವ

ಕಾರ್ಯ ಎಷ್ಟು ತೀವ್ರವಾಗಿತ್ತೆಂದರೆ, ಶ್ರೀಕೃಷ್ಣ ದೇವರಾಯನ ಅಧಿಕಾರದ ಅವಧಿಯ ೧೫೦೯ ರಿಂದ ೧೫೩೦ರವರೆಗೆ ವ್ಯಾಸ ತೀರ್ಥರು ಚಂದ್ರಗಿರಿಗೆ ಬಂದದ್ದು ಸಾಳುವ ನರಸಿಂಹನ ಕಾಲದಲ್ಲಿ. ಅನಂತರ ೧೫೭೦ರ ಸುಮಾರಿಗೆ ದೇಶ ಸಂಚಾರವನ್ನು ಕೈಗೊಂಡು ಕನ್ನಡ ನಾಡಿನಲ್ಲಿ ೭೩೨ ಹನುಮಂತನ ಶಿಲಾ ಮೂರ್ತಿಗಳನ್ನು ಪ್ರತಿಷ್ಠೆ ಮಾಡಿದರೆಂದು ಪ್ರತೀತಿಯಿದೆ (ರಾಮಚಂದ್ರರಾವ್: ಸಾ ಕೃ:೨೦೦೩:೧೧೩).

ಅದೇ ರೀತಿ ಕೀರ್ತನಕಾರರು ಹನುಮನ ಕುರಿತು ಸಾಕಷ್ಟು ಕೀರ್ತನೆಗಳನ್ನು ರಚಿಸಿದ್ದಾರೆ. ಹನುಮ, ಭೀಮ, ಮಧ್ವ ಈ ಅವತಾರತ್ರಯ ಸ್ತುತಿಯೂ ಹರಿದಾಸರಲ್ಲಿ ಮೇಲಿಂದ ಮೇಲೆ ಬರುತ್ತದೆ (ನಾಗರತ್ನ, ಟಿ ಎಸ್:೧೯೯೪: ೫೦-೫೪).

ನಮ್ಮ ಹಳ್ಳಿಗರನ್ನು ಎಲ್ಲ ಮತಗಳೂ ಸಾಧಿಸಿವೆ, ಸಾಧಿಸಿಕೊಂಡಿವೆ. ಇದಕ್ಕೆ ಮಾಧ್ವ ಮತವು ಹೊರತಾಗಿಲ್ಲ. ಹಳ್ಳಿಗಳಲ್ಲಿರುವ ಮಾಧ್ವಮತಾನುಯಾಯಿಗಳು ಹನುಮಂತದೇವರು ಎಲ್ಲರಿಗೂ ಬೇಕಾದ ದೇವರಾಗಲು ಮೂಲಕಾರಣರಾದಂತೆ ತೋರುತ್ತದೆ. ಭೂತಾದಿಗಳ ಕಾಟ,ಪೀಡೆ, ಉಪಟಳ ಮೊದಲಾದವುಗಳಲ್ಲಿ ನಂಬುಗೆಯುಳ್ಳ ರೋಗಾದಿಗಳಿಗೆ ಅಂಜಿದ ನಮ್ಮ ಹಳ್ಳಿಗರು, ನಂಬುಗೆಯ ಜೋಯಿಸನನ್ನು ಕೇಳಹೋಗುತ್ತಾರೆ. ಈ ಜನರ ಅಂಧಶ್ರದ್ಧೆಯನ್ನು ತಿಳಿದ ಜೋಯಿಸನು ರೋಗ, ಪೀಡಾದಿಗಳು ವಾಸಿಯಾಗಬೇಕಾದರೆ ಊರ ಹನುಮಂತದೇವರಿಗೆ ನಡೆದುಕೊಳ್ಳ ಬೇಕೆಂದು ಹೇಳುತ್ತಾನೆ. ಅವನ ಹೇಳುವಿಕೆಯನ್ನು ನಂಬಿ ಹಳ್ಳಿಗರು ಇಲ್ಲಿಯವರೆಗೂ ಆ ದೇವರಿಗೆ ನಡೆದುಕೊಳ್ಳುತ್ತಾ ಬಂದಿದ್ದಾರೆ. ಹಳ್ಳಿಗಳಲ್ಲಿ ಹನುಮಂತ ದೇವರು ರೋಗ ಪೀಡಾದಿಗಳನ್ನು ಕಳೆಯುವ ದೇವರಾಗಿದ್ದಾನೆ.

ಮಾಧ್ವ ಸಂಪ್ರದಾಯದವರು ಮಧ್ವಾಚಾರ್ಯರು ಹನುಮಂತನ (ವಾಯುದೇವನ) ಅವತಾರವೆಂದು ನಂಬುತ್ತಾರೆ. ಮಧ್ವಾಚಾರ್ಯರು ೧೨ನೆಯ ಶತಮಾನದ ಕೊನೆಯ ಭಾಗದಲ್ಲಿ ತಮ್ಮ ಮತವನ್ನು ಹಬ್ಬಿಸುತ್ತ ಬಂದರು. ಈ ಮಾಧ್ವ ಮತವು ಪ್ರಚಾರವಾದಂತೆ ಮಧ್ವಾಚಾರ್ಯರು ಹನುಮಂತನ ಅವತಾರವೆಂದು ನಂಬಿದ ಅನುಯಾಯಿಗಳು ಹನುಮಂತನನ್ನು ದೇವರೆಂದು ಗುಡಿಕಟ್ಟಿ ಪೂಜೆ ಮಾಡುತ್ತ ಬಂದಂತೆ ಕಾಣುತ್ತದೆ. ಈ ದೇವರ ಗುಡಿಗಳು ಮೊದಲು ಇದ್ದಿರಲ್ಲಿಕ್ಕಿಲ್ಲ. ಇದ್ದಿದ್ದರೆ ಒಂದಾದರೂ ಪ್ರಾಚೀನ ಗುಡಿಯು ಜನರ ನಿದರ್ಶನಕ್ಕೆ ಬರಬೇಕಾಗಿತ್ತು. ಇದರ ಮೇಲಿಂದ ವಸ್ತು ಸ್ಥಿತಿಯು ಹಾಗಿಲ್ಲವೆಂದು ತೋರುತ್ತದೆ. ಮಧ್ವಾಚಾರ್ಯರ ನಂತರ ಮಧ್ವ ಮತವು ಕರ್ನಾಟಕದಲ್ಲಿ ಬೆಳೆದು ಪ್ರಚಾರವಾದಂತೆ ಈ ಗುಡಿಗಳು ಅಸ್ತಿತ್ವದಲ್ಲಿ ಹೆಚ್ಚಾಗಿ ಬಂದಿರಬಹುದು. ಆದುದರಿಂದ ಹನುಮಂತ ದೇವರ ಗುಡಿಗಳು ೧೫ನೆಯ ಶತಮಾನಕ್ಕಿಂತ ಇತ್ತೀಚಿನವೆಂದು ಅಲ್ಲಿ ಉಪಯೋಗಿಸಿದ ಶಿಲ್ಪಕಲೆ ಮೊದಲಾದುವುಗಳಿಂದ ತಿಳಿದು ಬರುತ್ತದೆ. ಮಾಧ್ವ ಮತವು ಹಳ್ಳಿ ಹಳ್ಳಿಗೆ ಮುಟ್ಟಲು ಹಳ್ಳಿಗರು ಆ ಮತದ ಎರಡು ಮೂಲ ಗುರುತುಗಳನ್ನು ಮಾತ್ರ ತಮಗೆ ಬೇಕಾದಾಗ ಉಪಯೋಗಿಸುತ್ತ ಬಂದಿದ್ದಾರೆ. ಈ ಗುರುತುಗಳೆಂದರೆ ಒಂದು ಹರಿನಾಮ ಇನ್ನೊಂದು ಗೋಪಾಳ. ಹರಿಸೇವೆಗೆ

ಗೋಪಾಳವು ಒಕ್ಕಲಿಗನ ಕಣವನ್ನು ಸೇರಿತು. ಈಗಲೂ ಗೋಪಾಳವು ಬೆಳುವಲ(ಬೆಳವಲ ಪ್ರದೇಶ) ರೈತರ ಕಣದಲ್ಲಿ ಕಂಡುಬರುತ್ತದೆ. ಹನುಮಂತನಿಗೆ ಹರಿನಾಮದ ಗುರುತು ಹಣೆಯ ಮೇಲೆ ಈಗಲೂ ಉಳಿದಿದೆ. ಆದುದರಿಂದ ಹನುಮಂತ ದೇವರ ಗುಡಿಗಳು ಮಾಧ್ವಮತವು ಹಬ್ಬಿದ ಮೇಲೆ ಅನೇಕ ದಿನಗಳ ನಂತರ ಅಂದರೆ ಸುಮಾರು ೧೫ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿ ಬಂದಿರಬಹುದೆಂದು ಹೇಳಬಹುದು. ಮಾಧ್ವಮತವು ಹಬ್ಬದಿರುವ ಭಾಗಗಳಲ್ಲಿ ಈಗಲೂ ಈ ಗುಡಿಗಳ ಕಂಡುಬರುವುದಿಲ್ಲ (ಗದ್ದಗಿಮಠ:ಬಿಎಸ್:೧೯೬೯:೧೯-೨೦).

ಇಂದಿಗೂ ಚೆನ್ನದಾಸರಿಗೆ ಹನುಮಂತನೇ ಕುಲ ದೇವರು. ತಿರುಪತಿಯ ವೆಂಕಟ ರಮಣನ ಪ್ರತಿರೂಪವಾಗಿ ಹನುಮಂತನನ್ನು ಪೂಜಿಸುವ, ಶನಿವಾರ ನಡೆದುಕೊಳ್ಳುವ ಸಂಪ್ರದಾಯ ಈ ಸಮುದಾಯದವರಲ್ಲಿ ಮುಕ್ಕಾಗದಂತೆ ಉಳಿದುಕೊಂಡು ಬಂದಿದೆ.

ಒಟ್ಟಿನಲ್ಲಿ ಹರಿದಾಸರಿಗೆ ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸಿ ಉಳಿಸಿ ಬೆಳೆಸಬೇಕಾಗಿತ್ತು. ಹನ್ನೆರಡನೆಯ ಶತಮಾನದಲ್ಲಿ ಶಿವ ಶರಣರು ಬಹುಸಂಖ್ಯಾತ ದುಡಿವ ವರ್ಗ ಮತ್ತು ಕೆಳಜಾತಿಗಳನ್ನು ಧರ್ಮ ಪ್ರಸಾರಕ್ಕೆ ಬಳಸಿಕೊಂಡಂತೆ ಹರಿದಾಸರು ಈ ಜನಪದ ದಾಸ ಸಮುದಾಯಗಳನ್ನು ವೈಷ್ಣವ ದೀಕ್ಷೆ ನೀಡಿ ಬಳಸಿಕೊಂಡರು. ಹಾದಿ ಬೀದಿಗಳಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ತಾಳ, ತಂಬೂರಿ ಇಲ್ಲವೆ ದಂಡಿಗೆ ಹಿಡಿದುಕೊಂಡು ಮನೆ ಮನೆಗೆ ಹೋಗಿ ಮಧುರವಾಗಿ ಹಾಡಿ, ಭಿಕ್ಷೆ ಬೇಡುತ್ತಿದ್ದ ಅಲೆಮಾರಿ ದಾಸ ಸಮುದಾಯದ ವೇಷ ಭೂಷಣ ಇತ್ಯಾದಿಗಳನ್ನು ಮೆಚ್ಚಿ, ಅವರಿಗೆ ರಾಮ, ಹನುಮ, ಕೃಷ್ಣ ಹಾಗೂ ವಿಷ್ಣುವಿನ ಲೀಲೆಗಳನ್ನು ಹಾಡಿ ಅಭಿನಯಿಸಲು ಹರಿದೀಕ್ಷೆ ನೀಡಿದರು. ವಿಶೇಷವಾಗಿ ಹನುಮಂತನ ಮೂಲಕ ತಮ್ಮ ವೈದಿಕ ಧರ್ಮವನ್ನು ಅದರ ತತ್ವ ಸಿದ್ಧಾಂತಗಳನ್ನು ಪ್ರತಿಪಾದಿಸತೊಡಗಿದರು.

ಹೀಗಾಗಿ ಉತ್ತರ ಕರ್ನಾಟಕದಲ್ಲಿ ಹನುಮಂತನ ದೇವಾಲಯಗಳಿಲ್ಲದ ಊರುಗಳೇ ಇಲ್ಲವೇನೋ ಎಂಬಂತೆ ಹನುಮಂತನಿಗೆ ಪ್ರಾಮುಖ್ಯತೆ ನೀಡಿದರು. ಇದರ ಪರಿಣಾಮ ವಾಗಿ ಕದರಮಂಡಗಿ, ಹಂಸನೂರು, ತುಳಸಿಗೇರಿ, ಕಲ್ಲೋಳಿ, ಉಡುಪಿಯ ಸಾಯಿಬರಕಟ್ಟೆ ಮುಂತಾದ ಕಡೆಯ ಆಂಜನೇಯ ದೇವಸ್ಥಾನಗಳು ಚೆನ್ನದಾಸರ ಜಾತ್ರಾ ಕೇಂದ್ರಗಳಾದವು. ಚೆನ್ನದಾಸರ ಸಮುದಾಯದ ಕೆಲವರು ತಂಬೂರಿ, ದಂಡಿಗೆ ಹಿಡಿದು ಹಾಡುತ್ತ ಹೊರಟರೆ, ಇನ್ನು ಕೆಲವರು ಶ್ರೀಕೃಷ್ಣ ಪಾರಿಜಾತ, ದಶಾವತಾರದ ಲೀಲೆ, ರಾಧಾನಾಟಗಳ ಮೂಲಕ ದಾಸರಾಟದ ಮೇಳಗಳನ್ನು ಕಟ್ಟಿ ವೈದಿಕ ಧರ್ಮದ ಪ್ರಚಾರಕ್ಕೆ ಮುಂದಾದರು. ಹಂಪೆಯನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡಿದ್ದ ಈ ಹರಿದಾಸ ಮತಾನುಯಾಯಿ ಗಳು ವೈಷ್ಣವ ಧರ್ಮದ ಪ್ರಚಾರ ಮಾಡುತ್ತ ಭಿಕ್ಷೆ ಎತ್ತುತ್ತ ಚದುರದೊಡಗಿದರು. ಈ ಪಂಗಡಗಳೇ ಬರುಬರುತ್ತ ಚದುರುತ್ತ ಹೋದಂತೆ ಬೇರೆ ಬೇರೆ ಗುಂಪುಗಳಾಗಿ ವಾದ್ಯ ಪರಿಕರಗಳ ಮೂಲಕ ತಮ್ಮ ಹೆಸರುಗಳನ್ನು ಬೇರೆ ಬೇರೆಯಾಗಿಯೇ ಕರೆದು ಕೊಂಡರು. ಇನ್ನು ಕೆಲವರು ಹಂಪಿಯ ಪರಿಸದಲ್ಲೇ ಉಳಿದರು, ನಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಪತನದ ನಂತರ ಬೇರೆ ಬೇರೆ ಕಡೆಗೆ ಚದುರಿದರು.

**ಮತ್ತೇ ಚೆನ್ನದಾಸರಾದ ಹರಿದಾಸರು**

ಚೆನ್ನದಾಸರ ಸಮುದಾಯವು ಹರಿದಾಸ ದೀಕ್ಷೆ ಪಡೆದು ವೆಂಕಟರಮಣನ ಸ್ಮರಣೆ ಮಾಡುತ್ತ ಹಾಡುತ್ತ, ಆಟವಾಡುತ್ತ ವೈಷ್ಣವ ಧರ್ಮ ಪ್ರಚಾರದಲ್ಲಿ ಮುಂದುವರಿದು, ಹರಿದಾಸರಾಗಿ ತನ್ನ ಸಮುದಾಯದ ಘನತೆಯನ್ನು ಹೆಚ್ಚಿಸಿಕೊಂಡಿತು. ಇದೇ ಸಂದರ್ಭಕ್ಕೆ ಹಲವಾರು ಕೆಳಜಾತಿಗಳೂ ವೈಷ್ಣವ ದೀಕ್ಷೆಯನ್ನು ಪಡೆದು ಹರಿದಾಸ ಪಂಥಕ್ಕೆ ಸೇರ್ಪಡೆಗೊಂಡವು. "ಪುರಂದರ ದಾಸರಾದಿಯಾಗಿ ಇಡೀ ದಾಸಪಂಥ ಭಕ್ತಿ ಮಾರ್ಗದ ಪ್ರಚಾರಾರ್ಥವಾಗಿ ಜನಮನದಲ್ಲಿ ಬೇರೂರಿದ್ದ ವಿವಿಧ ಮಾಧ್ಯಮಗಳನ್ನು ಬಳಸಿಕೊಂಡು ಮಠದಲ್ಲಿ ಬೀದಿಯಲ್ಲಿ ಹಾಡಿ ಕುಣಿದರು (ದುರ್ಗಾದಾಸ:ಕೆ ಆರ್:೧೯೯೬:೩೦).

ಹರಿದಾಸ ಪಂಥ ವಿಜಯನಗರದ ಅರಸರ ಬೆಂಬಲ ಮತ್ತು ಪ್ರೋತ್ಸಾಹದಿಂದಾಗಿ ಬಹುಬೇಗ ಜನಮನ್ನಣೆ ಗಳಿಸಿತು. ಸಾಹಿತ್ಯವೂ ಶ್ರೀಮಂತವಾಯಿತು. ಆದರೆ ರಾಜಕೀಯ ವೈಪರೀತ್ಯಗಳಿಂದಾಗಿ ದೇಶದಲ್ಲಿ ಅಶಾಂತತೆ, ಯುದ್ಧಗಳ ಭೀತಿ ಜನರನ್ನು ಕಂಗೆಡಿಸಿ ಬಿಟ್ಟಿವು. ಇಂಥ ಗೊಂದಲಮಯ ಸನ್ನಿವೇಶದಲ್ಲೇ ೨೩.೦೧.೧೫೬೫ರ ರಕ್ಕಸ ತಂಗಡಿ (ತಾಳಿಕೋಟೆಯ) ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಮಣ್ಣುಗೂಡಿತು (ಶ್ರೀಕಂಠಶಾಸ್ತ್ರಿ:ಎಸ್:೧೯೭೫:೧೪೧).

ವಿಜಯನಗರದ ಉನ್ನತಿಯ ಕಾಲದಲ್ಲಿ ಬೆಳೆದು ಬೆಳಗಿದ ಹರಿದಾಸ ಪಂಥ ವಿಜಯನಗರದ ಅವನತಿಯೊಂದಿಗೆ ಹರಿದು ಹಂಚಿಹೋಯಿತು. ರಾಜಾಶ್ರಯದಲ್ಲಿದ್ದ ಎಷ್ಟೋ ಮಂದಿ ವಿದ್ವಾಂಸರು, ಕಲಾವಿದರು ದಕ್ಷಿಣ ಭಾರತದ ತಂಜಾವೂರಿನ ಸಂಸ್ಥಾನದಲ್ಲಿ ಆಶ್ರಯ ಪಡೆದರು. ತಂಜಾವೂರಿನ ನಾಯಕರಲ್ಲಿ ರಘುನಾಥ ನಾಯಕನ ಆಳ್ವಿಕೆ (೧೬೦೦- ೧೬೩೪) ಸಮರ್ಥವಾಗಿದ್ದಿತು. ಇವರ ಕಾಲದಲ್ಲಿ ತಂಜಾವೂರು ಸಾಹಿತ್ಯ, ಸಂಗೀತ, ಧರ್ಮ, ಕಲೆಗಳಿಗೆಲ್ಲ ನೆಲೆಯಾಯಿತು (ರಾಮಚಂದ್ರರಾವ್: ಸಾ ಕೃ:೨೦೦೩:೨೪೮).

ಇಂಥ ರಾಜಕೀಯ ವಿಷಮ ಸಂದರ್ಭದಲ್ಲಿ ವೈದಿಕ ಧರ್ಮ ಜಡವಾಗತೊಡಗಿತು. ಧಾರ್ಮಿಕ ಕೇಂದ್ರಗಳು ಮಠೀಯ ಸಂಕುಚಿತದಲ್ಲಿ ನರಳ ತೊಡಗಿದವು. ಸಾಮಾಜಿಕ ಬದುಕಿನಲ್ಲಿ ಜಾತೀಯತೆಯ ಕರಾಳತೆ ಕಾಣಿಸತೊಡಗಿತು. ಹರಿದಾಸ ಪಂಥವೂ ಇದರಿಂದ ಹೊರತಾಗಲಿಲ್ಲ.

ವ್ಯಾಸರಾಯಸ್ವಾಮಿಗಳ ದಾಸಕೂಟ ದಿಟವಾಗಿ ಒಂದು ಕ್ರಾಂತಿಯೇ, ಒಂದು ಆಂದೋಲನವೇ. ಪುರಂದರದಾಸ, ಕನಕದಾಸ, ವಾದಿರಾಜರಂಥ ಪ್ರತಿಭಾವಂತರು, ಪ್ರಭಾವಶಾಲಿಗಳು ಮುಂದೆ ದಾಸಕೂಟದಲ್ಲಿ ಕಾಣಿಸಿಕೊಳ್ಳಲಿಲ್ಲವಾದ ಕಾರಣ ಈ ಕ್ರಾಂತಿಯ ಪ್ರಭಾವ ಬೇರೂರಲಿಲ್ಲ, ಹರಡಲಿಲ್ಲ. ವೈದಿಕ ನಿಷ್ಠೆಯಿದ್ದ ಮೇಲು ಜಾತಿಗಳ ಜನರ ಕೈ ಬಲಗೊಂಡಿದ್ದರಿಂದ ದಾಸಕೂಟ ಗೌರವದಿಂದ ಉಳಿಯುವುದೂ ಕಷ್ಟವೆನಿಸಿತು. ಮಾಧ್ವ ಮಠಗಳು ತಮ್ಮ ಪಂಗಡಕ್ಕೆ ಸೇರಿದ ಹರಿದಾಸರನ್ನು ಹಂಗಿಸಿ, ಭಂಗಿಸಿ ಮೂಲೆಗೊತ್ತಿದುವು. ವ್ಯಾಸರಾಯಸ್ವಾಮಿಗಳಿಗಿದ್ದ ಧೈರ್ಯ, ಔದಾರ್ಯ,

ಉದಾತ್ತವಾದ ಮಾನವೀಯತೆ, ಲೋಕೋತ್ತರವಾದ ದೃಷ್ಟಿ ಮುಂದೆ ಯಾವ ಮಠಾಧಿಪತಿಗಳಿಗೂ ಬರಲಿಲ್ಲ. ಸಣ್ಣ ಜನರು ದೊಡ್ಡ ಪೀಠಗಳಲ್ಲಿ ಕುಳಿತು ಹಠ ಹಿಡಿದು, ಬಲಗೊಂಡು, ಜಾಲಿಯ ಮರದಂತೆ ದುರ್ಜನರನ್ನು ಸುತ್ತ ಸೇರಿಸಿಕೊಂಡು, ನೇರವಾಗಿ ನಡೆಯುವವರನ್ನು ಕಾಡತೊಡಗಿದಾಗ ದಾಸಕೂಟ ಕಳೆಗುಂದಿತು. ಮಠಗಳ ಮತ್ತು ಮಡಿವಂತರ ಹಿಡಿತ ಬಿಗಿಯಾಗಿ ದಾಸರಿಗೆ ಉಳಿಗಾಲವಿಲ್ಲದಾಗ, ದಾಸರೂ ಅಂಜಿ ಮಠದ ಧೋರಣೆಯನ್ನೇ ಹಿಡಿದರು. ಬರುಬರುತ್ತ ದಾಸಕೂಟದಲ್ಲಿ ಕೇವಲ ಮಾಧ್ವ ಪ್ರಕ್ರಿಯೆಗಳ ತೂರಾಟ, ಮಡಿವಂತಿಕೆಯ ಹಾರಾಟ ಇಷ್ಟೇ ಉಳಿದುಕೊಂಡಿದ್ದರಿಂದ ಸಮಾಜದಲ್ಲಿ ಅದಕ್ಕೆ ಒದಗಬಹುದಾಗಿದ್ದ ಸ್ಥಾನ ತಪ್ಪಿತು.

"ವ್ಯಾಸರಾಯಸ್ವಾಮಿಗಳಿಗೆ ಸ್ಫೂರ್ತಿಯ ಸೆಲೆಯಾಗಿದ್ದ ಶ್ರೀಪಾದರಾಜರು ರಚಿಸಿರುವ ಕೃತಿ ದಾಸಕೂಟದ ಮುಖ್ಯ ಪ್ರವೃತ್ತಿಯನ್ನು ಹೇಳುವುದಲ್ಲದೆ ಅದಕ್ಕೆ ವಿರುದ್ಧವಾದ ಧೋರಣೆಯನ್ನೂ ಬಣ್ಣಿಸುತ್ತದೆ. ಇವೆರಡರ ಸೆಣಸಾಟದಲ್ಲಿ ಕಡೆಗೆ ದಾಸಕೂಟದ ಮುಖ್ಯ ಪ್ರವೃತ್ತಿಯೇ ಸೋತಿತು; ಮಡಿವಂತಿಕೆಯ ಬೂಟಕತನ ಗೆದ್ದಿತು. ಶ್ರೀಪಾದರಾಜರ ಕನಸು, ವ್ಯಾಸರಾಯಸ್ವಾಮಿಗಳ ಸಾಹಸ, ಪುರಂದರದಾಸರ ಶ್ರಮ ಎಲ್ಲವೂ ನಿಷ್ಫಲವಾದವು. ಇದೊಂದು ದುರ್ದೈವ (ಅದೇ:೩೦೮). ಹೀಗೆಂದು ಬಣ್ಣಿಸಲಾಗಿದೆ. ವಿಶೇಷವಾಗಿ ಧಾರ್ಮಿಕ ಮತ್ತು ಸಾಮಾಜಿಕ ಚಳುವಳಿಗಳು ಹೀಗೆಯೇ ಅಂತ್ಯ ಕಾಣುತ್ತವೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ ಅಮೀಬಾ ರೀತಿಯದು. ಅದು ಜನಪರ ಎಂಬುದನ್ನು ತನ್ನೊಡಲೊಳಗೆ ನುಂಗಿ ಹಾಕುತ್ತದೆ. ಈ ಹರಿದಾಸ ಪಂಥದ ಅವನತಿಯ ಸಾಮಾಜಿಕ ಹಿನ್ನೆಲೆ ಮತ್ತು ಶರಣ ಚಳುವಳಿಯ ಅವನತಿಯ ಸಾಮಾಜಿಕ ಹಿನ್ನೆಲೆ ಕೂಡ ಒಂದೇ ಆಗಿರುವುದು ಒಡೆದು ಕಾಣಿಸುತ್ತದೆ.

ಸಮಾಜದ ಅತ್ಯಂತ ಕೆಳಸ್ತರಗಳ ಜಾತಿ ಪಂಗಡಗಳಿಂದ, ವಿಶಿಷ್ಟ ಅನುಭವಗಳಿಂದ, ಅನುಭವ ಮಂಟಪವೆಂಬ ಜ್ಞಾನ ದಾಸೋಹದ ವಿಶ್ವವೇದಿಕೆಯಲ್ಲಿ ಅವಕಾಶ ಪಡೆದ ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಾದರ ಚೆನ್ನಯ್ಯ, ಹಡಪದ ಅಪ್ಪಣ್ಣ, ಸಮಗಾರ ಹರಳಯ್ಯ, ಮೇದಾರ ಕೇತಯ್ಯ ಮುಂತಾದ ನೂರಾರು ವಚನಕಾರರ ಹೃದಯಗಳು ಮುರುಟಿ ಭ್ರಮನಿರಸನವಾಗಿರಲೂಬಹುದು. ವಚನ ಸಾಹಿತ್ಯವೆಂಬ ಜ್ಞಾನಭಂಡಾರವೇನೋ ವಿಶ್ವಕಾಣಿಕೆಯಾಗಿ ಉಳಿಯಿತು. ಸಾಹಿತ್ಯ ಕ್ರಾಂತಿ ಯಶಸ್ವಿಯಾಯಿತು... ಆದೊಡೆ ನುಡಿದಂತೆ ನಡೆಯದಿರ್ದಡೆ... ಯಾವ ಆಮೂಲಾಗ್ರ ಬದಲಾವಣೆಯನ್ನು ಕಲ್ಯಾಣಜ್ಯೋತಿಯಾಗಿ ಬೆಳಗಿಸಿದ್ದರೋ ಆ ಜ್ಯೋತೀಯ ಬೆಳಕು ವಿಶ್ವದ ತಮವನ್ನು ಕಳೆಯಲು ಸಾಧ್ಯವಾಗದ ವ್ಯಥೆ ಶರಣರನ್ನು ಕಾಡಿತು.

ಸಾಗರದಷ್ಟು ವಿಶಾಲವಾಗಿ, ಗಾಂಭೀರ್ಯವಾಗಿ ಹರಡಬೇಕಾಗಿದ್ದ ವೀರಶೈವ ಧರ್ಮ ಮತ್ತೆ ಸೀಮಿತ ಚೌಕಟ್ಟಿನಲ್ಲಿ ಉಳಿಯಬೇಕಾಯಿತು. ಜಾತಿಗಳಲ್ಲಿಯ ಮೇಲು ಕೀಳೆಂಬ ಗೋಡೆ ಮತ್ತೇ ನಿರ್ಮಾಣಗೊಂಡವು (ಜೇವರ್ಗಿ, ಮಲ್ಲಿಕಾರ್ಜುನ: ೨೦೦೩: ೩೩-೪). ಕರ್ನಾಟಕದ ಎರಡು ಜನಪರ ಚಳುವಳಿಗಳಾದ ಶರಣ ಮತ್ತು ಹರಿದಾಸ ಚಳುವಳಿಗಳು ದುರಂತದಲ್ಲಿ ಕೊನೆಗೊಂಡವು.

ಹರಿದಾಸ ಪಂಥ, ವೈದಿಕ ಮತದ ಕರ್ಮಠತೆಯಿಂದ ದಲಿತ ಸಮುದಾಯಗಳನ್ನು ತನ್ನಲ್ಲಿ ಉಳಿಸಿಕೊಳ್ಳಲಾಗಲಿಲ್ಲ. ಹರಿದಾಸರಾಗಿ ಪರಿವರ್ತಿತಗೊಂಡ ಬಹುತೇಕ ಸಮುದಾಯಗಳು ಮತ್ತೇ ತಮ್ಮ ಮೂಲ ಸಮುದಾಯದ ಹೆಸರಲ್ಲೇ ಗುರುತಿಸಿ ಕೊಳ್ಳತೊಡಗಿದವು. ಜೊತೆಯಲ್ಲಿ ರಾಜಾಶ್ರಯವೂ ಎರವಾಗಿ ಮುನ್ನಿನ ಗತಿಯೇ ಅವುಗಳಿಗೊದಗಿತು. ಅವುಗಳಲ್ಲಿ ಚೆನ್ನದಾಸರ ಸಮುದಾಯವೂ ಒಂದಾಗಿದೆ. ವೈಷ್ಣವ ಮತದ ಪ್ರಭಾವದಿಂದ ಹರಿದಾಸರಾಗಿ ಪರಿವರ್ತಿತವಾದ ಚೆನ್ನದಾಸರ ಸಮುದಾಯ ಮತ್ತೇ ಹಿಂದಿನ ಸಾಮಾಜಿಕ ಅಸಮಾನತೆಯ ಸಂರಚನೆಯಲ್ಲಿ ಸಿಲುಕಿಕೊಂಡಿತು.

# ೨

# ಮೂಲ ಮತ್ತು ಪ್ರಸಾರ

## ಮೂಲ ಸ್ಥಾನ, ವಲಸೆ ಮಾರ್ಗ

ಚೆನ್ನದಾಸರ ಸಮುದಾಯವು ಆಂಧ್ರ ಮೂಲದ್ದೆಂಬುದು ನಿರ್ವಿವಾದ. ಕರ್ನಾಟಕದ ಬಹುಪಾಲು ಚೆನ್ನದಾಸರು ತೆಲುಗು ಭಾಷಿಕರಾಗಿದ್ದಾರೆ. ಕನ್ನಡ ಮನೆ ಮಾತಿರುವ ಚೆನ್ನದಾಸರನ್ನು ಕೇಳಿದಾಗ ನಮ್ಮ ಹಿರಿಯರು ಮೊದಲು ತೆಲುಗು ಮಾತನಾಡುತ್ತಿದ್ದರು. ಈಗ ನಾವೆಲ್ಲ ಮರೆತಿದ್ದೇವೆ ಎನ್ನುತ್ತಾ, ತಾವು ಆಂಧ್ರ ಮೂಲದವರೆಂಬುದನ್ನು ಹೇಳುತ್ತಾರೆ. ಕರ್ನಾಟಕದ ವಿವಿಧ ಜಿಲ್ಲೆಗಳಿಗೆ ಕ್ಷೇತ್ರಕಾರ್ಯಕ್ಕೆ ಹೋದಾಗ ಮೂಲ ಸ್ಥಳ ಮತ್ತು ವಲಸೆ ಬಂದಿರುವುದರ ಕುರಿತು ಕೇಳಲಾದ ಪ್ರಶ್ನೆಗಳಿಗೆ ಕೆಲವರು ಹೀಗೆ ಹೇಳಿರುವರು.

ದಾವಣಗೆರೆ ತಾಲ್ಲೂಕಿನ ಜರಿಕಟ್ಟೆ ಗ್ರಾಮದ ದುರುಗೋಜಪ್ಪ ಹನುಮಂತಪ್ಪ ಪೂಜಾರಿ (೫೫) ಅವರು ತಮ್ಮದು ಆಂಧ್ರದ ಹನುಮಪಲ್ಲಿ ಮೂಲ. ಕನ್ನಡ ನಾಡಿನ ರಾಮಪುರ, ಉಚ್ಚಂಗಿ ದುರ್ಗದ ಮೂಲಕ ಕರ್ನಾಟಕಕ್ಕೆ ಬಂದಿರುವುದಾಗಿ ಹೇಳುವರು.

ರಾಯಚೂರು ಜಿಲ್ಲೆಯ ಕಾರಟಗಿಯ ಮಾರೆಪ್ಪ ಚಿನ್ನಪ್ಪ ಕುಂದ್ರೋಳು (೬೦) ಅವರದು ಆಂಧ್ರದ ಗದ್ವಾಲ್ ಮೂಲದ ಮನೆತನ. ಹುಲಿ ಹೈದರ್‌ನಿಂದ ಕಾರಟಗಿಗೆ ಬಂದಿರುವುದಾಗಿ ಹೇಳುವರು.

ಬಾದಾಮಿಯ ತುಕಾರಾಂ ಮುತ್ತಿನಗೆರೆ (೭೧) ಅವರು ಆಂಧ್ರದ ಕರ್ನೂಲ ಪ್ರದೇಶದಿಂದ ಲಾರ್ಡ್ ಲಿಟ್ಟನ್ ಕಾಲದಲ್ಲಿ ಬರಗಾಲ ಬಿದ್ದಾಗ ಕೂಳಿಗಾಗಿ ಈ ಕಡೆಗೆ ಬಂದಿರುವುದಾಗಿ ಹೇಳುವರು.

ಬಾಗಲಕೋಟೆ ಜಿಲ್ಲೆಯ ಬದಾಮಿ ತಾಲೂಕಿನ ಹಂಸನೂರು ಗ್ರಾಮದ ಗ್ರಾಮ ಪಂಚಾಯತಿಯ ಅಧ್ಯಕ್ಷೆ ಶ್ರೀಮತಿ ರೇಣುಕಾ ಚಿಮ್ಮಲ (೩೬) ಅವರು ತಮ್ಮ ಪೂರ್ವಜರು ಆಂಧ್ರ ಮೂಲವಾದರೂ ಎಲ್ಲಿಂದ ಬಂದರೆಂಬುದು ತಿಳಿದಿಲ್ಲ, ತಮ್ಮ ಹಿರಿಯರು ಹುಬ್ಬಳ್ಳಿಯ ಗಿರಿಯಾಲದಿಂದ ಹಂಸನೂರಿಗೆ ಬಂದಿರುವುದಾಗಿ ಹೇಳುವರು.

ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚವಡಿಹಾಳ ಗ್ರಾಮದ ಶಾಂತಪ್ಪ ಪಂಚಪ್ಪ ದಶವಂತ (೬೧)ಅವರೂ ಕೋಲಾರ ಕಡೆಯ ಆಂಧ್ರ ಪ್ರದೇಶದಿಂದ ಬಂದಿರುವುದಾಗಿ ತಮ್ಮ ಹಿರಿಯರು ಹೇಳಿರುವುದಾಗಿ ಹೇಳಿದರು.

ಧಾರವಾಡದ ಕೃಷ್ಣಪ್ಪ ಗುಳೇದಗುಡ್ಡ (೬೩) ಅವರು ಆಂಧ್ರದಿಂದ ಸೈನ್ಯಗಳ ಜೊತೆಗೆ ಮನರಂಜನೆ ನೀಡುತ್ತ ಬಂದಿರುವುದಾಗಿ ಹೇಳುವರು.

ಮಂಗಳೂರಿನ ಬಾಸ್ಕರ್‌ದಾಸ್ ಎಕ್ಕಾರು (೫೨) ಅವರು ತಮ್ಮ ಹಿರಿಯರು ಬೆಳಗಾವಿಯಿಂದ ಹಾವೇರಿ, ಉತ್ತರ ಕನ್ನಡ ಜಿಲ್ಲೆಯ ಮೂಲಕ ಈ ಜಿಲ್ಲೆಗೆ ಬಂದಿರುವರೆಂದೂ, ಯಾವುದೋ ತಪ್ಪು ಮಾಡಿದ್ದಕ್ಕಾಗಿ ತಪ್ಪಿಸಿಕೊಂಡು ಬಂದಿರುವರೆಂದು ಹಿರಿಯರು ಹೇಳುತ್ತಿದ್ದರೆಂದು ಹೇಳುವರು.

ಒಟ್ಟಿನಲ್ಲಿ ಆಂಧ್ರ ಮೂಲದವರೆಂಬುದು ಈ ಹೇಳಿಕೆಗಳಿಂದ ಖಚಿತವಾಗುತ್ತದೆಯಾದರೆ, ವಲಸೆಯ ಅವಧಿ ಶ್ರೀರಾಮಾನುಜಾಚಾರ್ಯರ ಕಾಲದಿಂದ ಹಿಡಿದು ಬ್ರಿಟಿಷ್ ಆಡಳಿತದವರೆಗೂ ಹರಡಿಕೊಂಡಿರುವ ಸಾಧ್ಯತೆಯಿದೆ.

ಆದರೆ ಆಂಧ್ರದ ಯಾವ ಮೂಲದಿಂದ ಯಾವಾಗ ಈ ಸಮುದಾಯ ಬಂತೆಂಬುದಕ್ಕೆ ನಿರ್ದಿಷ್ಟವಾದ ದಾಖಲೆಗಳಿಲ್ಲ. ಆದರೆ, ಬೆಳಗಾವಿ ಜಿಲ್ಲೆಯ ಚೆನ್ನದಾಸರು ಆಂಧ್ರದ ಮದನಪಲ್ಲಿಯಿಂದ ಕ್ರಿ ಶ ೧೫೧೯ ರಲ್ಲಿ ಬಂದಿರುವರೆಂಬುದಕ್ಕೆ ಅಲ್ಲಿನ ಹೆಳವರ ಹೊತ್ತಿಗೆಗಳಲ್ಲಿ ದಾಖಲೆ ಸಿಕ್ಕುತ್ತದೆ(ಅನುಬಂಧ: ಹೆಳವರ ದಾಖಲೆ).

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕಂಡುಬರುವ ಈ ಸಮುದಾಯ ಒಂದೇ ಬಾರಿಗೆ ಆಂಧ್ರದಿಂದ ವಲಸೆಬಂದಿಲ್ಲ. ಸಿಗುವ ಕೆಲವು ಮಾಹಿತಿಗಳನ್ನಾಧರಿಸಿ ಕೆಲವು ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ.

ಹೆಳವರಲ್ಲಿ ಸಿಕ್ಕಿರುವ ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಅರ್ಜುನವಾಡ ಗ್ರಾಮದ ಭೀಮಪ್ಪ ಹೊನ್ನಹುಲ್ಲೆನ್ನವರ್ ಎನ್ನುವವರ ವಂಶಾವಳಿಯಲ್ಲಿ ಕ್ರಿ ಶ ೧೫೧೯ ರಲ್ಲಿ ಆ ಭಾಗದಲ್ಲಿ ಬಂದರೆನ್ನಲಾಗಿದೆ. ಕುಲ ಹೊನ್ನಹುಲ್ಲೆನ್ನವರೆಂದೂ ಜಾತಿ ಚಿನ್ನದಾಸರೆಂದೂ ಈ ಗ್ರಾಮದಲ್ಲಿ ೧೫೧೯ರಲ್ಲಿ ನೆಲೆನಿಂತರೆಂದೂ ದಾಖಲಿಸಲಾಗಿದೆ(ಇದರ ಮೂಲ ಕಂಚಿನ ಪತ್ರದಲ್ಲಿತ್ತೆಂದು ಹೇಳಲಾಗಿದೆ).(ಪ್ರಸ್ತುತ ೨೦೦೭ ರ ಸಮೀಕ್ಷೆಯ ಪ್ರಕಾರ ಹೊನ್ನಹುಲ್ಲೆನ್ನವರ್ ಬೆಡಗಿನವರನ್ನು ಹುಲ್ಲೆನ್ನವರ್ /ಹುಲೋಳ್ಳು ಎಂದು ದಾಖಲಿಸಲಾಗಿದೆ. ಕರ್ನಾಟಕದಲ್ಲಿಯ ಇವರ ಕುಟುಂಬಗಳು ೨೦೦). ಜಾತಿ 'ಚಿನ್ನದಾಸರ' ಎನ್ನುವಂಥದ್ದು 'ಚೆನ್ನದಾಸರ' ಎನ್ನುವುದೇ ಆಗಿದೆ. ಈ 'ಚೆನ್ನದಾಸರ' ಎನ್ನುವಂಥಾದ್ದು ಚೆನ್ನಯ್ಯದಾಸು ಅಥವಾ ಚೆನ್ನದಾಸರಿಯಿಂದ ಬಂದಿರುವಂಥದ್ದು ಚೆನ್ನದಾಸರಿ ವೈಷ್ಣವ ಪಂಥದವರೆಂಬುದೂ ಅವನ ಕಥೆಯಲ್ಲಿದೆ. ಅಂದರೆ ಈ ಮೇಲಿನ ಬೆಳಗಾವಿ ಜಿಲ್ಲೆಯ 'ಭೀಮಪ್ಪ' ಇಲ್ಲಿಗೆ ೧೬ನೇ ಶತಮಾನದಲ್ಲಿ ಬಂದಿದ್ದಾರೆಂದರೆ, ಅದಕ್ಕಿಂತ ಮುಂಚೆಯೇ ವೈಷ್ಣವ ಪಂಥಕ್ಕೆ ಸೇರ್ಪಡೆಯಾಗಿದ್ದಾರೆ ಎಂದಂತಾಯಿತು. ಹಾಗಾದರೆ ಈ ಸಮುದಾಯ ವಿಜಯನಗರ ಕಾಲದ ಹರಿದಾಸ ಪಂಥಕ್ಕಿಂತ ಮೊದಲೇ ವೈಷ್ಣವ ಪಂಥಕ್ಕೆ ಸೇರಿದ್ದಾರೆ ಎನ್ನುವ ಹಾಗಾಗುತ್ತದೆ. ಇದು ರಾಮಾನುಜಾಚಾರ್ಯರ, ಮಧ್ವಚಾರ್ಯರ ಕಾಲದಲ್ಲಿ ನಡೆದಿರುವ ಸಂಗತಿಯನ್ನು ತಿಳಿಸುತ್ತದೆ. ಆದರೆ ಅಂದಿನ ವೈಷ್ಣವ ಧರ್ಮಕ್ಕೆ ಸೇರಿದ ಕೆಳಜಾತಿಗಳು ವೈಷ್ಣವ ಧರ್ಮೀಯರಾಗಲಿಲ್ಲವೆಂಬುದು ಅಷ್ಟೇ ಸತ್ಯವಾದುದಾಗಿದೆ.

"ರಾಮಾನುಜಾಚಾರ್ಯರು ಈ ಧರ್ಮದ ತಿರುಳನ್ನು ಎಲ್ಲರಿಗೂ ತಿಳಿಯುವಂತೆ ಸಾರ್ವಜನಿಕವಾಗಿ ಪ್ರಕಟಿಸುವುದರ ಮೂಲಕ ಸಾಮಾನ್ಯ ಜನರನ್ನು ಈ ಧರ್ಮದತ್ತ ಸೆಳೆದು ಭಕ್ತರನ್ನಾಗಿ, ಅನುಯಾಯಿಗಳನ್ನಾಗಿ ಮಾಡಿದರೇ ವಿನಃ ಮತೀಯ ಆಚರಣೆಯ ವಿಧಿ ವಿಧಾನಗಳಲ್ಲಿ ನೆಲೆಗೊಳಿಸಲಿಲ್ಲ. ಆದ್ದರಿಂದ ಅನ್ಯಮತೀಯರು ಶ್ರೀವೈಷ್ಣವ ಮತಾನುಯಾಯಿಗಳಾದರೇ ವಿನಃ ಶ್ರೀವೈಷ್ಣವ ಮತೀಯರಾಗಲಿಲ್ಲ (ಗೀತಾಚಾರ್ಯ, ನಾ: ೨೦೦೪:xxx). ಹೀಗಾಗಿ ಬಹುಶಃ ರಾಮಾನುಜರ ವೈಷ್ಣವ ಮತ ಆ ಕಾಲಕ್ಕೆ ದೊಡ್ಡ ಬದಲಾವಣೆಯನ್ನೇನೂ ಮಾಡದಿದ್ದರೂ ಕೆಳಜಾತಿ ಸಮುದಾಯಗಳಿಗೆ ಸಾಮಾಜಿಕ ಮಾನ್ಯತೆಯನ್ನು ನೀಡಲು ಮುಂದಾಗಿತ್ತೆನ್ನುವುದು ಗಮನಾರ್ಹವಾದುದು.

ಇದರಿಂದ ತಿಳಿದು ಬರುವ ಒಂದು ಸಂಗತಿಯೆಂದರೆ ಆಂಧ್ರದ ಮದನಪಲ್ಲಿ ಭಾಗದಲ್ಲಿ ೧೬ನೇ ಶತಮಾನಕ್ಕಿಂತ ಮುಂಚೆಯೇ ಈ ಸಮುದಾಯ ವೈಷ್ಣವ ಪಂಥಕ್ಕೆ ಸೇರ್ಪಡೆಗೊಂಡಿತ್ತು. ಇಲ್ಲವೆ ವೈಷ್ಣವ ಮತಾನುಯಾಯಿಗಳಾಗಿದ್ದರು. ಅಲ್ಲಿನ ಚೆನ್ನದಾಸರ ಒಂದು ಗುಂಪು ೧೬ನೇ ಶತಮಾನದ ಪ್ರಾರಂಭದಲ್ಲಿ ಕರ್ನಾಟಕದ ಉತ್ತರ ಭಾಗಕ್ಕೆ ಬಂದಿತ್ತು ಎಂದಹಾಗಾಯಿತು.

'ಮಾಲದಾಸರಿ' ಎನ್ನುವ ವ್ಯಕ್ತಿ ಕೂಡ ಇದೇ ರಾಮಾನುಜಾಚಾರ್ಯರ ಕಾಲದಲ್ಲೇ ವೈಷ್ಣವ ಭಕ್ತಿ ಪಂತಕ್ಕೆ ಸೇರಿದ್ದನೆನ್ನುವ ಸಂಗತಿ ಕೂಡ ಇದನ್ನೇ ಸಮರ್ಥಿಸುವಂತಿದೆ. ಅಂದರೆ ಈಗಿನ ಚೆನ್ನದಾಸರ ಸಮುದಾಯ ೧೦ ಅಥವಾ ೧೧ನೇ ಶತಮಾನದ ರಾಮಾನುಜಾಚಾರ್ಯರ ಮೊದಲ ವೈಷ್ಣವ ಭಕ್ತಿ ಚಳುವಳಿಯ ಸಂದರ್ಭದಲ್ಲಿ ಹರಿದಾಸರಾಗಿದ್ದರು ಎನ್ನಬಹುದು. ಈ ಕಾಲದಲ್ಲಿಯೇ ಕೆಲವರು ಕರ್ನಾಟಕಕ್ಕೆ ವಲಸೆ ಬಂದಿರುವ ಸಂಭವವಿದೆ. ಏಕೆಂದರೆ ರಾಮಾನುಜಾಚಾರ್ಯರು ಕರ್ನಾಟಕಕ್ಕೂ ಬಂದು ವೈಷ್ಣವ ಮತದ ಪ್ರಚಾರಕಾರ್ಯ ಕೈಗೊಂಡಿರುವುದರಿಂದ ಈ ಊಹೆ ಮಾಡಬಹುದಾಗಿದೆ.

ಇನ್ನು ಪ್ರಮುಖ ಎರಡನೆಯ ವಲಸೆಯ ಸಂದರ್ಭ ಮತ್ತು ಸ್ಥಳ ೧೬ನೆಯ ಶತಮಾನದ ವಿಜಯನಗರ ಸಾಮ್ರಾಜ್ಯವೇ ಆಗಿದೆ. ಕ್ರಿ ಶ ೧೫೬೫ರಲ್ಲಿ ಬಹುಮನಿ ಸುಲ್ತಾನರು ತಾಳಿಕೋಟೆಯ ಯುದ್ಧದಲ್ಲಿ ವಿಜಯನಗರದ ಸೈನ್ಯವನ್ನು ಸೋಲಿಸಿ ಸಾಮ್ರಾಜ್ಯವನ್ನು ಕೈವಶ ಮಾಡಿಕೊಂಡರು. ಒಂದು ಅಂದಾಜಿನಂತೆ ಈ ಯುದ್ಧದಲ್ಲಿ ಸುಮಾರು ೧೦ ಲಕ್ಷ ಜನ ಕೊಲ್ಲಲ್ಪಟ್ಟರು ಮತ್ತು ಅಪಾರವಾದ ಹಣ, ನಗ, ದಾಸದಾಸಿಯರು ಮುಸ್ಲಿಮರಿಗೆ ಸೆರೆಸಿಕ್ಕಿದರು. ಉನ್ನತ ಕಟ್ಟಡಗಳು ಮತ್ತು ದೇವಾಲಯಗಳನ್ನು ನೆಲಸಮ ಮಾಡಲಾಯಿತು (ಶ್ರೀಕಂಠಶಾಸ್ತ್ರಿ,ಎಸ್:೧೯೭೫:೧೪೬). ಹೀಗೆ ವೈಭವಯುತ ವಿಜಯನಗರ ಸಾಮ್ರಾಜ್ಯ ಧ್ವಂಸಗೊಂಡಾಗ ಸಾಮ್ರಾಜ್ಯದ ಪರಿಸರದಲ್ಲಿ ಅಪಾರವಾಗಿ ನೆಲೆನಿಂತ ಕವಿಗಳು, ಕಲಾವಿದರು, ನರ್ತಕರು, ನಟರು, ದೇವರ ಸೇವೆಗಿದ್ದವರು ಆಶ್ರಯ ಹುಡುಕಿ ಬೇರೆ ಕಡೆಗೆ ವಲಸೆ ನಡೆದರು. ರಾಜಾಶ್ರಯ ದಲ್ಲಿದ್ದವರು. ತಂಜಾವೂರಿನ ರಘುನಾಥ ನಾಯಕನಲ್ಲಿ ಹಾಗೂ ಸುರಪುರ ಸಂಸ್ಥಾನದಲ್ಲಿ

ಆಶ್ರಯ ಪಡೆದರು. ವಿಜಯನಗರದ ಸಾಮ್ರಾಜ್ಯದ ಅವನತಿಯ ಅನಂತರ ಈ ಪಂಡಿತರು, ನಾಟ್ಯಾಚಾರ್ಯರು ತಂಜಾವೂರಿನ ನಾಯಕ ಅರಸರ ಆಶ್ರಯವನ್ನು ಪಡೆದರು. ಕ್ರಿ ಶ ೧೫೭೧-೧೬೧೪ರಲ್ಲಿ ಆಳುತ್ತಿದ್ದ ಅಚ್ಯುತನಾಯಕನೆಂಬುವನು ಸುಮಾರು ೫೦೦ ಸಂಸಾರಗಳಿಗೆ ಮನೆಗಳನ್ನೂ ಜಮೀನನ್ನೂ ಒದಗಿಸಿದನು. ಈ ಅಗ್ರಹಾರವು ಅಚ್ಯುತಪುರಂ ಎಂಬ ಹೆಸರನ್ನು ಪಡೆಯಿತು. ಇದನ್ನೇ ಈಗ ಮೇಲತ್ತೂರು ಎಂದು ಕರೆಯುತ್ತಾರೆ (ಕೃಷ್ಣರಾಯ:ಅ ನ:೧೯೬೪:೨೧೭). ಹಂಪಿಯಲ್ಲಿನ ಹರಿದಾಸ ಕೇಂದ್ರವು ಮಂತ್ರಾಲಯದ ನೆರೆಯಲ್ಲಿ ಮಳಖೇಡ, ಮಾನ್ವಿ, ಕಾಖಂಡಕಿ, ಲಿಂಗಸುಗೂರು ಮೊದಲಾದ ಊರುಗಳಲ್ಲಿ ನಿಂತಿತು (ರಾಮಚಂದ್ರರಾವ್, ಸಾ ಕೃ: ೨೦೦೩:೨೪೯). ಆದರೆ ಕಲಾವಿದರಾಗಿದ್ದ ದಾಸ ಸಮುದಾಯಕ್ಕೆ ಆಶ್ರಯವೇ ಇಲ್ಲದಂತಾಯಿತು. ೧೬ನೆಯ ಶತಮಾನದಿಂದ ದಾಸರು ಊರಿಂದೂರಿಗೆ ಅಲೆದಾಡುತ್ತಾ, ತಂಬೂರಿ ಮೀಟುತ್ತ ಹರಿಕೀರ್ತನೆಗಳನ್ನು ಜನರಂಜಕವಾಗಿ ಹಾಡುತ್ತ ಧರ್ಮನಿಷ್ಠೆಯನ್ನು, ಹರಿಭಕ್ತಿಯನ್ನು ಕುದುರಿಸಲಾರಂಭಿಸಿದರು(ಕೃಷ್ಣರಾವ್, ಎಂವಿ..೧೯೭೦:೮೨೫). ಅಲ್ಲದೆ ಈ ವರೆಗೆ ಮಾಡುತ್ತ ಬಂದಿದ್ದ ವೈಷ್ಣವ ಧರ್ಮದ ಪ್ರಚಾರದ ಹರಿಸೇವೆಯನ್ನು ಕೀರ್ತನೆಗಳನ್ನು ಹಾಡಿ ಭಿಕ್ಷೆ ಬೇಡಿ ಹೊಟ್ಟೆ ಹೊರೆಯುತ್ತ ಮುಂದುವರಿಸಿದರು.

ರಾಜಾಶ್ರಯವಿಲ್ಲದೆ ಜನಾಶ್ರಯಕ್ಕೆ ಸರಿದ ದಾಸರು ಶ್ರೀಕೃಷ್ಣಲೀಲೆಗಳನ್ನು ಹಾಡುತ್ತ ಜನತೆಯಲ್ಲಿ ಕೃಷ್ಣ ಭಕ್ತಿಯ್ನನು ಬಿತ್ತಲು ಮುಂದಾದರು. ಅವರು ಹಾಡಿ, ಕುಣಿದು ಜನರನ್ನು ತಣಿಸಿದರು. ದೇವಮಂದಿರಗಳಲ್ಲಿ ದೇವರ ಆರಾಧನೆ ಮುಗಿಯುತ್ತಲೇ ಅಭಿನಯ ಪರವಾದ ಹಾಡು, ಕುಣಿತ ನಡೆಯತೊಡಗಿದವು; ಅದು ರಂಗಭೋಗವೆಂದು ಖ್ಯಾತಿಪಡೆಯಿತು. ರಂಗಭೋಗಕ್ಕಾಗಿ ಟೊಂಕಕಟ್ಟಿದವರು ದಾಸರು. ಪ್ರತಿಯೊಂದು ಗುಡಿಯಲ್ಲಿಯೂ ದೇವರ ತೃಪ್ತಿಗಾಗಿ ಹಾಡಿ ಕುಣಿಯುವ ದಾಸರ ತಂಡ ಸಿದ್ಧವಾದವು. ಅವರಿಲ್ಲಧೇ ದೇವರ ಸೇವೆ ಮುಗಿಯದಂತಾಯಿತು. ಗೀತ ನೃತ್ಯಗಳಿಗೆ ಹೆಚ್ಚಿನ ಸ್ಥಾನ ದೊರೆಯಿತು. ಆ ಸೇವೆಯನ್ನು ನಿರ್ವಹಿಸುತ್ತ ಬಂದವರಿಗೆ ಹರಿದಾಸರೆನ್ನುವುದು ರೂಢಿಯಾಯಿತು. ಈ ದಾಸ ಕುಲದವರು ದೇವರ ಸೇವೆ ಮಾಡುತ್ತಲೇ ಭಕ್ತರ ಮನವನ್ನು ಸೆರೆಹಿಡಿದ ಶ್ರೀಕೃಷ್ಣಲೀಲೆಗಳನ್ನು ಭಾಗವತದ ಆಧಾರದ ಮೇಲೆ ಅಭಿನಯಿಸಲು ಮುಂದಾದರು. ಈ ಅಭಿನಯದಲ್ಲಿ ದಾಸವರ್ಗದ ಸ್ತ್ರೀ ಪುರುಷರು ಭಾಗವಹಿಸುತ್ತ ಬಂದುದರ ಪರಿಣಾಮವಾಗಿ ಅಂತಹ ಅಭಿನಯಕ್ಕೆ ದಾಸರಾಟವೆಂದು ಜನ ಕರೆಯತೊಡಗಿತು. ದಾಸರಾಟ ಮೂಡಿಬರಲು ಶ್ರೀಕೃಷ್ಣನ ಆರಾಧನಾ ಪ್ರಸಂಗವೇ ಮೂಲವೆಂದು ಅರಿಯಬೇಕು(ಸುಂಕಾಪುರ, ಎಂ ಎಸ್: ೧೯೭೨:೧೬).

ಆಟದ ದಾಸರಿಗೆ 'ದಶಂತ(ದಶವಂತ)ರೆಂದು ನಾಮಾಂತರವಿರುವುದು. ಅವರ ಆಟದ ಮೂಲವಸ್ತು "ದಶಾವತಾರ"ಲೀಲೇಯಾಗಿದ್ದಿತೆಂದು ಊಹಿಸಲು ಆಸ್ಪದ ವೀಯುತ್ತಿದೆ (ಅವರೇ: ೧೯೭೮: ೯೮). ಅಲ್ಲದೆ "ಈಗಿನ ದಾಸರಾಟ ಕೃಷ್ಣ ಗೊಲ್ಲತಿಯರ ಪ್ರವೇಶದಿಂದ ಪ್ರಾರಂಭವಾಗುತ್ತದೆ. ಹಾಲು ಮಾರಲು ಬಂದ ಗೊಲ್ಲತಿಯನ್ನು

ಪೀಡಿಸಿ ಕೃಷ್ಣ ಸುಂಕಬೇಡುತ್ತಾನೆ. ಆಕೆ ಕೊಡಲು ನಿರಾಕರಿಸುತ್ತಾಳೆ. ಕೆಲವೊತ್ತು ಅವರಲ್ಲಿ ವಾದ ವಿವಾದ ನಡೆದು ಕೊನೆಗೆ ಆ ಪಾತ್ರ ಸಂಧಾನದಿಂದ ತೆರೆಯ ಮರೆಗೆ ಸರಿಯುತ್ತದೆ" ಈ ರೀತಿ ಬಯಲಾಟದಲ್ಲಿ ಗೊಲ್ಲತಿಯ ಪಾತ್ರ ಮಾಡುವ ಸಮುದಾಯದವರನ್ನು ರೂಢಿಯ ಮೇಲೆ 'ಗೊಲ್ಲದಾಸರು' ಎಂದು ಕರೆಯತೊಡಗಿದರು. ಮೈಸೂರು ಪ್ರಾಂತ್ಯದಲ್ಲಿ ಗಂಡಸರೇ ಹೆಣ್ಣು ವೇಷ ಹಾಕಿ ಬಯಲಾಟ ಆಡುವ ಸಮುದಾಯಕ್ಕೆ 'ಹೆಣ್ಣು ವೇಷದವರು' ಎಂದು ಕರೆಯುತ್ತಾರೆ. ಹೀಗೆ ಚೆನ್ನದಾಸರ ರಂಗಭೂಮಿಯ ಮೇಳ, ದೇವಾಲಯದಿಂದ ಬೀದಿಗೆ ಬಂದಬಳಿಕ ಸುರುವಾಗಿರಬೇಕು ಎಂಬ ವಿದ್ವಾಂಸರ ಮಾತುಗಳು ನಿಜವೆಂದಿನಿಸುತ್ತವೆ.

ವಲಸೆ ಬಂದಿರುವ ಕೆಲವು ಸಮುದಾಯದ ಕೆಲವರು ಬೇರೆ ಬೇರೆ ವೃತ್ತಿಗೆ ಇಳಿದರು ಈ ಕಡೆಗೆ ರಾಜಾಶ್ರಯ ಸೇರಿದಂತೆ ಯಾವ ಆಶ್ರಯವೂ ಇಲ್ಲ. ಜೊತೆಗೆ ನೆಲೆಯೂರಲು ನೆಲವೂ ಇಲ್ಲ. ಹೀಗಾಗಿ ಬೇರೆ ವೃತ್ತಿಗಳಿಗೆ ಅನಿವಾರ್ಯವಾಗಿ ಇಳಿದರು. ಅದುವೇ ಈ ಸಮುದಾಯಕ್ಕೆ ಬೇರೆ, ಬೇರೆ ಹೆಸರು ಬರಲು ಕಾರಣವಾಯಿತು. ದಂಡಿಗೆ ದಾಸರು, ಚಕ್ರವಾದ್ಯ ದಾಸರು ತಂಬೂರಿ(ದೊಂಬಿ) ದಾಸರು, ಶಂಖದಾಸ, ಶಂಖ ದಾಸಯ್ಯ, ಗೋಪಾಳ ಬುಟ್ಟಿದಾಸರು, ಗರುಡಗಂಭ ದಾಸರು, ಭಾಗವತದಾಸರು, ಪೂಸಲು (ಮಣಿಸರ) ದಾಸರು ಇತ್ಯಾದಿ ಹೆಸರುಗಳು ವೃತ್ತಿಯಿಂದ ಬಂದವುಗಳಾದರೂ ಕಾಲಾಂತರದಲ್ಲಿ ಜಾತಿಗಳೆಂದು ಭಾವಿಸುತ್ತ ಬರಲಾಯಿತು.

ಇದೇ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಇಲ್ಲೇ ಹೇಳುವುದು ಉಚಿತವೆನಿಸುತ್ತದೆ. ಎಡ್ಗರ್‌ಥರ್ಸ್ಟನ್ ಆದಿಯಾಗಿ ಬಹುತೇಕ ವಿದ್ವಾಂಸರು ಹೇಳುವಂತೆ ದಾಸ ಅಥವಾ ದಾಸರಿ ಎಂಬುದು ವೈಷ್ಣವ ಭಿಕ್ಷುಕರ ಹೆಸರು. ಅದೊಂದು ಜಾತಿಯಲ್ಲ, ಅದರಲ್ಲಿ ಬ್ರಾಹ್ಮಣೇತರ ಶೂದ್ರವರ್ಗದವರು ದಾಸದೀಕ್ಷೆ ಪಡೆದವರು ಎಂದಿರುವರು. ಈ ಮಾತು ನಿಜ ಅದರೆ ಪೂರ್ತಿ ನಿಜವಲ್ಲ, ಅರ್ಧಸತ್ಯ.

ವಿಜಯನಗರ ಸಾಮ್ರಾಜ್ಯದ ಬೆಂಬಲದಿಂದಾಗಿ ವ್ಯಾಸರಾಯರ ಗುರು ಮುಖದಲ್ಲಿ ಪ್ರಸಿದ್ಧಿಗೆ ಬಂದ ಹರಿದಾಸ ಪಂಥದ ವ್ಯಾಸಕೂಟ, ದಾಸಕೂಟಗಳ ಪ್ರಭಾವ ಪ್ರೇರಣೆ ಯಿಂದ ವೈಷ್ಣವ ಮತ ಜನತೆಗೆ ಹತ್ತಿರವಾಯಿತು. ಸಮಕಾಲೀನ ಸಂದರ್ಭದಲ್ಲಿ ಸಾಮಾಜಿಕವಾಗಿ ಜಾತೀಯತೆಯ ಅವಮಾನಕ್ಕೆ ತುತ್ತಾದ ಜನಸಮುದಾಯಗಳು ಆ ಅವಮಾನದ ಕೂಪದಿಂದ ಹೊರಬರಲು ಸಾಮಾಜಿಕ ಅಂತಸ್ತು ಪಡೆಯಲು ಮನೆಯ ಬಾಗಿಲಿಗೆ ಬಂದ ವೈಷ್ಣವ ಧರ್ಮವನ್ನು ಸ್ವೀಕರಿಸಿ ಹರಿದಾಸರೆಂಬ ಅಭಿದಾನದಿಂದ ಅಭಿಮಾನಕ್ಕೊಳಗಾದವು. ಕುರುಬ, ಬೇಡ, ತಿಗಳ, ಬಲಿಜ, ಸೋಲಿಗ, ವಡ್ಡ, ಅಂಬಿಗ, ಗೊಲ್ಲ, ಒಕ್ಕಲಿಗ, ಮುಂತಾದ ಶೂದ್ರ ಜಾತಿಗಳ ಜೊತೆಗೆ ಹೊಲೆಯ, ದಾಸ, ಮಾಲ, ಮಾದಿಗ, ಸಮಗಾರ ಮುಂತಾದ ಅಸ್ಪೃಶ್ಯ ಜಾತಿಗಳೂ ಕೂಡ ವೈಷ್ಣವ ಧರ್ಮ ಸ್ವೀಕರಿಸಿ ಹರಿದಾಸರೆಂದುಕೊಂಡು ಉಬ್ಬಿದರು. ಆದರೆ ವಿಜಯನಗರದ ಪತನದ ಬಳಿಕ ಹರಿದಾಸರ ಬೆಂಗಾವಲಂತಿದ್ದ ವ್ಯಾಸಕೂಟ ದಾಸಕೂಟಗಳೇ ನೆಲೆ

ಕಳೆದುಕೊಂಡ ಬಳಿಕ ಮತ್ತೇ ವೈದಿಕ ಮತದ ಸಂಪ್ರದಾಯವಾದಿಗಳಿಂದ ವೈಷ್ಣವ ಧರ್ಮ ಮೂಲ ವೈದಿಕರ ಧರ್ಮ ಮಾತ್ರವಾಗಿ ಪೂಜೆ, ಯಾಗ, ಮಂತ್ರ, ತಂತ್ರಗಳಿಂದ ಜನಸಾಮಾನ್ಯರಿಂದ ದೂರವಾಯಿತು. ಶ್ರೀ ಗೀತಾಚಾರ್ಯರು ಅಭಿಪ್ರಾಯ ಪಡುವಂತೆ ಅನ್ಯಮತೀಯರು ಶ್ರೀ ವೈಷ್ಣವ ಮತಾನುಯಾಯಿಗಳು ಆದರೇ ಹೊರತು ಶ್ರೀವೈಷ್ಣವ ಮತೀಯರಾಗಲಿಲ್ಲ. ಮೂಲ ಜಾತಿಗಳಿಂದ ಬಿಡುಗಡೆ ಬಯಸಿ ಹರಿದಾಸರಾದ ಅನ್ಯಮತೀಯರು ಮತ್ತೇ ತಮ್ಮ ತಮ್ಮ ಜಾತಿಗಳೊಳಗೆ ಸೇರಿಕೊಂಡು ಬಿಟ್ಟರು. ಕೆಲವರು ಉಪಜೀವನಕ್ಕಾಗಿ ಆಯಾ ಜಾತಿಯ ದಾಸಪ್ಪ, ದಾಸಯ್ಯಗಳಾದರೇ ಹೊರತು ದಾಸರು ಆಗಲಿಲ್ಲ. ಜಾತಿಯಿಂದ ಈ ಮೊದಲೇ ಅಂದರೆ ರಾಮಾನುಜಾಚಾರ್ಯರ ಕಾಲದಲ್ಲಿ ಹರಿದಾಸರಾಗಿ ದಾಸರಾಗಿದ್ದರೋ ಅವರು ಮಾತ್ರ ದಾಸರಾಗಿ ಉಳಿದರು. ಅವರು ಮಾಲದಾಸರಿ, ಚೆನ್ನಯ್ಯದಾಸರಿ ಎಂಬ ಮೊದಲ ವೈಷ್ಣವ ಭಕ್ತರ ಪರಂಪರೆಯವರು ಅವರೇ ಚೆನ್ನದಾಸರು. ಅವರು ವೈಷ್ಣವ ಗುರುಗಳಿಂದ ದೀಕ್ಷೆ ಪಡೆದು ದಾಸಪ್ಪ, ಅಥವಾ ದಾಸಯ್ಯಗಳಾಗಬೇಕಾಗಿಲ್ಲ. ಅವರು ಮೂಲ ದಾಸರೇ ಆಗಿರುವರು. ಇವರ ಹೆಸರಿನ ಹಿಂದೆ ಚೆನ್ನ, ಮಾಲ ಬಿಟ್ಟರೆ ಯಾವ ಜಾತಿ ಸೂಚಕಗಳಿರುವುದಿಲ್ಲ. ಬದಲಿಗೆ ವೃತ್ತಿಪರ ಉಪನಾಮಗಳಿವೆ. ಆದರೆ ದಾಸರಲ್ಲದ ಜಾತಿ ಅಥವಾ ಸಮುದಾಯದವರು ದಾಸ ದೀಕ್ಷೆ ಪಡೆದರೂ ಅವರ ಹೆಸರಿನ ಹಿಂದೆ ಜಾತಿಸೂಚಕವಿರುತ್ತದೆ. ಉದಾಹರಣೆಗೆ ಬಲಿಜದಾಸರು, ಗೊಲ್ಲದಾಸರು, ಬೇಡದಾಸರು, ಕುರುಬದಾಸರು, ಬಣಜಿಗದಾಸರು, ಅಂಬಿಗದಾಸರು ಇತರರು. ಇವರೆಲ್ಲ ತಮ್ಮ ಮೂಲ ಜಾತಿಯೊಂದಿಗೆ ವೈವಾಹಿಕ ಸಂಬಂಧ ಬೆಳಸುವರೇ ಹೊರತು ಎಲ್ಲ ದಾಸರ ಜೊತೆಗಲ್ಲ.

ದಾಸರಾಟದ ಕುರಿತು ಹೇಳುತ್ತ ಬಸವರಾಜ ಮಲಶೆಟ್ಟಿಯವರು ದಾಸರಾಟ ಜಾತಿ ಹಾಗೂ ವೃತ್ತಿಯಿಂದ ದಾಸರಾಗಿದ್ದವರಲ್ಲಿ ಬಾಳಿ ಬಂದಂತಹುದು. ಇಲ್ಲಿ "ದಾಸರು" ಎಂಬುದು ಜಾತಿವಾಚಕ (ಮಲಶೆಟ್ಟಿ, ಬಸವರಾಜ:೧೯೮೩: ೧೦೭) ಎಂದಿರುವರು. ದೇವೇಂದ್ರ ಕುಮಾರ ಹಕಾರಿಯವರು ತಂಬೂರಿ ಮತ್ತು ಏಕತಾರಿ ವಾದ್ಯಗಳ ಕುರಿತು ಹೇಳುತ್ತ "ಕರ್ನಾಟಕದ ಬಯಲು ಸೀಮೆಯ ವಿವಿಧ ಪ್ರದೇಶಗಳಲ್ಲಿ ದಾಸ ಜನ ಸಮುದಾಯ ವಾಸವಾಗಿದೆ. ಈ ದಾಸರು ಚದುರಿಹೋದ ಜನಾಂಗ. ಕನ್ನಡ ದಾಸ ಸಾಹಿತ್ಯ ಪರಂಪರೆಯಲ್ಲಿ ಪ್ರಬಲವಾಗಿರಬಹುದಾದ ಇವರು ವೃತ್ತಿಗಾಯಕರಲ್ಲಿ ಪ್ರಮುಖರಾದವರು (ಸುಂಕಾಪುರ, ಎಂ ಎಸ್: ೧೯೮೭: ೧೪೫) ಎಂದಿರುವರು. ದಾಸರು, ದಾಸರಿ ಎಂದು ಕರೆಯಿಸಿಕೊಳ್ಳುವ ಈ ಚೆನ್ನದಾಸರು ಮೂಲದಲ್ಲಿ ಭಿಕ್ಷುಕ ವೃತ್ತಿಯವರು. ಈ ಭಿಕ್ಷುಕ ವೃತ್ತಿಯೊಂದಿಗೆ ಕಲೆಯ ನಂಟಿದೆ. ಚೆನ್ನದಾಸ ಸಮುದಾಯದ ಯಾವುದೇ ಒಂದು ಗುಂಪನ್ನು ತಡಕಾಡಿದರೂ ಸಾಕು ತಂಬೂರಿಯೋ, ದಂಡಿಗೆಯೋ, ಶಂಖವೋ, ಚಕ್ರವಾದ್ಯವೋ, ಪಿಯಾನೋವೋ, ದಮ್ಮಡಿಯೋ ಇಲ್ಲವೆ ಬಯಲಾಟದ ಮೇಳಗಳೋ ಇಲ್ಲವೆ ಗಂಗೆ ಗೌರಿ ಇತ್ಯಾದಿ ಹಾಡುವ ಲಾವಣಿ ಹಾಡುಗಾರರೋ, ಗೋಪಾಳಬುಟ್ಟಿ, ಜಾಗಟೆ, ಗರುಡಗಂಬದವರೋ ಸಿಕ್ಕೇ ಸಿಗುತ್ತಾರೆ. ಭಿಕ್ಷುಕ ವೃತ್ತಿಯು ಈ ದಾಸ ಸಮುದಾಯಕ್ಕೂ ಕಲೆಗೂ ಬಿಡಿಸಲಾಗದ ನಂಟಿದೆ.

ಒಟ್ಟಿನಲ್ಲಿ ಚೆನ್ನದಾಸರ ಮೂಲ ಮತ್ತು ವಲಸೆ ಕುರಿತು ಇರುವ ಮಾಹಿತಿಯನ್ನಾಧರಿಸಿ ಸಂಗ್ರಹಿಸಿ ಹೇಳುವುದಾದರೆ ಚೆನ್ನದಾಸರ ಸಮುದಾಯದ ಮೂಲ ಆಂಧ್ರಪ್ರದೇಶವೇ ಆಗಿದೆ. ಮೂಲ ಪುರುಷರಾದ ಚೆನ್ನಯ್ಯದಾಸು ಮತ್ತು ಮಾಲದಾಸರಿ ಆಂಧ್ರದವರೇ ಆಗಿರುವರು.

ಆಂಧ್ರಪ್ರದೇಶದ ಮದನಪಲ್ಲಿ, ಹನುಮಪಲ್ಲಿ, ಗದ್ವಾಲ್ ಮತ್ತು ಕರ್ನೂಲ ಕಡೆಗಳಿಂದ ಬಂದಿರುವ ಸಾಧ್ಯತೆಗಳಿವೆ. ಹಂಪಿಯ ಪರಿಸರದ ಆಂಧ್ರದ ಗಡಿಯ ಜಿಲ್ಲೆಗಳಿಂದಲೂ ಬಂದಿರುವುದಿದೆ.

ಕ್ರಿ ಶ ೧೧ ಮತ್ತು ೧೨ನೆಯ ಶತಮಾನದಲ್ಲಿ ಶ್ರೀ ರಾಮಾನುಜಾರ್ಯರ ಶ್ರೀವೈಷ್ಣವ ಧರ್ಮ ಪ್ರಚಾರದ ಸಂದರ್ಭದಲ್ಲಿ ಹಾಗೂ ೧೬ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಪತನದ ನಂತರದಲ್ಲಿ ಪ್ರಮುಖವಾಗಿ ವಲಸೆ ಬಂದಿರುವ ಸಂಭವಗಳಿವೆ. ಹಾಗೂ ಬ್ರಿಟಿಷ್ ಸರ್ಕಾರದ ಸಂದರ್ಭದಲ್ಲಿಯೂ ಬಂದಿರುವ ಸಾಧ್ಯತೆಗಳಿವೆ. ಇದಕ್ಕೂ ಮುನ್ನ ಕೆಲವು ಗುಂಪುಗಳು ಆಳರಸರ ಸೈನ್ಯಗಳ ಜೊತೆಗೆ ಸೈನಿಕರ ಮನರಂಜನೆಗಾಗಿ ಬಂದಿರುವ ಸಾಧ್ಯತೆಗಳೂ ಇವೆ.

ಅಲ್ಲದೆ ಯುದ್ಧಗಳ ಭೀತಿ, ಭೀಕರ ಬರಗಾಲ ಈ ಮುಂತಾದ ಕಾರಣಗಳಿಂದಾಗಿಯೂ ಆಂಧ್ರ ಪ್ರದೇಶದ ಪಶ್ಚಿಮ ಭಾಗದಿಂದ ಬಂದಿರುವ ಸಾಧ್ಯತೆಯೂ ಇದೆ.

**ಭೌಗೋಳಿಕತೆ**

ಆಂಧ್ರ ಮೂಲದ ಈ ಸಮುದಾಯ ಜಾತೀಯತೆಯ ಅವಮಾನದಿಂದ ಬಿಡುಗಡೆ ಬಯಸಿ ವೈಷ್ಣವ ಧರ್ಮ ಸ್ವೀಕರಿಸಿ ದಕ್ಷಿಣ ಭಾರತದೆಲ್ಲೆಡೆ ಚದುರಿದೆ. ಬಹುಶಃ ಈ ಸಮುದಾಯ ಎರಡು ಘಟ್ಟದಲ್ಲಿ ಚದುರಿರುವ ಸಂಭವವಿದೆ. ಮೊದಲು ರಾಮಾನುಜಾಚಾರ್ಯರ ವೈಷ್ಣವ ಧರ್ಮದ ಪ್ರಚಾರಾಂದೋಳನ ಸಂದರ್ಭದಲ್ಲಿ ಹಾಗೂ ನಂತರದ ಮಧ್ವಾಚಾರ್ಯರ ಹರಿದಾಸ ಭಕ್ತಿ ಆಂದೋಳನ ಸಂದರ್ಭದಲ್ಲಿ, ಈ ಸಮುದಾಯವು ವೈಷ್ಣವ ಧರ್ಮವನ್ನು ಅಭಿಮಾನಪೂರ್ವಕವಾಗಿ ಒಪ್ಪಿಕೊಂಡು ಸ್ವೀಕರಿಸಿ ಅದರ ಧಾರ್ಮಿಕ ಲಾಂಛನಗಳೊಂದಿಗೆ ಅದನ್ನು ಜನಸಾಮಾನ್ಯರ ಬಳಿಗೆ ತಲುಪಿಸಲು ಭಿಕ್ಷಾವೃತ್ತಿಯ ಮೂಲಕ ಮೂಲಸ್ಥಳದಿಂದ ಬೇರ್ಪಟ್ಟಿದೆ. ವಿಜಯನಗರ ಸಾಮ್ರಾಜ್ಯದ ಆಶ್ರಯ ಹೊಂದಿದ್ದ ಈ ಸಮುದಾಯ ೧೬ನೇ ಶತಮಾನದಲ್ಲಿ ಆ ಸಾಮ್ರಾಜ್ಯದ ಪತನದ ನಂತರ ಕರ್ನಾಟಕದ ಬಹುತೇಕ ಪೂರ್ವಭಾಗದಿಂದ ಮಧ್ಯಭಾಗಕ್ಕೆ ಸರಿಯುತ್ತ ಚದುರಿ ಬಂದಿದೆ. ನಂತರದಲ್ಲಿ ಭಿಕ್ಷೆಯ ಮೂಲಕ ನೆಲೆಯನ್ನರಸುತ್ತ ಎಲ್ಲಕಡೆಗೂ ವ್ಯಾಪಿಸಿದೆ.

**ಭಾರತದ ಚೆನ್ನ ದಾಸರು**

ಭಾರತ ಸರಕಾರದ ೧೯೩೫ರ ಕಾಯ್ದೆಯ ಅಧೀನದಲ್ಲಿರುವ(Orders-in-Council) ನ ಅಸ್ಪೃಶ್ಯರ ಪರಿಶಿಷ್ಟದ ಮದ್ರಾಸ್ ರಾಜ್ಯದ ಕ್ರಮ ಸಂಖ್ಯೆ ೪೫ ರಲ್ಲಿ ಮಾಲ ದಾಸು (Mala Dasu), ಮುಂಬೈ ರಾಜ್ಯದ ಕ್ರಮ ಸಂಖ್ಯೆ ೫ ರಲ್ಲಿ

ಚಕ್ರವಾಧ್ಯ ದಾಸರ್ (Chakrawadya -Dasar), ಕ್ರಮ ಸಂಖ್ಯೆ ೧೦ ರಲ್ಲಿ ಚೆನ-ದಾಸರು (Chana -Dasaru) ಪದಗಳು ದಾಖಲಾಗಿವೆ.

ಭಾರತ ಸರಕಾರದ (ಪರಿಶಿಷ್ಟ ಜಾತಿ) ಆದೇಶ ೧೯೩೬ರ ಪ್ರಕಾರ ಬೆಳಗಾವಿ, ಬಿಜಾಪುರ, ಧಾರವಾಡ, ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಚೆನ-ದಾಸರು (Chena Dasaru) ಸಮುದಾಯವು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ದಾಖಲಾಗಿದೆ.

ಭಾರತ ಸಂವಿಧಾನ (ಪರಿಶಿಷ್ಟ ಜಾತಿ) ಆದೇಶ ೧೯೫೦ ರ ಪ್ರಕಾರ ಮುಂಬೈ ರಾಜ್ಯದಲ್ಲಿಯ ಪರಿಶಿಷ್ಟ ಜಾತಿ ಪಟ್ಟಿಯಲ್ಲಿಯ ಕ್ರಮ ಸಂಖ್ಯೆ ೯ ರಲ್ಲಿ ಚೆನ್ನದಾಸರ್ (Chenna Dasar) ಮತ್ತು ಹೈದ್ರಾಬಾದ್ ರಾಜ್ಯದ ಅದೇ ಪಟ್ಟಿಯ ಕ್ರಮ ಸಂಖ್ಯೆ ೧೩ ರಲ್ಲಿ ಹೊಲೆಯ ದಾಸರಿ(Holeya Dasari) ಹಾಗೂ ಕ್ರಮ ಸಂಖ್ಯೆ ೧೮ ರಲ್ಲಿ ಮಾಲ ದಾಸರಿ (Mala Dasari) ಪದಗಳು ದಾಖಲಾಗಿವೆ.

೧೯೫೬ ರಲ್ಲಿ ಭಾಷಾವಾರು ಪ್ರಾಂತ ರಚನೆ ಆದ ಮೇಲೆ ದಿನಾಂಕ ೧.೫.೧೯೬೦ ರಿಂದ ಜಾರಿಯಾದಂತೆ ಬೆಳಗಾವಿ, ಬಿಜಾಪುರ, ಧಾರವಾಡ, ಮತ್ತು ಕೇನರಾ ಜಿಲ್ಲೆಗಳಿಗೆ ಸೀಮಿತಗೊಂಡಂತೆ ಈ ಜಿಲ್ಲೆಗಳಲ್ಲಿಯ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮ ಸಂಖ್ಯೆ ೬ ರಲ್ಲಿ ಚೆನ್ನದಾಸರ್ ಅಥವಾ ಹೊಲೆಯ ದಾಸರ್ (Chenna Dasar or Holeya Dasar) ಮತ್ತು ಬೀದರ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಿಗೆ ಸೀಮಿತ ಗೊಂಡಂತೆ ಆ ಜಿಲ್ಲೆಗಳಲ್ಲಿಯ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮ ಸಂಖ್ಯೆ ೧೩ ರಲ್ಲಿ ಹೊಲೆಯ ದಾಸರಿ (Holeya Dasari) ಮತ್ತು ಕ್ರಮ ಸಂಖ್ಯೆ ೧೮ ರಲ್ಲಿ ಮಾಲ ದಾಸರಿ (Mala Dasari) ಎಂಬೀ ಪದಗಳು ದಾಖಲಾದವು.

ದಿನಾಂಕ ೨೭.೭.೧೯೭೭ ರಂದು ಕರ್ನಾಟಕದಲ್ಲಿ ಈ ಸಮುದಾಯಗಳಿಗಿರುವ ಪ್ರಾದೇಶಿಕ ಮಿತಿಯನ್ನು ಸಡಿಲಿಸಿ ರಾಜ್ಯಕ್ಕೆ ವಿಸ್ತರಿಸಲಾಯಿತು. ಈಗ ಕರ್ನಾಟಕದ ಪರಿಶಿಷ್ಟ ಜಾತಿ ಮೀಸಲಾತಿ ಪಟ್ಟಿಯ ಕ್ರಮ ಸಂಖ್ಯೆ ೨೯ ರಲ್ಲಿ ಚೆನ್ನದಾಸರ್, ಹೊಲೆಯ ದಾಸರ್ (Chenna Dasar, Holeya Dasar), ೪೫ ರಲ್ಲಿ ಹೊಲೆಯ ದಾಸರಿ (Holeya Dasari) ಮತ್ತು ಕ್ರಮ ಸಂಖ್ಯೆ ೬೬ರಲ್ಲಿ ಮಾಲ ದಾಸರಿ (Mala Dasari) ಎಂಬೀ ಪದಗಳು ದಾಖಲಾಗಿವೆ. ಮಹಾರಾಷ್ಟ್ರದ ಅದೇ ಪಟ್ಟಿಯ ಕ್ರಮ ಸಂಖ್ಯೆ ೧೬ ರಲ್ಲಿ ಚೆನ್ನದಾಸರ್, ಹೊಲೆಯ ದಾಸರ್, ಹೊಲೆಯ ದಾಸರಿ (Chenna Dasar, Holeya Dasar, Holeya Dasari)ಮತ್ತು ಕ್ರಮ ಸಂಖ್ಯೆ ೪೦ ರಲ್ಲಿ ಮಾಲ ದಾಸರಿ(Mala Dasari) ಎಂಬೀ ಪದಗಳು ದಾಖಲಾಗಿವೆ. ಆಂಧ್ರ ಪ್ರದೇಶದ ಅದೇ ಪಟ್ಟಿಯ ಕ್ರಮ ಸಂಖ್ಯೆ ೨೭ ರಲ್ಲಿ ಹೊಲೆಯ ದಾಸರಿ (Holeya Dasari), ೩೬ ರಲ್ಲಿ ಮಾಲ ದಾಸರಿ (Mala Dasari) ಮತ್ತು ಕ್ರಮ ಸಂಖ್ಯೆ ೩೭ ರಲ್ಲಿ ಮಾಲ ದಾಸು (Mala Dasu) ಎಂಬೀ ಪದಗಳು ದಾಖಲಾಗಿವೆ. ಗುಜರಾತ ರಾಜ್ಯದ ಅದೇ ಪಟ್ಟಿಯ ಕ್ರಮ ಸಂಖ್ಯೆ ೭ ರಲ್ಲಿ ಚೆನ್ನದಾಸರ್, ಹೊಲೆಯ ದಾಸರ್ (Chenna Dasar, Holeya Dasar) ಎಂಬೀ ಪದಗಳು ದಾಖಲಾಗಿಲಿವೆ.

ಕರ್ನಾಟಕ ರಾಜ್ಯದ ಹಿಂದುಳಿದ ವರ್ಗಗಳ ಮೀಸಲಾತಿಯ ಪ್ರವರ್ಗ ೧ ರ ಕ್ರಮ ಸಂಖ್ಯೆ ೧೨ (ಎ) ದಾಸರಿ, (ಬಿ) ದಾಸರು, (ಸಿ) ಚಕ್ರವಾದ್ಯ ದಾಸ, (ಡಿ) ದಂಗ್ ದಾಸರ್, (ಇ) ದೊಂಬಿ ದಾಸರು ಮತ್ತು ಪ್ರವರ್ಗ ೩ ಎ ಒಕ್ಕಲಿಗರಲ್ಲಿ ಕ್ರಮ ಸಂಖ್ಯೆ ೧ (ಜಿ) ದಾಸ್ ಒಕ್ಕಲಿಗ ಹಾಗೂ ಅದೇ ಪ್ರವರ್ಗದ ಬಲಿಜರಲ್ಲಿ ಕ್ರಮ ಸಂಖ್ಯೆ ೩. (ಎಫ್) ದಾಸರ ಬಲಿಜ/ದಾಸರ ಬಲಜಿಗ/ದಾಸರ ಬಣಜಿಗ/ದಾಸ ಬಣಜಿಗ ಪದಗಳು ದಾಖಲಾಗಿವೆ (ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨, ಪುಟ ೧೦೦೫, ೧೦೧೬,೧೦೧೭).

ಹೊಲೆಮಾದಿಗರ ಜೀವನ ಶೈಲಿಯಲ್ಲಿ ಪ್ರಾದೇಶಿಕವಾಗಿ ಸ್ವಲ್ಪ ವ್ಯತ್ಯಾಸವಿದೆ. ಮೂಲತಃ ಇವರಿಬ್ಬರೂ ಒಂದೇ ಅಂತಸ್ತಿನ ಜನ ಸಮೂಹ. ಆಂಧ್ರದಲ್ಲಿ ಹೊಲೆಯರನ್ನು (ಮಾಲ)ರೆಂದು ಅನಾದಿಕಾಲದಿಂದಲೂ ಕರೆಯುವ ವಾಡಿಕೆಯಿದೆ. ಮಾಲ, ಹೊಲೆಯ ಮತ್ತು ಮಾದಿಗರು ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ, ಕೇರಳ, ಮಧ್ಯಪ್ರದೇಶ ಹಾಗೂ ಪಾಂಡಿಚೇರಿಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತಾರೆ... ಮಾಲ ಎಂಬ ಶಬ್ದ ಮ್ಯಲಾ ಎಂಬ ಸಂಸ್ಕೃತ ಪದದಿಂದ ನಿಷ್ಪತ್ತಿಯಾಗಿದೆ (ದಾಸನೂರು ಕೂಸಣ್ಣ:೧೯೯೮:೭೮).

ಹೊಲೆಮಾದಿಗರಲ್ಲಿ ಮತ್ತೇ ಭಿಕ್ಷುಕರು, ಅಲೆಮಾರಿಗಳು, ಅಪರಾಧೀಕರಣಗೊಂಡವರು ಹಾಗೂ ಅವಲಂಬಿತರೆಂದು ವರ್ಗೀಕರಣವಾಯಿತು. ಪಣದೊಳಗೆ ಸೇರದ ಗಿರಿಜನರೊಳಗೆ ಜಾತಿಧರ್ಮ ಗೊತ್ತಿಲ್ಲದ ನೂರಾರು ಬುಡಕಟ್ಟು ಪ್ರಭೇದಗಳಾಗಿ ಕವಲೊಡೆದವು. ದೇಶಕ್ಕೆ ಸ್ವಾತಂತ್ರ ಬಂದು ಸ್ವಲ್ಪ ನಾಗರೀಕರಣಗೊಂಡರೂ ಅಸ್ಪೃಶ್ಯತೆ ನಿಂತಿಲ್ಲ(ಅದೇ:೮೦).

ಹೈದರಾಬಾದ್ ನಿಜಾಂ ಪ್ರದೇಶದ ನಿಮ್ನ ವರ್ಗದ ಆದಿಹಿಂದೂ ಜಾತಿಗಳು, ಮೂಲ ಜಾತಿಗಳು ಮತ್ತು ಅವುಗಳ ಉಪಜಾತಿಗಳ ಪಟ್ಟಿಗಳಲ್ಲಿ ೧೯೩೧ ರ ಜನಗಣತಿಯ ಪ್ರಕಾರ ಮಾಲ ಸಮುದಾಯದ ಜನಸಂಖ್ಯೆ ೪,೬೬,೪೭೩ ವಿರಳ ಜಾತಿಗಳ ಪಟ್ಟಿಯಲ್ಲಿ ದಾಸರಿ ಸಮುದಾಯದ ಜನಸಂಖ್ಯೆ ೯,೦೬೪ ದಾಖಲಾಗಿದೆ (ಅದೇ:೮೬). ಆಂಧ್ರದಲ್ಲಿ ಹೊಲೆಯ ಅಥವಾ ಮಾಲ ಜಾತಿಯಲ್ಲಿ ೩೭ ಉಪ ಜಾತಿಗಳನ್ನು ಗುರುತಿಸಲಾಗಿವೆ. ಅವುಗಳಲ್ಲಿ ಕ್ರಮ ಸಂಖ್ಯೆ ೧೧ ರಲ್ಲಿ ದಾಸ ಮಾಲ ಮತ್ತು ೨೪ ರಲ್ಲಿ ಮಾಲ ದಾಸರಿ ದಾಖಲಿಸಲಾಗಿವೆ (ಸೈಯದ್ ಸಿರಾಜ್ ಉಲ್ ಹಸನ್:೧೯೮೯: ೪೨೯).

ಪ್ರಾರಂಭದ ವೈಷ್ಣವ ಧರ್ಮ ಸ್ವೀಕರಿಸಿದ ಆಂಧ್ರ ಪ್ರದೇಶದ ಚೆನ್ನಯ್ಯದಾಸು ಮತ್ತ ಮಾಲದಾಸರಿ ಎನ್ನುವವರಿಂದ ಈ ಸಮುದಾಯಕ್ಕೆ ಚೆನ್ನದಾಸರು ಎಂಬ ಹೆಸರು ಬಂದಿದ್ದು. ಈ ಹೆಸರಿನ ಸಮುದಾಯದವರು ಆಂಧ್ರ ಪ್ರದೇಶ ಕರ್ನಾಟಕ, ಮಹಾರಾಷ್ಟ್ರ ಮತ್ತು ಗುಜರಾತ ರಾಜ್ಯಗಳಲ್ಲಿ ನೆಲೆಸಿರುವವರು. ಭಾರತದ ಚೆನ್ನ ದಾಸರ ಮತ್ತು ಪರ್ಯಾಯ ಪದಗಳ ಲಿಂಗವಾರು ಜನಸಂಖ್ಯೆ ೧೮೮೧ರಲ್ಲಿ ದಾಸರಿ ಎಂಬ ಹೆಸರಿನಲ್ಲಿ ೪೩,೨೧೮ ಜನರನ್ನು ದಾಖಲಿಸಲಾಗಿದೆ. ಇದರಲ್ಲಿ ದಾಸರಿ ಮತ್ತು ದಾಸ್ರಿ ಸಮುದಾಯಗಳು ಸೇರಿರುವರು. ಮುಂಬೈ ಪ್ರಾಂತದಲ್ಲಿ ದಂಡಿಗಿ

ದಾಸ ಸಮುದಾಯ ೩೭೭ ಮತ್ತು ದೊಂಬದಾಸ ಸಮುದಾಯ ೧ ಎಂದು ದಾಖಲಿಸಲಾಗಿದೆ. ೨೦೦೧ರ ಜನಗಣತಿಯಲ್ಲಿ ಭಾರತದ ಚೆನ್ನ ದಾಸರ ಮತ್ತು ಪರ್ಯಾಯ ಪದಗಳ ಲಿಂಗವಾರು ಜನಸಂಖ್ಯೆ ೮೭,೮೦೨. ಇದರಲ್ಲಿ ಕರ್ನಾಟಕದ ಚೆನ್ನ ದಾಸರಲ್ಲಿ ೨೦೦೭ರ ಸಮೀಕ್ಷೆಯ ದೊಂಬಿದಾಸರು ಸೇರಿರುವರು (ಕೋಷ್ಟಕ : ೨.೧).

ಕೋಷ್ಟಕ : ೨.೧ ಭಾರತದ ಚೆನ್ನ ದಾಸರ ಮತ್ತು ಪರ್ಯಾಯ ಪದಗಳ ಲಿಂಗವಾರು ಜನಸಂಖ್ಯೆ (೨೦೦೧)

| ರಾಜ್ಯ | ಗಂಡು | ಹೆಣ್ಣು | ಒಟ್ಟು |
|---|---|---|---|
| ಆಂಧ್ರ ಪ್ರದೇಶ | ೧೪೨೯೯ | ೧೪೫೧೩ | ೨೮೮೧೨ |
| ಗುಜರಾತ | ೧೪ | ೭ | ೨೧ |
| ಕರ್ನಾಟಕ | ೨೯೧೫೫ | ೨೮೩೧೭ | ೫೭೪೭೨ |
| ಮಹಾರಾಷ್ಟ್ರ | ೭೭೯ | ೭೧೮ | ೧೪೯೭ |
| ಒಟ್ಟು | ೪೪೨೪೭ | ೪೩೫೫೫ | ೮೭೮೦೨ |

ವೃತ್ತಚಿತ್ರ: ೨.೧ ಭಾರತದ ಚೆನ್ನ ದಾಸರ ಮತ್ತು ಪರ್ಯಾಯ ಪದಗಳ

ಶೇಕಡವಾರು ಜನಸಂಖ್ಯೆ (೨೦೦೧)




## ಕರ್ನಾಟಕ ಚೆನ್ನ ದಾಸರು

ಕರ್ನಾಟಕದ ಮಟ್ಟಿಗೆ ಎಲ್ಲ ಜಿಲ್ಲೆಗಳಲ್ಲೂ ಕಂಡುಬರುವ ಚೆನ್ನ ದಾಸರು ಬೆಳಗಾವಿ, ಕೋಲಾರ, ಕೊಪ್ಪಳ, ಬಳ್ಳಾರಿ, ದಕ್ಷಿಣ ಕನ್ನಡ, ಬಿಜಾಪುರ, ದಾವಣಗೆರೆ, ಬಾಗಲಕೋಟೆ, ಉಡುಪಿ, ರಾಯಚೂರು ಜಿಲ್ಲೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದರೆ, ಬೆಂಗಳೂರು,

ಗದಗ, ಧಾರವಾಡ, ಜಿಲ್ಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಮತ್ತು ಶೇಷ ಜಿಲ್ಲೆಗಳಲ್ಲಿ ಚದುರಿದಂತೆ ಕಾಣಸಿಗುವವರು ಕರ್ನಾಟಕದಲ್ಲಿಯ ಇವರ ಸರಾಸರಿ ಕುಟುಂಬದ ಗಾತ್ರ ೪.೮೧ ಇರುವುದು (ಕೋಷ್ಟಕ:೨.೨).

ಕೋಷ್ಟಕ : ೨.೨ ಸಮೀಕ್ಷೆಗೊಳಪಟ್ಟ ಕರ್ನಾಟಕ ಚೆನ್ನ ದಾಸರ ಜಿಲ್ಲಾವಾರು ಕೌಟುಂಬಿಕ ಮತ್ತು ಲಿಂಗವಾರು ಜನಸಂಖ್ಯೆ (೨೦೦೭)

| ಜಿಲ್ಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಬಾಗಲಕೋಟೆ | ೩೦೪ | ೬೧೪ | ೬೫೬ | ೧೨೭೦ |
| ಬೆಂಗಳೂರು | ೮೧ | ೧೮೪ | ೧೭೬ | ೩೬೦ |
| ಬೆಳಗಾವಿ | ೧೪೦೬ | ೩೭೨೧ | ೩೨೮೮ | ೭೦೦೯ |
| ಬಳ್ಳಾರಿ | ೩೨೫ | ೮೫೯ | ೭೪೩ | ೧೬೦೨ |
| ಬಿಜಾಪುರ | ೨೭೭ | ೭೩೪ | ೭೦೪ | ೧೪೩೮ |
| ದಾವಣಗೆರೆ | ೧೭೦ | ೩೮೭ | ೩೮೧ | ೭೬೮ |
| ದಕ್ಷಿಣ ಕನ್ನಡ | ೩೧೩ | ೭೨೩ | ೭೧೩ | ೧೪೩೬ |
| ಧಾರವಾಡ | ೫೦ | ೧೧೫ | ೧೧೦ | ೨೨೫ |
| ಗದಗ | ೮೨ | ೨೧೭ | ೧೮೯ | ೪೦೬ |
| ಗುಲಬರ್ಗಾ | ೨೨೯ | ೫೯೯ | ೫೩೫ | ೧೧೩೪ |
| ಕೋಲಾರ | ೬೩೬ | ೧೫೫೬ | ೧೪೯೮ | ೩೦೫೪ |
| ಕೊಪ್ಪಳ | ೩೨೮ | ೮೮೪ | ೭೭೫ | ೧೬೫೯ |
| ರಾಯಚೂರು | ೧೬೮ | ೩೫೩ | ೩೩೮ | ೬೯೧ |
| ಉಡುಪಿ | ೧೫೨ | ೪೧೨ | ೩೮೫ | ೭೯೭ |
| ಒಟ್ಟು | ೪೫೨೧ | ೧೧೩೫೮ | ೧೦೪೯೮ | ೨೧೮೪೯ |

ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿಯ ಚೆನ್ನ ದಾಸರ್ ಸಮುದಾಯದ ಪರ್ಯಾಯ ಪದಗಳಾದ ಹೊಲೆಯ ದಾಸರ್, ಹೋಲೆಯ ದಾಸರಿ, ಮಾಲ ದಾಸರಿ ಅವರ ೨೦೦೧ ರ ಜನಗಣತಿ ಮತ್ತು ೨೦೦೭ರ ಸಮೀಕ್ಷೆಯ ದೊಂಬಿದಾಸ ಒಟ್ಟು ಜನಸಂಖ್ಯೆ ೫೭,೪೭೨. ಇವರ ಸರಾಸರಿ ಸಾಕ್ಷರತೆ ಪ್ರಮಾಣ ೪೭.೦೧ ಇರುವುದು (ಕೋಷ್ಟಕ:೨.೩).

ಕರ್ನಾಟಕ
ಚೆನ್ನದಾಸರ ಸಮುದಾಯದ ನೆಲೆಗಳು



ಕೋಷ್ಟಕ : ೨.೩

ಕರ್ನಾಟಕ ಚೆನ್ನ ದಾಸರ್ ಸಮುದಾಯದ ಪರ್ಯಾಯ ಪದಗಳ ಲಿಂಗವಾರು ಜನಸಂಖ್ಯೆ ಮತ್ತು ಸಾಕ್ಷರತೆ ಪ್ರಮಾಣ (೨೦೦೧ ಮತ್ತು ೨೦೦೭)

| ಸಮುದಾಯ | ಗಂಡು | ಹೆಣ್ಣು | ಒಟ್ಟು | ಸಾಕ್ಷರತೆ |
|---|---|---|---|---|
| ಚೆನ್ನ ದಾಸರ... | ೨೨,೫೧೬ | ೨೨,೦೩೫ | ೪೪,೫೫೧ | ೪೮.೨೬ |
| ಹೊಲೆಯ ದಾಸರಿ | ೫೨೯ | ೫೪೮ | ೧೦೭೭ | ೪೯.೨೪ |
| ಮಾಲ ದಾಸರಿ | ೧,೯೬೭ | ೧,೯೫೪ | ೩,೯೨೧ | ೫೪.೮೪ |
| ದೊಂಬಿದಾಸ (೨೦೦೭) | ೪೧೪೩ | ೩೭೮೦ | ೭೯೨೩ | ೩೫.೭೧ |
| ಒಟ್ಟು | ೨೯,೧೫೫ | ೨೮,೩೧೭ | ೫೭,೪೭೨ | ೪೭.೦೧ |

ಕರ್ನಾಟಕ ಗ್ರಾಮೀಣ ನಗರ ಚೆನ್ನ ದಾಸರು

ಕರ್ನಾಟಕ ರಾಜ್ಯದ ಚೆನ್ನದಾಸರ ಒಟ್ಟು ೨೧೮೪೯ ಜನಸಂಖ್ಯೆಯಲ್ಲಿ ಶೇಕಡ ೭೭.೪೩ ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರುವುದು ಈ ಸಮೀಕ್ಷೆಯಿಂದ ವೇದ್ಯವಾಗುತ್ತದೆ (ಕೋಷ್ಟಕ:೨.೪).

ಕೋಷ್ಟಕ :೨.೪ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಗ್ರಾಮೀಣ ಮತ್ತು ನಗರ ಜನಸಂಖ್ಯಾ ಪ್ರಮಾಣ (೨೦೦೭)

| ವಿವರ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಗ್ರಾಮೀಣ | ೩೪೪೪ | ೭೭.೪೬ | ೭೭.೪೦ | ೭೭.೪೩ |
| ನಗರ | ೧೦೭೮ | ೨೨.೫೪ | ೨೨.೬೦ | ೨೨.೫೭ |
| ಒಟ್ಟು | ೪೫೨೨ | ೧೦೦.೦೦ | ೧೦೦.೦೦ | ೧೦೦.೦೦ |

ವೃತ್ತಚಿತ್ರ: ೨.೨ ಚೆನ್ನ ದಾಸರ ಗ್ರಾಮೀಣ ಮತ್ತು ನಗರ ಕುಟುಂಬವಾರು ಪ್ರಮಾಣ (೨೦೦೭)



ಚೆನ್ನ ದಾಸರ ವಯೋಗುಂಪುವಾರು ಲಿಂಗವಾರು ಜನಸಂಖ್ಯೆ

ಕರ್ನಾಟಕ ರಾಜ್ಯದ ಚೆನ್ನ ದಾಸರ ಒಟ್ಟು ಜನಸಂಖ್ಯೆಯಲ್ಲಿ ಉಡುಪಿ ಜಿಲ್ಲೆಯನ್ನು ಹೊರತುಪಡಿಸಿ ೦-೪ ವಯೋಗುಂಪಿನವರು ಶೇಕಡ ೭.೭೧ರಷ್ಟು, ೫-೧೭ ವಯೋಗುಂಪಿನವರು ೩೧.೨೯ ರಷ್ಟು, ೧೮-೪೦ ವಯೋಗುಂಪಿನವರು ೪೨.೪೮ ರಷ್ಟು, ೪೧-೬೦ ವಯೋಗುಂಪಿನವರು ೧೩.೫೬ ರಷ್ಟು ಮತ್ತು ೬೦ ರ ಮೇಲ್ಪಟ್ಟವರು ೪.೯೬ ರಷ್ಟಿರುವರು. ಅಂದರೆ ಇವರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೪೩.೯೬ರಷ್ಟು ಆಶ್ರಿತ ಗುಂಪಿನವರಿದ್ದಾರೆ. ಇವರಲ್ಲಿ ಶೇಕಡ ೫೬.೦೪ರಷ್ಟು ಜನ ಕಾಯಕಾರ್ಹ ಗುಂಪಿರುವುದು (ಕೋಷ್ಟಕ: ೨.೫ ).

ಕೋಷ್ಟಕ: ೨.೫ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ವಯೋಗುಂಪುವಾರು ಲಿಂಗವಾರು ಜನಸಂಖ್ಯೆ (೨೦೦೭)

| ವಯಸ್ಸು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೪ | ೮೨೮ | ೭೯೪ | ೧೬೨೨ |
| ೫-೧೭ | ೩೫೧೧ | ೩೦೭೮ | ೬೫೮೯ |
| ೧೮-೪೦ | ೪೫೨೬ | ೪೪೧೭ | ೮೯೪೩ |
| ೪೧-೬೦ | ೧೫೨೫ | ೧೩೩೦ | ೨೮೫೫ |
| ೬೦+ | ೫೫೬ | ೪೮೭ | ೧೦೪೩ |

## ಲಿಂಗ ಅನುಪಾತ

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗ ಅನುಪಾತವಾಗಿರುತ್ತದೆ. ೨೦೦೧ ರ ಜನಗಣತಿಯ ಪ್ರಕಾರ ಕ್ರಮವಾಗಿ ಲಿಂಗ ಅನುಪಾತವು ಭಾರತದಲ್ಲಿ ೯೩೩, ಕರ್ನಾಟಕದಲ್ಲಿ ೯೬೫ ಇದ್ದರೆ ಕರ್ನಾಟಕದ ಚೆನ್ನದಾಸ ಸಮುದಾಯದ ಸರಾಸರಿ ಲಿಂಗ ಅನುಪಾತ ೯೨೩ ಇರುವುದು ಚಿಂತನೀಯವಾಗಿದೆ (ಕೋಷ್ಟಕ:೨.೪).

ಕೋಷ್ಟಕ : ೨.೬ ಚೆನ್ನದಾಸರ ಜಿಲ್ಲಾವಾರು ಲಿಂಗ ಅನುಪಾತ (೨೦೦೭)

| ಜಿಲ್ಲೆ | ಗಂಡು | ಹೆಣ್ಣು | ಲಿಂಗಾನುಪಾತ |
|---|---|---|---|
| ಬಾಗಲಕೋಟ | ೬೧೪ | ೬೫೬ | ೧೦೬೮ |
| ಬೆಂಗಳೂರು | ೧೮೪ | ೧೭೬ | ೯೫೬ |
| ಬೆಳಗಾವಿ | ೩೭೨೧ | ೩೨೮೮ | ೮೮೩ |
| ಬಳ್ಳಾರಿ | ೮೫೯ | ೭೪೩ | ೮೬೪ |
| ಬಿಜಾಪುರ | ೭೩೪ | ೭೦೪ | ೯೫೯ |

| | | | |
|---|---|---|---|
| ದಾವಣಗೆರೆ | ೩೮೭ | ೩೮೧ | ೯೮೪ |
| ದಕ್ಷಿಣ ಕನ್ನಡ | ೭೨೩ | ೭೧೩ | ೯೮೬ |
| ಧಾರವಾಡ | ೧೧೫ | ೧೧೦ | ೯೫೬ |
| ಗದಗ | ೨೧೭ | ೧೮೯ | ೮೭೦ |
| ಗುಲಬರ್ಗಾ | ೫೯೯ | ೫೩೫ | ೮೯೩ |
| ಕೋಲಾರ | ೧೫೫೬ | ೧೪೯೮ | ೯೬೨ |
| ಕೊಪ್ಪಳ | ೮೮೪ | ೭೭೫ | ೮೭೬ |
| ರಾಯಚೂರು | ೩೫೩ | ೩೩೮ | ೯೫೭ |
| ಉಡುಪಿ | ೪೧೨ | ೩೮೫ | ೯೩೪ |
| **ಒಟ್ಟು** | ೧೧೩೫೮ | ೧೦೪೯೮ | ೯೨೩ |

ಚೆನ್ನದಾಸರ ಲಿಂಗ ಅನುಪಾತವನ್ನು ಸರಿದೂಗಿಸಲು ವಿಶೇಷ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು ಅಗತ್ಯವಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ ರ ಸಮೀಕ್ಷೆಯಲ್ಲಿ ಕರ್ನಾಟಕ ರಾಜ್ಯದ ಚೆನ್ನದಾಸ ಸಮುದಾಯದ ಎಲ್ಲ ನೆಲೆಗಳ ಸಮೀಕ್ಷೆ ಸಾಧ್ಯವಾಗಿಲ್ಲ. ಉಳಿದ ನೆಲೆಗಳನ್ನು ಮಾಹಿತಿದಾರರಿಂದ ಕಲೆಹಾಕಲು ಪ್ರಯತ್ನಿಸಲಾಗಿದೆ.ನೆಲೆಗಳ ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

**ಪ್ರಸಾರ ನೆಲೆಗಳು**

ಈ ಸಮುದಾಯದ ಜನ ಈಗ ಎಲ್ಲ ಜಿಲ್ಲೆಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಈ ಸಮುದಾಯ, ಭಿಕ್ಷಾಟನೆ ಮತ್ತು ಕೆಲಸಗಳನ್ನರಸುತ್ತ ಬಹುತೇಕ ಎಲ್ಲ ಜಿಲ್ಲೆಗಳಿಗೂ ಹರಡಿಕೊಂಡಿದೆ. ಈ ಮೊದಲು ಧಾರ್ಮಿಕ ಕ್ರಿಯಾಚರಣೆಗಳ ಮೂಲಕ ಹಂಸನೂರ, ಕದರಮಂಡಲಗಿ, ಕಲ್ಲೋಳಿ, ಕನಕಗಿರಿ, ಬಯ್ಯಾಪುರ, ತುಳಸಿಗೇರಿ, ಕೊಟಬಾಗಿ, ಅರ್ಜುನವಾಡ, ಉದಗಟ್ಟಿ ಮುಂತಾದ ಕಡೆಗಳಲ್ಲಿ ವಲಸೆ ಬಂದು ನೆಲೆ ನಿಲ್ಲಲು ತೊಡಗಿತು. ಭಿಕ್ಷಾಟನೆಗೆ ಅನುಕೂಲವಿರುವ ಕೃಷಿ ಪ್ರದೇಶ ಹಾಗೂ ಮಳೆಗಾಲದ ಪ್ರದೇಶಗಳಿಗೆ ಈ ಸಮುದಾಯ ಮುಖ ಮಾಡಿರುವುದು ಕಂಡುಬರುತ್ತದೆ. ಎರಡನೆಯ ದಾಗಿ ಇವರ ಕಲೆಗಳಿಗೆ ಎಲ್ಲೆಲ್ಲಿ ಹೆಚ್ಚಿನ ಪ್ರೋತ್ಸಾಹ ಸಿಕ್ಕಿದೆಯೋ ಅಲ್ಲಲ್ಲಿ ನೆಲೆಯೂರಲು ಬಯಸಿದೆ.

**ವಲಸೆ ಸ್ಥಳೀಯ**

ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಕಂಡುಬರುವ ಈ ಸಮುದಾಯವು ಸ್ಥಳೀಯ ಮಟ್ಟದಲ್ಲಿ ನೀರಿಗೆ ಅನುಕೂಲವಿರುವ, ಭಿಕ್ಷಾಟನೆಗೆ ಪೂರಕವಾಗಿರುವ ನೆಲೆಗಳನ್ನು ವಾಸಕ್ಕೆ ಆಯ್ದುಕೊಂಡಿರುವುದು ಕಂಡುಬರುತ್ತದೆ. ಮುಂಚೆ ಅಲೆಮಾರಿಗಳಾಗಿದ್ದಾಗ ಈ ಸಮುದಾಯದ ನೆಲೆಯನ್ನರಸಿ ಗುಂಪು ಗುಂಪಾಗಿ ಹೋಗುತ್ತಿದ್ದರು. ಒಂದೊಂದು ಗುಂಪಿನಲ್ಲಿ ಕನಿಷ್ಟ ಐದಾರು ಕುಟುಂಬಗಳಾದರೂ ಇರುತ್ತಿದ್ದವು. ಆಗ ಊರ ಹೊರಗಿನ

ಬಯಲು, ದೊಡ್ಡ ಮರಗಳ ಗುಂಪಿನ ಕೆಳಗೆ ಗುಡಾರಗಳನ್ನು ಹಾಕಿಕೊಂಡು ನೆಲೆ ನಿಲ್ಲುತ್ತಿದ್ದರು. ಉಪಜೀವನಕ್ಕೆ ಅನುಕೂಲವಿದ್ದ ಪಕ್ಷದಲ್ಲಿ ಜಾಗದ ಯಜಮಾನನನ್ನು ಕೇಳಿ ಗುಡಿಸಲು ಹಾಕುತ್ತಿದ್ದರು. ಉಪಜೀವನಕ್ಕೆ ಭದ್ರತೆಯಿದೆ ಎಂದಾಗ ಒಂದೆಡೆ ನೆಲೆನಿಲ್ಲಲ್ಲು ಪ್ರತ್ಯೇಕ ಜಾಗವನ್ನರಸಿ ಗುಡಾರ, ಗುಡಿಸಲು ಹಾಕುತ್ತಿದ್ದರು. ಈ ಸಮುದಾಯ ವಾಸವಾಗಿರುವ ಕರ್ನಾಟಕದ ಯಾವುದೇ ಸ್ಥಳವನ್ನು ನೋಡಿದರೂ ಅವರು ಊರು ಬಿಟ್ಟು ದೂರದಲ್ಲಿ ಒಂದೇ ಕಡೆಗೆ ಗುಂಪಾಗಿ ವಾಸಿಸುತ್ತಿರುವುದು ಕಂಡುಬರುತ್ತದೆ. ಈ ಸಮುದಾಯ ಗ್ರಾಮೀಣ ಪ್ರದೇಶಗಳಲ್ಲೇ ಹೆಚ್ಚಾಗಿ ನೆಲೆನಿಂತಿದೆ. ಕೆಲಸ ಹುಡುಕಿ ಕೊಂಡು ಹೋದವರು ಮತ್ತು ನೌಕರಸ್ಥರು ಮಾತ್ರ ಪಟ್ಟಣಗಳಲ್ಲಿದ್ದಾರೆ. ಒಂದೆಡೆ ನೆಲೆನಿಂತವರು ತಂಡ ತಂಡವಾಗಿ ಮತ್ತೊಂದೆಡೆ ಹೋಗಿ ನಿಲ್ಲುವುದು ಈ ಸಮುದಾಯ ದಲ್ಲಿ ಸಾಮಾನ್ಯವಾಗಿತ್ತು. ಈಗ ಭಿಕ್ಷಾಟನೆ ಮತ್ತು ಅಲಂಕಾರ ವಸ್ತುಗಳ ಮಾರಾಟಕ್ಕೆ ಅನುಕೂಲ ಇಲ್ಲದ್ದರಿಂದ ಕೂಲಿ ಕೆಲಸಗಳಿಗೆ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಕೆಲವರು ಒಕ್ಕಲುತನಕ್ಕೆ ಮುಂದಾಗಿರುವರು, ಕಡಿಮೆಸಂಖ್ಯೆಯ ಕೆಲವರು ನೌಕರಿ ಮಾಡುತ್ತಿರುವರು, ಇನ್ನು ಕೆಲವರು ಸಣ್ಣಪುಟ್ಟ ವ್ಯಾಪಾರದಲ್ಲಿ ತೊಡಗಿ ಗ್ರಾಮಗಳೊಳಗೆ ನೆಲೆನಿಲ್ಲಲು ಮುಂದಾಗಿದ್ದಾರೆ.

ಸಾಮಾಜಿಕ ಹಿನ್ನೆಲೆ

ಭಾರತೀಯ ಸಮಾಜವು ಜಾತಿ ವ್ಯವಸ್ಥೆಯ ತಳಪಾಯದ ಮೇಲೆ ಕಟ್ಟಲ್ಪಟ್ಟಿದೆ. ಅದರಿಂದಾಗಿಯೇ ಬಹುಪಾಲು ಶ್ರಮಿಕ ವರ್ಗ ಒಂದಾಗಿ ಪುರೋಹಿತ ವ್ಯವಸ್ಥೆಯ ವಿರುದ್ಧ ಬಂಡೇಳಲು ಸಾಧ್ಯವಾಗಿಲ್ಲ. ಈ ಜಾತಿ ವ್ಯವಸ್ಥೆಯ ರಚನೆ ಸಮಾನಾಂತರದಲ್ಲಿ ಇರದೇ, ಒಂದರ ಮೇಲೊಂದು ಪಿರ್‍ಯಾಮಿಡ್ ಆಕೃತಿಯಲ್ಲಿದೆ. ಕೆಳಗಿರುವ ಸಮುದಾಯ ಗಳಿಗೆ ತಾವು ಮೇಲೆ ಹೊತ್ತುಕೊಂಡಿರುವ ಶೋಷಕ ವರ್ಗದಿಂದ ತಪ್ಪಿಸಿಕೊಳ್ಳಲು ಅಥವಾ ಮುಂದೆ ಹೋಗಲು ಸಾಧ್ಯವಿಲ್ಲ. ಅದು ಒಂದರ ಬದಿಗೆ ಮತ್ತೊಂದರಂತೆ ಸಮಾನಾಂತರದಲ್ಲಿದ್ದರೆ ಶಕ್ತಿ, ಯುಕ್ತಿಯಿದ್ದವರು ಹೇಗೆ ಬೇಕೊ ಹಾಗೆ ಚಲಿಸಬಹುದಿತ್ತು. ಇಲ್ಲಿ ಆ ವ್ಯವಸ್ಥೆಗೆ ಅವಕಾಶವೇ ಇಲ್ಲ.

ಅದೇ ರೀತಿ ಈ ಜಾತಿ ವ್ಯವಸ್ಥೆಗಿಂತ ಪೂರ್ವದಲ್ಲೇ ಈ ದೇಶದಲ್ಲಿ "ಪಣ" ಅಥವಾ ಪಣ ಕಟ್ಟು ಸಮಾಜ ಇತ್ತೆಂಬುದು ತಿಳಿದು ಬರುತ್ತದೆ. ಅದು ದಕ್ಷಿಣ ಭಾರತದ ಎಲ್ಲಾ ಕಡೆಯಲ್ಲೂ ಅಸ್ತಿತ್ವದಲ್ಲಿ ಇತ್ತೆಂದು ಭಾವಿಸಲಾಗಿದೆ. "ಈ ಭಿನ್ನತೆ ಮುಖ್ಯವಾಗಿ ಕುಶಲಕರ್ಮಿಗಳು ಮತ್ತು ವ್ಯಾಪಾರಿ ವರ್ಗಗಳ ನಡುವಿನ ಮೇಲರಿಮೆಗಾಗಿ ನಡೆದ ಹೋರಾಟವೆಂಬುದಾಗಿ ಅಬ್ಬೆದುಬಾಯ್ಸರವರು ಭಾವಿಸುತ್ತಾರೆ. ಆದರೆ ಪಣದ ಪಟ್ಟಿಯಲ್ಲಿ ಕೃಷಿಕರೂ ಇರುವುದರಿಂದ ಹೋರಾಟ ಕೇವಲ ವ್ಯಾಪಾರಿ ವರ್ಗ ಮತ್ತು ಕುಶಲ ಕರ್ಮಿಗಳ ನಡುವಿನದಾಗುವುದಿಲ್ಲ. ಅದಷ್ಟೇ ಅಲ್ಲದೇ ಎರಡೂ ಪಟ್ಟಿಯಲ್ಲಿ ವ್ಯಾಪಾರಿ ವರ್ಗ, ಕುಶಲಕರ್ಮಿಗಳು ಮತ್ತು ಕೃಷಿ ಮೂಲದ ಜನಾಂಗಗಳು ಬೆರೆತಿವೆ ಯಾದ್ದರಿಂದ ಹೋರಾಟದ ಸ್ವರೂಪ ಇಷ್ಟು ಸರಳ ವಿಂಗಡಣೆಯಲ್ಲಿ ಬಗೆಹರಿಯು

ವಂತಿಲ್ಲ" (ಕೋಲಾರ, ಲಕ್ಷ್ಮೀಪತಿ: ೧೯೯೩:೫೧). ಸಿ ಹಯವದನರಾವ ಹೇಳುವಂತೆ "ಒಂದು ನಂಬಿಕೆಯ ಪ್ರಕಾರ ಕಂಚಿಯ ಕಾಳಿ (ಕ್ರಿ.ಶ. ೭ ನೇ ಶತಮಾನದ ಹಿಂದಿನ ದೈವತಾ ಕಂಚಿಯ ಊರ ದೇವರು) ತನ್ನ ಬಲಗೈಯಲ್ಲಿ ಕೆಲಜಾತಿಗಳನ್ನು, ತನ್ನ ಎಡಗೈಯಲ್ಲಿ ಕೆಲಜಾತಿಗಳನ್ನು ಇಟ್ಟುಕೊಂಡು ತೂಗಿದ್ದರಿಂದ ಆಯಾಯ ಜಾತಿಗಳು ಎಡಗೈ ಮತ್ತು ಬಲಗೈ ಜಾತಿಗಳಾದವೆಂದು ಐತಿಹ್ಯ ತಿಳಿಸುತ್ತದೆ (ಭರಣಿ, ಸುಭಾಷ್:೨೦೦೫:೪೨). ಬಲಗೈ ಪಣಕಟ್ಟಿನಲ್ಲಿ ೧೮ ಜಾತಿಗಳು, ಎಡಗೈ ಪಣಕಟ್ಟಿನಲ್ಲಿ ೯ ಜಾತಿಗಳಿವೆ. ಬಲಗೈ ಪಣಕಟ್ಟಿನ ಕೆಳಗಡೆ ಕೊನೆಯಲ್ಲಿ ಹೊಲೆಯ ಜಾತಿ ಇದ್ದರೆ ಎಡಗೈ ಪಣಕಟ್ಟಿನ ಕೆಳಗಡೆ ಕೊನೆಯಲ್ಲಿ ಮಾದಿಗ ಜಾತಿಯಿದೆ. ಬಲಗೈ ಪಣದ ಹೊಲೆಯ ಜಾತಿ ಸಮುದಾಯ ಕೃಷಿಕ ವರ್ಗಗಳಲ್ಲಿದ್ದರೆ, ಎಡಗೈನ ಮಾದಿಗ ಸಮುದಾಯವು ಕುಶಲಕರ್ಮಿಗಳ ವರ್ಗಗಳಲ್ಲಿದೆ.

ಈ ಪಣಕಟ್ಟು ವ್ಯವಸ್ಥೆ ಅಸ್ತಿತ್ವಕ್ಕೆ ಬಂದ ಸಂದರ್ಭದಲ್ಲಿ ಚೆನ್ನದಾಸರ ಸಮುದಾಯ ಹುಟ್ಟಿಕೊಂಡಿತ್ತೋ ಇಲ್ಲವೋ ಎಂಬುದನ್ನು ತಿಳಿಯಲು ಲಿಖಿತ ಆಧಾರಗಳಿಲ್ಲ. ಐತಿಹ್ಯಗಳ ಆಧಾರದ ಹಿನ್ನೆಲೆಯಲ್ಲಿ 'ಹೊಲೆಯ' ಸಮುದಾಯದ ಒಂದು ಪಂಗಡದಿಂದ ಬೇರ್ಪಟ್ಟು ಈ ಸಮುದಾಯ ಹುಟ್ಟಿಕೊಂಡಿರುವ ಸಾಧ್ಯತೆಯಿದೆ. ಚೆನ್ನಯ್ಯದಾಸ, ಮಾಲದಾಸರಿ ಎನ್ನುವ ಐತಿಹ್ಯ ಪುರುಷರ ಕಥಾನಕಗಳು ಇದಕ್ಕೆ ಆಧಾರ ಒದಗಿಸುತ್ತವೆ. ಪ್ರಾರಂಭದ ವೈಷ್ಣವ ಧರ್ಮದ ಸುಧಾರಣಾವಾದಿ ಪ್ರಭಾವಕ್ಕೊಳಗಾಗಿ ಅನೇಕ ತಳವರ್ಗದ ಜಾತಿಗಳು ವೈಷ್ಣವ ಧರ್ಮವನ್ನು ಸ್ವೀಕರಿಸಿ ದಾಸರಾಗಿರುವ ದಾಖಲೆಗಳು ಸಾಕಷ್ಟಿವೆ. ಆ ಕಾಲದಲ್ಲಿ ಚೆನ್ನಯ್ಯದಾಸ ಮತ್ತು ಮಾಲದಾಸರಿಗಳು ವೈಷ್ಣವ ಮತೀಯರಾಗಿದ್ದಿರ ಬೇಕು. ಅವರ ತಲೆಮಾರಿನಿಂದಲೇ ಅದೇ ಹೆಸರಿನಿಂದ ಈ ಸಮುದಾಯಗಳು ಅಸ್ತಿತ್ವಕ್ಕೆ ಬಂದಿರುವ ಸಾಧ್ಯತೆಯಿದೆ. ಹೊಲೆ-ಮಾದಿಗರಾದಿ ಅಸ್ಪೃಶ್ಯ ಜಾತಿಗಳಿಗೆ ಅಸ್ಪೃಶ್ಯತೆಯ ಅವಮಾನದಿಂದ ಪಾರಾಗಲು ವೈಷ್ಣವ ಧರ್ಮ ಒಂದು ಸಾಧನವಾಗಿ ಕಂಡಿತು. ಹೀಗೆ ವೈಷ್ಣವ ಧರ್ಮಕ್ಕೆ ಬಂದ ಅಸ್ಪೃಶ್ಯ ಜಾತಿಗಳಿಗೆ ಬಹಳಷ್ಟು ಕಡೆ ಅಸ್ಪೃಶ್ಯತೆ ಆಚರಣೆಯಿಂದ ಸ್ವಲ್ಪಮಟ್ಟಿನ ಸಡಿಲತೆ ಸಾಧ್ಯವಾಯಿತು. ಆದರೆ, ಚೆನ್ನದಾಸರ, ಮಾಲದಾಸರಿ ಸಮುದಾಯಗಳು ಮೇಲ್ವರ್ಗಗಳಿಂದ ಕೀಳೆಂದು ಪರಿಗಣಿಸುವುದು ಮುಂದುವರಿದುದರಿಂದ ಅಸ್ಪೃಶ್ಯರಲ್ಲರೆಂದು ಪರಿಗಣಿತರಾಗಿಲ್ಲ. ೧೬ನೇ ಶತಮಾನದ ಸಂದರ್ಭದ ಹರಿದಾಸ ಪರಂಪರೆಗೆ ಸೇರಿದ ಹೊಲೆಯದಾಸರಿಗಳಿಗೆ ಅಸ್ಪೃಶ್ಯತೆ ಇದೆ. ಅದಕ್ಕೆ ಈ ಸಮುದಾಯದ ಹೆಸರಲ್ಲಿರುವ 'ಹೊಲೆಯ' ಪದ ಕಾರಣವಾಗಿರುಬುದು. ಈ ಕಾರಣಕ್ಕಾಗಿಯೇ ಅವರು ಇತ್ತೀಚೆಗೆ ಹೊಲೆಯ ಪದದ ಬದಲಿಗೆ ಚೆನ್ನದಾಸರ ಪದ ಬಳಸುತ್ತಿರುವುದು ಕಂಡು ಬರುತ್ತಿದೆ. ಈ ಹಿನ್ನಲೆಯಲ್ಲಿ ನೋಡಿದರೆ ಪಣಕಟ್ಟು ಸಮಾಜದಲ್ಲಿ ಚೆನ್ನದಾಸರ ಸಮುದಾಯಕ್ಕೆ ಪ್ರತ್ಯೇಕ ಅಸ್ತಿತ್ವವಿಲ್ಲ. ಈ ಸಮುದಾಯ ೧೧, ೧೨ನೇ ಶತಮಾನದ ನಂತರ ಪ್ರತ್ಯೇಕ ಬೆಳವಣಿಗೆಯಾಗಿದೆ.

"ಹೊಲೆಯರು: ಒಂದು ಅಧ್ಯಯನ" ಎಂಬ ವಿಷಯ ಕುರಿತು ಸಂಶೋಧನಾಧ್ಯಯನ

ಮಾಡಿರುವ ಎಸ್ ಆರ್ ಸಿಂಗೆಯವರು ತಮ್ಮ ಮಹಾಪ್ರಬಂಧದಲ್ಲಿ ಹೊಲೆಯರೆನ್ನುವ ಕಕ್ಷೆಯಲ್ಲಿ ಬರುವಂತಹ ಮತ್ತು ಅತ್ಯಂತ ನಿಕಟವಾಗಿರುವ ಕೆಲವು ಅಸ್ಪೃಶ್ಯ ಜಾತಿಗಳ ಪಟ್ಟಿಯನ್ನು ರೇಖಾಚಿತ್ರದಲ್ಲಿ ಒದಗಿಸಿದ್ದಾರೆ (ಸಿಂಗೆ, ಸಾ ರಾ: ೧೯೯೧:೭). ಅವುಗಳಲ್ಲಿ ಚೆನ್ನದಾಸರ ಸಮುದಾಯಕ್ಕೆ ಸೇರುವ ಹದಿನೆಂಟು ಉಪ ಪಂಗಡಗಳನ್ನು ಸೇರಿಸಿದ್ದಾರೆ (ಅನುಬಂಧ:೨).

ಚೆನ್ನದಾಸರ ಸಮುದಾಯದ ಸಾಮಾಜಿಕ ನಿಲುವು ಕುರಿತು ಹೆಚ್ಚಿನ ವಿವರಗಳು ಹಿಂದಿನ ಸಾಹಿತ್ಯ ಕೃತಿಗಳಲ್ಲಿ, ಶಾಸನಗಳಲ್ಲಿ ಲಭ್ಯವಿಲ್ಲ. ಬಹುಶಃ ಈ ಸಮುದಾಯ ಹನ್ನೆರಡರಿಂದ ಹದಿನೈದನೇಯ ಶತಮಾನದವರೆಗೆ ಆಂಧ್ರ ಪ್ರದೇಶದಲ್ಲಿ ನೆಲೆನಿಂತಿರುವುದಾಗಿದೆ. ಚನ್ನಯ್ಯದಾಸ ಮತ್ತು ಮಾಲದಾಸರಿ ಐತಿಹ್ಯಗಳು ಆಂಧ್ರ ಮೂಲದವೇ ಆಗಿವೆ. ಅದಕ್ಕಾಗಿ ಈ ಅವಧಿಯ ಸಾಹಿತ್ಯಕೃತಿ ಮತ್ತು ಶಾಸನಗಳಲ್ಲಿ ಉಲ್ಲೇಖಗಳು, ವಿವರಗಳು ಬಂದಿರಲಿಕ್ಕಿಲ್ಲ. ಅಲ್ಲದೆ ಈ ಸಂದರ್ಭದಲ್ಲಿ ವೀರಶೈವ ಚಳುವಳಿ ಕರ್ನಾಟಕದಲ್ಲಿ ಅದರಲ್ಲೂ ಕಲ್ಯಾಣ ಕರ್ನಾಟಕದಲ್ಲಿ ಪ್ರಬಲವಾಗಿತ್ತು, ಕವಿಗಳನೇಕರು ವೀರಶೈವರಾಗಿದ್ದುದ್ದು ಇದಕ್ಕೆ ಕಾರಣವಾಗಿರಲೂಬಹುದು.

೧೫, ೧೬ನೇ ಶತಮಾನದ ವೈಷ್ಣವ ಕೀರ್ತನಕಾರರಲ್ಲಿ ಹರಿದಾಸ ಭಿಕ್ಷಕರನ್ನು ವಿಡಂಬಿಸಲಾಗಿದೆ. ಇತರ ಕವಿಗಳು ಇವರನ್ನು ತಮ್ಮ ಕೃತಿಗಳಲ್ಲಿ ವಿವರಿಸಲಿಲ್ಲ, ಹೊಟ್ಟೆಪಾಡಿಗಾಗಿ ಈ ಸಮುದಾಯದವರು ಸಂಪ್ರದಾಯವಾದಿ ಹರಿದಾಸರ ನಿಯಮಗಳನ್ನು ಕಡೆಗಣಿಸುತ್ತಿದ್ದರು. ಹೀಗಾಗಿ ಈ ಸಮುದಾಯ ಕವಿಗಳ ಕೃತಿಗಳಲ್ಲಿ ಹೀನಾಯಕ್ಕೆ ಮಾತ್ರ ಈಡಾಗುವ ಪ್ರಸಂಗ ಒದಗಿತು ಎಂದು ಕೆಲವು ಕೀರ್ತನೆಗಳಲ್ಲಿ ಹೀಯಾಳಿಸಲಾಗಿದೆ. ಉದಾಹರಣೆಗೆ.

> ಗಡ್ಡ ಮೀಸೆ ಬೋಳಿಸಿಕೊಂಡು ಗೊಡ್ಡನಾಮವ ತೀಡಿಕೊಂಡು
> ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು
> ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಕೊಂಬ
> ಬಡ್ಡಿಧಗಡೀ ಮಕ್ಕಳಗಿನ್ನು ವೈಷ್ಣವ ಸಲ್ಲುವುದೇ? – (ಪುರಂದರದಾಸರು)
> ತಾಳ ದಂಡಿಗೆ ಶ್ರುತಿಮೇಳ ತಂಬೂರಿಯ ಹಿಡಿದುಕೊಂಡು
> ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ– (ಕನಕದಾಸರು)
>
> ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು
> ಗುಟ್ಟಿನಲಿ ಜಪಿಸುವ ಗುರುತರಿಯದೆ.
> ಕೆಟ್ಟಕೊಗನು ಕೂಗಿ ಹೊಟ್ಟೆಯನು ಹೊರೆವಂಥ
> ಪೊಟ್ಟೆ ಗುಡುಮಗಳೆಲ್ಲ ಪರಮ ವೈಷ್ಣವರೇ? –(ಕನಕದಾಸರು)

'ಇತಿಹಾಸ' ಭಾಗದಲ್ಲಿ ಹೇಳಿದಂತೆ ತಳವರ್ಗದಿಂದ ವೈಷ್ಣವ ಧರ್ಮಕ್ಕೆ ಸೇರ್ಪಡೆಯಾದ ಹಲವಾರು ಜಾತಿಗಳವರನ್ನು ಸಂಪ್ರದಾಯವಾದಿಗಳು ವೈಷ್ಣವ ಮತೀಯರನ್ನಾಗಲು ಬಿಡಲಿಲ್ಲ. ಈರೀತಿಯ ಸಮುದಾಯಗಳು ತಮ್ಮ ಮೂಲಕ್ಕೂ ಮರಳಲಾಗದೆ

ಮತ್ತು ವೈಷ್ಣವ ಉನ್ನತೀಕರಣಕ್ಕೂ ಎರಡೆ ಊಂಥ ವೃತಿಯನ್ನವಲಂಬಿಸಬೇಕಾಯಿತು. ವೈಷ್ಣವ ಧರ್ಮದ ಹೆಸರಲ್ಲಿ ತಾಳ,ದಂಡಿಗೆ, ಶಂಖ, ಜಾಗಟೆ, ಗೋಪಾಳಿ ಇತ್ಯಾದಿಯೊಡನೆ ಭಿಕ್ಷೆ ಬೇಡುವುದು ಅನಿವಾರ್ಯವಾಯಿತು.

ಇದೇ ರೀತಿಯ ಒಂದು ಆಧುನಿಕ ಘಟನೆಯನ್ನು ಕ್ಷೇತ್ರ ಕಾರ್ಯಕ್ಕೆ ಹೋದಾಗ ತಿಳಿದುಕೊಂಡೆನು. 'ಬಿಜಾಪೂರ ಜಿಲ್ಲೆಯ ಇಂಡೀ ತಾಲೂಕಿನ ಬಬಲಾದಿ ಗ್ರಾಮಕ್ಕೆ ಅದೇ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಅಂಬಲಜರಿ ಎನ್ನುವ ಊರಿನಿಂದ ವೈಷ್ಣವ ಧರ್ಮಗುರುಗಳು ವರ್ಷಕ್ಕೆ ಒಂದು ಸಾರಿ ಬರುತ್ತಿದ್ದರು. ಅವರು ಭಕ್ತಿ, ಶುಚಿ-ಶೀಲಗಳ ಕುರಿತು ದೀಕ್ಷೆ ಕೊಟ್ಟು ಉಪದೇಶ ಮಾಡಿ ಹಾಗೆ ನಡೆದುಕೊಳ್ಳುವಂತೆ ಹೇಳಿ ಹೋಗುತ್ತಿದ್ದರು. ಮರುವರ್ಷ ಆ ಹಳ್ಳಿಗೆ ಬಂದಾಗ ಅಲ್ಲಿಯ ಚೆನ್ನದಾಸರ ಸಮುದಾಯದವರು ಮಾಂಸ ಸೇವನೆ, ಸಾರಾಯಿ ಕುಡಿಯುವುದನ್ನು ಕೇಳಿ ತಿಳಿದು ಕೊಂಡು, ಗುರುಗಳು 'ನಿಮಗೆ ಇನ್ನು ಮೇಲೆ ಯಾವ ಸಂಸ್ಕಾರಕ್ಕು ದೀಕ್ಷೆಗೂ ಬರುವುದಿಲ್ಲ, ಉಪದೇಶ ನೀಡುವುದಿಲ್ಲ.' ಎಂದು ಹೇಳಿ ಬಹಿಷ್ಕಾರ ಹಾಕಿ ಹೋದರು. ಅಂದಿನಿಂದ ಆ ಭಾಗದ ದಶವಂತ ಸಮುದಾಯದವರು ಅಂಥ ದಿನಗಳಲ್ಲಿ ತಾವೇ ಜನಿವಾರ ಧರಿಸಿ ಆ ಕಾರ್ಯಚಟುವಟಿಕೆ ಜರುಗಿಸುವ ಗುರುಗಳ ಕಾರ್ಯ ಮಾಡುತ್ತಾರೆ. ಹೀಗಾಗಿ ಅವರಿಗೆ ಹರಿದಾಸರ ಮಾನ್ಯತೆ ತಪ್ಪಿಹೋಯಿತು ಎಂಬುದು ತಿಳಿದು ಬಂತು. ಈ ಸ್ಥಿತಿ ಈ ಸಮುದಾಯದ ಎಲ್ಲೆಡೆ ಇದೆ. ಸುಮಾರು ಮೂವತ್ತು ಮೂವತ್ತೈದು ವರ್ಷಗಳ ಹಿಂದೆ ಈ ಸಮುದಾಯದ ಗುರುಗಳು ಕುದುರೆಯ ಮೇಲೆ ಸಮುದಾಯಗಳಿದ್ದೆಡೆಗೆ ಬರುತ್ತಿದ್ದರು. ಈ ಮೇಲಿನ ಕಾರಣಕ್ಕಾಗಿ ಈಗ ಅವರು ಬರುವುದನ್ನು ನಿಲ್ಲಿಸಿದ್ದಾರೆ. ಇದು ಈ ಸಮುದಾಯದ ಸಮಾಜಿಕ ಮಟ್ಟವನ್ನು ಹೇಳುತ್ತದೆ.

ಈ ಸಮುದಾಯದ ವಾಸಸ್ಥಾನ ಬಹುತೇಕ ಕಡೆ ಊರ ಹೊರಭಾಗದಲ್ಲಿಯೇ ಇದೆ. ಪಟ್ಟಣಗಳಲ್ಲಿ ಈ ಸಮುದಾಯದವರು ಹೊಲಗೇರಿಯ ಪಕ್ಕದಲ್ಲಿದ್ದರೆ, ಗ್ರಾಮೀಣ ಪರಿಸರದಲ್ಲಿ ಊರ ಬಿಟ್ಟು ದೂರ ಗುಂಪಾಗಿ ವಾಸಿಸುತ್ತಾರೆ. ಇದಕ್ಕೆ ಅವರಿಗೆ ಅವರ ಸಮುದಾಯದ ಬಗೆಗಿರುವ ಕೀಳರಿಮೆ ಮತ್ತು ಕೆಲ ಪ್ರಾಣಿ ಪಕ್ಷಿಗಳ ಮಾಂಸಾಹಾರ ಸೇವನೆಯೇ ಕಾರಣವಾಗಿದೆ. ಒಟ್ಟಿನಲ್ಲಿ ಇವರು ಗುಂಪಾಗಿ ಊರ ಹೊರಗೆ ಒಂದೇ ಕಡೆಗೆ ವಾಸಿಸುವುದು ಹೆಚ್ಚಾಗಿ ಕಂಡು ಬರುತ್ತದೆ.

ಈ ಸಮುದಾಯದೊಳಗೆ ಅಸ್ಪೃಶ್ಯ ಸಮುದಾಯದಲ್ಲಿನ ಎಡ, ಬಲ ಇದ್ದಂತೆ, ಎಡ, ಬಲಗಳಿವೆ. ದೇವದಾಸಿ ಅಥವಾ ಬಸವಿ ಬಿಡುವ ಸಂಪ್ರದಾಯದವರನ್ನು ಎಡಗೈಯವರೆಂದೂ ಹಾಗಿಲ್ಲದವರು ಬಲಗೈನವರೆಂದೂ ಬಿಜಾಪೂರ ಮತ್ತು ಬಾಗಲಕೋಟ ಜಿಲ್ಲೆಗಳಲ್ಲಿ ಭಾವಿಸಲಾಗುತ್ತಿದೆ.

**ದೇವದಾಸಿ ಪದ್ಧತಿ:** ಬಿಜಾಪುರ ಮತ್ತು ಬಾಗಲಕೋಟ ಜಿಲ್ಲೆಯ ದೇವದಾಸಿಯರಲ್ಲಿ ನೂರಾರು ಸಂಖ್ಯೆಯಲ್ಲಿ ಚೆನ್ನದಾಸರ್ ಸಮುದಾಯದವರು ಕಾಣಸಿಗುವರು. ಬಹಳ

ಹಿಂದಿನಿಂದ ಈ ದೇವದಾಸಿ ಪದ್ಧತಿ ಈ ಪ್ರದೇಶದಲ್ಲಿ ಅಸ್ತಿತ್ವದಲ್ಲಿದೆ. ಈ ಅನಿಷ್ಟ ಪದ್ಧತಿ ಯಾಕೆ ಶುರುವಾಯಿತು ಅಂದ್ರೆ ಕಿತ್ತು ತಿನ್ನುವ ಕ್ರೂರ ಬಡತನ, ಹಾಗೂ ದೇವರ ಬಗ್ಗೆ ಇವರಿಗಿದ್ದ ಭಯ ಮತ್ತು  ಮೂಢ ನಂಬಿಕೆಗಳು. ಸಾಮಾನ್ಯವಾಗಿ ಎಲ್ಲಮ್ಮನ ಹೆಸರಿನಲ್ಲಿ ಮತ್ತು ಬೇರೆ ದೇವರ ಹೆಸರಿನಲ್ಲಿ ದೇವದಾಸಿಯರನ್ನು ಬಿಡುವ ಪದ್ಧತಿ ಕಾಣುತ್ತೇವೆ.

ಬಾಗಲಕೋಟೆಯ ಸಮೀಪ ಇರುವ "ಶ್ರೀ ಆಂಜನೇಯ ಸ್ವಾಮಿ, ಶ್ರೀ ಕ್ಷೇತ್ರ ತುಳಿಸಿಗೇರಿ" ಈ ಭಾಗದ ದಾಸ ಸಮುದಾಯಕ್ಕೆ ಪುಣ್ಯಕ್ಷೇತ್ರ, ಪ್ರತಿ ವರ್ಷ ನಡೆಯುವ ಜಾತ್ರೆ ಸಮಾರಂಭದಲ್ಲಿ ಈ ಸುತ್ತಲಿನ ಚೆನ್ನದಾಸರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿ ನೆರೆಯುತ್ತಾರೆ. ತುಳಸಿಗೇರಿ ಹನುಮಂತನ ಹೆಸರಿನಲ್ಲಿಯೇ ಹೆಣ್ಣುಮಕ್ಕಳನ್ನು ದೇವದಾಸಿಯನ್ನಾಗಿ ಬಿಡುವ ಸಂಪ್ರದಾಯವಿದೆ.

ಇತ್ತೀಚೆಗೆ ಯುವಕರಿಗೆ ಈ ಬಗ್ಗೆ ತಿಳುವಳಿಕೆ ಬಂದಿದ್ದು ಈ ಅನಿಷ್ಠ ಪದ್ಧತಿಯನ್ನು ಕೊನೆಗಾಣಿಸಲು ಪ್ರಯತ್ನಿಸುತ್ತಿದ್ದಾರೆ. ಕಳೆದ ಹತ್ತು ವರ್ಷಗಳಿಂದ ಈ ಪದ್ಧತಿ ಕಡಿಮೆಯಾಗುತ್ತಿದೆ ಎನ್ನುತ್ತಾರೆ. ಆದರೆ ಗುಪ್ತಗಾಮಿನಿಯಾಗಿ ಇನ್ನೂ ಈ ಪದ್ಧತಿ ಜೀವಂತವಾಗಿ ಮುಂದುವರಿಯುವ ಲಕ್ಷಣಗಳು ಕಾಣಿಸುತ್ತಿವೆ. ಈ ತಲೆಮಾರಿನ ಯುವಕರು ತಮ್ಮನ್ನು ತಾವು ದೇವದಾಸಿಯರ ಸಂತಾನ ಎಂದು ಗುರುತಿಸಿಕೊಳ್ಳುವುದು ತೀರ ಅವಮಾನಕರ ಸಂಗತಿ ಎಂದು ಭಾವಿಸಿದ್ದಾರೆ.

ಚೆನ್ನದಾಸರ ಸಮುದಾಯದ ಜನತೆಗೆ ಎಷ್ಟು ಕೀಳರಿಮೆ ಕಾಡಿದೆಯೆಂದರೆ, ಒಂದೊಂದು ಸಾರಿ ತಾವು ಮೇಲ್ಜಾತಿಯವರೆಂದು ತಮಗಿಂತ ಮೇಲಿರುವ ಜಾತಿಯ ಹೆಸರನ್ನು ಸುಳ್ಳಾಗಿ ಹೇಳಿದ್ದಾರೆ. "ಕೆಲವರು ಈ ಹಿಂದಿನ ಗಾಯನ, ನಾಟಕ, ಭಿಕ್ಷಾಟನೆಗಳನ್ನು ಬಿಟ್ಟು ನಾಗರಿಕ ವಾತಾವರಣಕ್ಕೆ ಹೊಂದಿಕೊಳ್ಳುತ್ತಿರುವುದಲ್ಲದ ತಮ್ಮನ್ನು ದೊಂಬಿದಾಸರೆಂದು ಕರೆದು ಕೊಳ್ಳುವುದು ಅವಮಾನವೆಂದು ಭಾವಿಸಿ, ತಾವು ತೆಲುಗು ಜಂಗಮರು ಅಥವಾ ತೆಲಗು ಬಣಜಿಗರೆಂದು ಹೇಳಿಕೊಳ್ಳುತ್ತಿದ್ದಾರೆ. ಹೀಗಿದ್ದರೂ ಬಹಳಷ್ಟು ಜನ ಊರಿಂದ ಊರಿಗೆ ವಲಸೆ ಹೋಗಿ ನಾಟಕಮಾಡಿ ಗ್ರಾಮದ ಜನರನ್ನು ರಂಜಿಸುತ್ತಿದ್ದಾರೆ". ಹೀಗೆ ತೆಲುಗು ಬಣಜಿಗರೆಂದು ಸುಳ್ಳು ಹೇಳಿರುವುದರ ಪರಿಣಾಮ ದಾಖಲೆಗಳಲ್ಲಿ ಹಾಗೇ ಬರೆಯಲ್ಪಟ್ಟಿರುವ ವೈಚಿತ್ರ್ಯವೂ ನಡೆದಿದೆ. "ತೆಲುಗು ಬಣಜಿಗರ ಜಾತಿ ರಿವಾಜು ಕೈಫಿಯತ್ತು"(ಕಲಬುರ್ಗಿ, ಎಂ ಎಂ:೧೯೮೪:೫೭೯)ವಿನಲ್ಲಿ ಕೊಟ್ಟಿರುವ ಬೆಡಗುಗಳಲ್ಲಿ ಕಟ್ಲಾಲೋರು, ಚಿಕ್ಕಾತಕಲೋರು, ಮಿಂಡಗೊಂದಿಲಿಯವರು, ಸಣ್ಣಕ್ಕಿಯೋರು, ಮುತ್ಲಾಲೋರು –ಇತ್ಯಾದಿ ಬೆಡಗುಗಳು ಚೆನ್ನದಾಸರ ಸಮುದಾಯದ ಬೆಡಗುಗಳೇ ಆಗಿವೆ. ಬಿಜಾಪೂರ ಜಿಲ್ಲೆಯಲ್ಲಿ ಈ ಸಮುದಾಯದವರು ಕಬ್ಬಲಿಗ ಅಥವಾ ಕಬ್ಬೇರ ಕುಲದವರೆಂದು ಹೇಳಿಕೊಂಡಿರುವುದೂ ಇದೆ. ಬಿಜಾಪೂರ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ತೆಲುಗು ಮಾತನಾಡುವ ಈ ಸಮುದಾಯದವರು ಇತ್ತಿತ್ತಲಾಗಿ ತೆಲುಗನ್ನೇ ಮರೆತಿದ್ದಾರೆ. ಆ ಸಮುದಾಯದ

ಹಿರಿಯರನ್ನು ಕೇಳಿದರೆ ತೆಲುಗು ಮಾತನಾಡುವುದರಿಂದ ಜಾತಿ ಹೇಳುವ ಪ್ರಸಂಗ ಬರುತ್ತದೆ ಅದಕ್ಕಾಗಿ ಅದನ್ನು ಮಾತನಾಡುವದನ್ನೇ ಕಡಿಮೆ ಮಾಡಿದ್ದೇವೆ. ಹೊಸ ಪೀಳಿಗೆ ಆಸಕ್ತಿ ತೋರುತ್ತಿಲ್ಲ ಎನ್ನುತ್ತಾರೆ.

ಸಾಮಾಜಿಕ ಅಸಮಾನತೆಯ ಬೇಗುದಿಯಲ್ಲಿ ಬೇಯುತ್ತಿರುವ ಈ ಸಮುದಾಯ ತನ್ನ ಶೋಷಣೆಯನ್ನು ನೀಗಲು ದಲಿತ ಸಂಘಟನೆಗಳ ಹೋರಾಟಗಳಲ್ಲಿ ತೊಡಗಿಸಿ ಕೊಂಡಿದೆ. ಸಮುದಾಯದ ಮಟ್ಟದಲ್ಲಿ ಈ ಹಿಂದೆ ಸಂಘಟನೆಗಳು ಇರಲಿಲ್ಲ. ತಾವು ಅಲ್ಪಸಂಖ್ಯಾತರೆಂಬ ಭಾವನೆ ಹಾಗೂ ನಾವು ಸಂಘಟಿತರಾದರೆ ಮೇಲ್ಜಾತಿಯವರು ತಮ್ಮನ್ನು ಇನ್ನಷ್ಟು ಕೆಟ್ಟದೃಷ್ಟಿಯಿಂದ ನೋಡಿಕೊಳ್ಳಬಹುದೆಂಬ ಭಯ ಇವರದಾಗಿತ್ತು. ಈಗ್ಗೆ ಕೆಲವು ವರ್ಷಗಳಿಂದ ಸಂಘಟನೆಯ ಕುರಿತು ಅರಿವು ಮೂಡುತ್ತಿದೆ. ಯುವ ಸಮುದಾಯ ತಾವಷ್ಟೇ ಸಂಘಟಿತರಾದರೆ ಹೋರಾಟಕ್ಕೆ ಬಲ ಬರಲಿಕ್ಕಿಲ್ಲವೆಂದು ಭಾವಿಸಿ ವಿವಿಧ ದಲಿತ ಸಂಘಟನೆಗಳೊಂದಿಗೆ ಒಂದಾಗುತ್ತಿದ್ದಾರೆ. ಆ ಮುಖೇನ ಸಾಮಾಜಿಕ ಎಚ್ಚರ ಮತ್ತು ಶೈಕ್ಷಣಿಕ ಅಧ್ಯತೆಗೆ ಗಮನ ಕೊಡುತ್ತಿದೆ. ಅಸ್ಪೃಶ್ಯ ಸಮುದಾಯ ಗಳ ನಡುವೆ ಈ ಸಮುದಾಯ ತನ್ನ ಒಂಟಿತನವನ್ನು ನೀಗಿಕೊಳ್ಳುತ್ತಿದೆ. ಇತ್ತೀಚಿಗೆ ದಲಿತ ಸಂಘಟನೆಗಳು ಈ ಸಮುದಾಯದ ಸಹಭಾಗಿತ್ವ ಪಡೆಯುತ್ತ ಅವರನ್ನು ಪ್ರಗತಿಯತ್ತ ಮುನ್ನಡೆಸಲು ಸಹಕರಿಸುತ್ತಿವೆ. ಈ ಸಮುದಾಯದ ಪ್ರತಿಭಾವಂತರು ಮತ್ತು ಪ್ರಜ್ಞಾವಂತರೂ ಕೂಡ ದಲಿತ ಸಂಘಟನೆಗಳ ಹೋರಾಟದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಿದ್ದಾರೆ.

ಈ ಸಮುದಾಯದ ಕುರಿತು ವಿಶೇಷ ಅಧ್ಯಯನ ಮಾಡಿರುವ ಎಲ್ಲಾ ವಿದ್ವಾಂಸರೂ ಇವರನ್ನು 'ವೈಷ್ಣವ ಭಿಕ್ಷುಕರು' ಎಂದು ಹೇಳಿರುವರು. ಚೆನ್ನದಾಸರ ಸಮುದಾಯದ ಎಲ್ಲ ಪಂಗಡದವರೂ ವೈಷ್ಣವ ಬಿಕ್ಷುಕರೇ ಆಗಿದ್ದಾರೆ. ಆದರೆ ಎಲ್ಲ ವೈಷ್ಣವ ಬಿಕ್ಷುಕರು ಚೆನ್ನದಾಸರ ಸಮುದಾಯದವರಲ್ಲ. ಬೇರೆ ಬೇರೆ ಸಮುದಾಯಗಳಿಂದ ಅಂದರೆ, ಬಲಿಜ, ಬಣಜಿಗ, ಒಕ್ಕಲಿಗ, ಕುರುಬ, ಬೇಡ, ಉಪ್ಪಾರ, ಬೆಸ್ತ ಮುಂತಾದ ಸಮುದಾಯ ಗಳಿಂದ ಬಂದವರು ತಮ್ಮ ವೈವಾಹಿಕ ಕೊಡು_ಕೊಳುವಿಕೆಗಳನ್ನೆಲ್ಲ ತಮ್ಮ ಮೂಲ ಜಾತಿಗಳೊಂದಿಗೆ ಮಾಡುತ್ತಿದ್ದಾರೆ. ಮತ್ತು ತಮ್ಮ ಮೂಲ ಜಾತಿಯ ಆಚರಣೆ ಸಂಪ್ರದಾಯಗಳನ್ನು ಉಳಿಸಿಕೊಂಡಿದ್ದಾರೆ.

೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

ಈ ಸಮುದಾಯ ಪಟ್ಟಣಗಳಲ್ಲಿರಲಿ ಇಲ್ಲವೆ ಹಳ್ಳಿಯಲ್ಲಿರಲಿ ಚೆನ್ನದಾಸರೇ ಪ್ರತ್ಯೇಕವಾಗಿ ವಾಸ ಮಾಡುವುದು ಸರ್ವೇ ಸಾಮಾನ್ಯ. ಮೂಲತಃ ಅಲೆಮಾರಿಗಳಾಗಿದ್ದ ಇವರಿಗೆ ಪ್ರತ್ಯೇಕ ನೆಲೆಯೆಂಬುದೇ ಇರಲಿಲ್ಲ. ಉಪಜೀವನಕ್ಕೆ ಅನುಕೂಲವನ್ನರಸಿ ಅಲೆದಾಡುತ್ತಿದ್ದ ಇವರು ಈ ಮೊದಲು ಆಯಾ ಊರಿನ ಪಾಳುಗುಡಿ, ಊರ ಹೊರಗಿನ ಬಯಲು, ಸಮಾಜ ಮಂದಿರ, ಕೆಳವರ್ಗದವರ ದೇವಸ್ಥಾನಗಳ ಮುಂಭಾಗದ ಬಯಲು, ಊರಿನ ಪ್ರಮುಖರ ಹೊರ ಜಗಲಿ ಹೀಗೆ ನೀರು ಅನುಕೂಲವಿರುವ ಇಂಥ ಯಾವುದೇ ಸ್ಥಳಗಳಲ್ಲಿ ಗುಡಾರ ಹಾಕಿಕೊಂಡು ಇರುತ್ತಿದ್ದರು.

ತದನಂತರದಲ್ಲಿ ಊರ ಹೊರಗಿನ ಅರಣ್ಯ ಇಲ್ಲವೆ ಸರಕಾರದ ಬರಕಾಸ್ತು ಜಾಗಗಳಲ್ಲಿ ಬಹಳ ದಿನಗಳವರೆಗೆ ನೆಲೆ ನಿಲ್ಲುವುದು, ಇದ್ದ ಜಾಗದಿಂದ ಬೇರೆಡೆಗೆ ಸುಗ್ಗಿ ಅಥವಾ ತಿರುಪೆಗೆ ಹೋಗಿ ಮತ್ತೇ ಅಲ್ಲಿಗೇ ಬಂದು ವಾಸ ಮಾಡುವುದು ರೂಢಿಯಾಯಿತು. ಕೆಲವು ಕಡೆ ಊರ ಪ್ರಮುಖರು ತಮ್ಮಲ್ಲಿನ ಕೆಲಸ ಕಾರ್ಯಗಳಿಗೆ ಇವರನ್ನು ಬಳಸಿ ಕೊಳ್ಳುವ ದೆಸೆಯಿಂದ ಪ್ರತ್ಯೇಕ ಜಾಗ ಮಾಡಿಕೊಟ್ಟು ವಾಸಕ್ಕೆ ಅನುಕೂಲ ಕಲ್ಪಿಸಿರುವುದಿದೆ. ಒಟ್ಟಾರೆ ಇವರ ವಾಸಸ್ಥಾನ ಊರ ಹೊರಗೆ ಪ್ರತ್ಯೇಕ ಜಾಗದಲ್ಲಿ ಒಂದೇ ಕಡೆಗೆ ಗುಂಪುಗೂಡಿ ಇರುವುದು. ಆ ಜಾಗ ನೀರಿಗೆ ಅನುಕೂಲವಾಗಿರು ವಂಥಾದ್ದಾಗಿರುತ್ತದೆ.

**ಮನೆ, ಕೊಟ್ಟಿಗೆ, ಗಲ್ಲಿ, ಮೇರೆ**

ಈ ಸಮುದಾಯದಲ್ಲಿ ಅಲೆಮಾರಿ, ಅರೆ ಅಲೆಮಾರಿ ಮತ್ತೆ ಸ್ಥಿರವಾಸಿಗಳು ಹೀಗೆ ಮೂರು ಬಗೆಯ ಜೀವನವಿಧಾನದವರಿದ್ದಾರೆ. ಮೀಸಲಾತಿಯ ಲಾಭ ಮತ್ತು ಸರಕಾರದ ವಿವಿಧ ಯೋಜನೆಗಳ ನೆರವಿನಿಂದ ಈ ಸಮುದಾಯ ಈಗೀಗ ಅರೆ ಅಲೆಮಾರಿಗಳಾಗಿ ಪರಿವರ್ತಿತರಾಗುತ್ತಿದ್ದಾರೆ. ಹೀಗೆ ನೆಲೆ ನಿಂತಿರುವ ಈ ಸಮುದಾಯದವರು ಸ್ವಂತ ಜಾಗವನ್ನು ಹಾಗೂ ಸರಕಾರದಿಂದ ಮಂಜೂರಾದ ಜಾಗವನ್ನು ವಾಸಕ್ಕೆ ಬಳಸಿ ಕೊಳ್ಳುತ್ತಿದ್ದಾರೆ. ಇನ್ನೂ ಪ್ರತಿಶತ ಹದಿನೈದರಷ್ಟು ಜನ ಅಲೆಮಾರಿ ಜೀವನ ಸಾಗಿರುತ್ತಿರು ವುದು ಕಂಡು ಬರುತ್ತದೆ. ವಸತಿಗೆ ಜಾಗವಿದ್ದವರು ಎಲ್ಲರೂ ಮನೆಗಳನ್ನು ಹೊಂದಿಲ್ಲ. ಕೆಲವರು ಸ್ವಂತ ಮನೆಗಳನ್ನು, ಇನ್ನೂ ಕೆಲವರು ಸರಕಾರಿ ಮನೆಗಳನ್ನು ಹೊಂದಿದ್ದಾರೆ ಇನ್ನು ಕೆಲವರು ಗುಡಿಸಲು ಗುಡಾರುಗಳಲ್ಲಿ ವಾಸಿಸುತ್ತಿದ್ದಾರೆ.

ಗುಡಾರ/ಗುಡಿಸಲು : ಚಳಿ, ಮಳೆ, ಬಿಸಿಲಿಗಾಗಿ ಇರುವ ಸ್ಥಳದಲ್ಲೇ ಗುಡಾರ ಹಾಕಿಕೊಳ್ಳುವುದು ಸರಳ ಸಾಧನವಾಗಿದೆ. ಹಿಂದೆ-ಮುಂದೆ ಎರಡು ಮೇಟಿಗಳನ್ನು ಮಣ್ಣಲ್ಲಿ ಕುಣಿ ತೆಗೆದು ಗಟ್ಟಿಯಾಗಿ ನಿಲ್ಲಿಸುತ್ತಾರೆ. ಅವುಗಳೆರಡರ ಕವಲಿಗೆ ಉದ್ದವಾಗಿ ಬಿದಿರಿನ ಗಳ ಹಾಕುವ ಅಥವಾ ಗಟ್ಟಿ ಹಗ್ಗವನ್ನು ಆಧಾರವಾಗಿ ಕಟ್ಟುತ್ತಾರೆ. ನಂತರದಲ್ಲಿ ನಾರಿನಿಂದ ಇಲ್ಲವೆ ಕೌದಿ ಹೊಲಿಯುವ ದೋತರ ಇಲ್ಲವೆ ಸೀರೆ ದಡಿಯಿಂದ ನೇಯ್ದು ಹಗ್ಗಗಳನ್ನು ಮೇಲಿನ ಬಿದಿರಿನ ಗಳ ಅಥವಾ ಹಗ್ಗಕ್ಕೆ ಕಟ್ಟಿ ಎರಡೂ ಬದಿಗೆ ಇಂಗ್ಲೀಷಿನ A ಆಕಾರದಲ್ಲಿ ಕಟ್ಟಿಗೆ ಇಲ್ಲವೆ ಕಬ್ಬಿಣದ ಗೂಟಗಳಿಗೆ ಬಿಗಿದು ಕಟ್ಟುತ್ತಾರೆ. ಅದರ ಮೇಲೆ ಹರಿದದೋತರ ಮತ್ತು ಸೀರೆಯಿಂದ ಮಾಡಿದ ಗುಡಾರವನ್ನು ಹೊದಿಸಿ ಬಿಗಿದ ಹಗ್ಗಗಳಿಗೆ ಹೊಂದಿಸಿ ಹೊಲಿದು ಕಟ್ಟುತ್ತಾರೆ. ಸಾಮಾನ್ಯವಾಗಿ ಈ ಗುಡಾರಗಳು ಮೂರರಿಂದ ಐದು ಅಡಿ ಎತ್ತರ, ಐದರಿಂದ ಏಳು ಅಡಿಗಳ ಉದ್ದದಲ್ಲಿ ಹಾಗೂ ಮೂರರಿಂದ ಐದು ಅಡಿಗಳಷ್ಟು ಅಗಲ ಇರುತ್ತವೆ. ಗುಡಿಸಲುಗಳಾದರೆ ಇವುಗಳ ಎರಡು ಪಟ್ಟು ಎತ್ತರ, ಉದ್ದ ಮತ್ತು ಅಗಲ ಇರುತ್ತವೆ. ಗುಡಿಸಲು ಹೊದಿಕೆಗೆ ಕಬ್ಬಿನ ರವದಿ, ಹಳ್ಳದಲ್ಲಿನ ಆಪು, ಇಲ್ಲವೆ ಭತ್ತದ, ಇತರ ಹುಲ್ಲನ್ನು ಮೇಲೆ ಹಾಕಿ ಬಿಗಿದಿರುತ್ತಾರೆ.

ಸರ್ವೇ ಸಾಮಾನ್ಯವಾಗಿ ಗುಡಾರ ಅಥವಾ ಗುಡಿಸಿಲಿನ ಬಾಗಿಲುಗಳು ಉತ್ತರ ಮತ್ತು ಪೂರ್ವ ಮುಖವಾಗಿರುತ್ತವೆ. ದಕ್ಷಿಣ ದಿಕ್ಕಿಗೆ ಮುಖ ಮಾಡಿರುವುದಿಲ್ಲ. ಆ ದಿಕ್ಕನ್ನು ರಾಕ್ಷಸರ ದಿಕ್ಕು ಎಂದು ಕರೆಯುತ್ತಾರೆ. ಗುಡಾರ/ಗುಡಿಸಿಲಿನ ಮುಖ ಆ ದಿಕ್ಕಿಗಿದ್ದರೆ ಕಂಟಕಗಳೆಂದು ಭಾವಿಸುತ್ತಾರೆ. ಬೆಳಗಾವಿಯ ಕಡೆಗೆ ಮನೆಯ ಅಥವಾ ವಾಸವಿರುವ ಜಾಗದ ಎದುರಿಗೆ ಹುಣಸೆಗಿಡ ಇರಬಾರದೆಂಬ ನಂಬಿಕೆಯಿದೆ. ತೆಲುಗಿನಲ್ಲಿ ಅದಕ್ಕೆ 'ಚಿಂತಕಾಯಚೆಟ್ಟು' ಎಂದು ಹುಣಸೆ ಮರಕ್ಕೆ ಹೆಸರಿದ್ದು ಅದರಿಂದ ಸದಾಕಾಲ ಚಿಂತೆಯಲ್ಲಿರಬೇಕಾಗುತ್ತದೆಂದು ನಂಬುತ್ತಾರೆ.

ಗುಡಾರಗಳಲ್ಲಿ ಅಡುಗೆ ಮತ್ತು ಸ್ನಾನವನ್ನು ಮಾಡಲು ಸಾಧ್ಯವಾಗುವುದಿಲ್ಲವಾದ್ದರಿಂದ ಒಲೆಯನ್ನು ಗುಡಾರದ ಮುಂದೆ, ಸ್ನಾನವನ್ನು ಗುಡಾರದ ಎಡಬದಿಗೆ ತೆಂಗಿನ ಗರಿ, ಗೋಣಿಚೀಲ ಇತ್ಯಾದಿ ಬಳಸಿ ಮರೆಮಾಡಿರುತ್ತಾರೆ. ಸಾಮಾನ್ಯವಾಗಿ ಹೆಣ್ಣು ಮಕ್ಕಳು ಮರೆಮಾಡಿದ ಜಾಗದಲ್ಲಿ ಸ್ನಾನ ಮಾಡುತ್ತಾರೆ. ಗಂಡಸರು ಬಯಲು ಜಾಗದಲ್ಲಿ ಸ್ನಾನ ಮಾಡುತ್ತಾರೆ. ದೇವರಿಗೆಂದು ಪ್ರತ್ಯೇಕ ಸ್ಥಳವಿರುವುದಿಲ್ಲವಾದ್ದರಿಂದ ದೇವರ, ಹಿರಿಯರ ಚಿಕ್ಕ ಚಿಕ್ಕ ಮೂರ್ತಿಗಳನ್ನು ಒಂದು ಕೈಚೀಲ ಇಲ್ಲವೆ ಪವಿತ್ರವಾದ ಬಟ್ಟೆಯಲ್ಲಿ ಕಟ್ಟಿ ಗುಡಾರದ ಒಳಭಾಗದಲ್ಲಿ ಮೇಟಿಯ ಕಂಬಕ್ಕೆ ನೇತು ಹಾಕುತ್ತಾರೆ. ಜಾತ್ರೆ-ಹಬ್ಬಗಳ ಸಂದರ್ಭದಲ್ಲಿ ಮಾತ್ರ ತೆಗೆದು ನೆಲಸಾರಿಸಿ ಪೂಜಾ ವಿಧಿಗಳನ್ನು ನೆರವೇರಿಸಿ ಚೀಲದಲ್ಲಿ ತುಂಬಿ ಮತ್ತೆ ಅಲ್ಲಿಯೇ ನೇತು ಹಾಕುತ್ತಾರೆ.

ಗುಡಿಸಲುಗಳಲ್ಲಿ ಅಡುಗೆಗೆ ಮತ್ತು ಸ್ನಾನಕ್ಕೆ ಜಾಗ ಮಾಡಿಟ್ಟುಕೊಂಡಿರುತ್ತಾರೆ. ಗುಡಿಸಲಿನಲ್ಲಿ ಎರಡು ಭಾಗಗಳಿರುತ್ತವೆ. ಬಾಗಿಲ ಬಳಿಯ ಅರ್ಧಭಾಗ ಮಲಗಲು ಮತ್ತು ಆಡು, ಕುರಿ ಇದ್ದರೆ ಒಳಗೆ ಕಟ್ಟಲು ಜಾಗ ಬಿಟ್ಟಿದ್ದರೆ, ಒಳಗಡೆಯ ಅರ್ಧದಲ್ಲಿ

ಪೂರ್ವಭಾಗದ ಮಧ್ಯದಲ್ಲಿ ಒಲೆ ಇದ್ದರೆ, ಗುಡಿಸಲ ಹಿಂಬದಿಯ ಅದೇ ಮೂಲೆಗೆ ಬಚ್ಚಲಿರುತ್ತದೆ. ಅದರ ವಿರುದ್ಧ ದಿಕ್ಕಿನಲ್ಲಿ ದೇವರನ್ನಿಡಲು ಮಣ್ಣಿನ ಕಟ್ಟೆ ಇರುತ್ತದೆ. ಅದರ ಮಗ್ಗಲು ಪಾತ್ರೆ ಕಾಳು–ಕಡಿ ಇಡಲು ಜಾಗ ಬಳಸಿಕೊಳ್ಳುತ್ತಾರೆ. ಗುಡಿಸಲುಗಳ ಬಾಗಿಲು ಪೂರ್ವ ಅಥವಾ ಉತ್ತರ ದಿಕ್ಕಿಗಿದ್ದರೂ ಎಡಗಡೆಯ ಭಾಗದಲ್ಲಿಯೇ ಹೆಚ್ಚಾಗಿ ಬಾಗಿಲಿರುತ್ತದೆ. ಬಾಗಿಲಿಗೆ ಕಟ್ಟಿಗೆಯ ಹೊಸಿಲು ಇದ್ದು ಅದನ್ನು ಮಂಗಳವಾರ ಮತ್ತು ಶುಕ್ರವಾರ ತಮ್ಮ ಹೆಣ್ಣು ದೇವತೆಯಾದ ದುರುಗಮ್ಮ, ಯಲ್ಲಮ್ಮ, ಹುಲಿಗೆಮ್ಮ, ಮರುಗಮ್ಮ ದೇವತೆಗಳ ಹೆಸರಲ್ಲಿ ಕುಂಕುಮ–ಭಂಡಾರ ಹಚ್ಚಿ ಪೂಜಿಸುತ್ತಾರೆ. ಹೊಸಿಲನ್ನು ತುಳಿಯಲು ನಿಷೇಧವಿದೆ. ತಾವು ಸಾಕಿದ ಪ್ರಾಣಿಗಳನ್ನು ಮನೆಯ ಎದುರಿಗೆ ಗೂಟ ಬಡಿದು ಕಟ್ಟುತ್ತಾರೆ. ಅನುಕೂಲವಿದ್ದವರು ಪ್ರಾಣಿಗಳಿಗೆ ನೆರಳು ಮಾಡಲು ಚಪ್ಪರ ಹಾಕಿರುತ್ತಾರೆ.

ಮನೆ : ಮನೆಯ ವಾಸ್ತು ಕೂಡ ಇದಕ್ಕಿಂತ ಭಿನ್ನವೇನಲ್ಲ. ಆದರೆ ಶಿಸ್ತುಬದ್ಧವಾಗಿ ರುತ್ತದೆ. ಅಡುಗೆ ಕೋಣೆ ಮತ್ತು ಬಚ್ಚಲು ವಿಶೇಷವಾಗಿ ಮನೆಯ ಬಲಗಡೆಯ ಹಿಂಬಾಗದೊಳಗಡೆಯೇ ಇರುತ್ತವೆ. ಗುಡಿಸಲಿಗಿರುವ ಒಳರಚನೆಯೇ ಮನೆಗಿರುತ್ತದೆ. ದೇವರ ಪೂಜೆಗೆ ಕಟ್ಟೆಯ ಬದಲಿಗೆ ಮಾಡುಗಳನ್ನು ಮಾಡಲಾಗಿರುತ್ತದೆ. ಆ ಮಾಡಿಗೆ ಹೊಂದಿಕೊಂಡು ಎರಡೂ ಕಡೆಗೆ ಗೂಟಗಳಿರುತ್ತವೆ. ದೇವರಿಗೆ ಸಂಬಂಧಿಸಿದ ವಸ್ತು ಗಳನ್ನೂ ಆ ಗೂಟಗಳಿಗೆ ತೂಗು ಹಾಕಲಾಗುತ್ತದೆ. ಅನುಕೂಲವಿದ್ದವರಲ್ಲಿ ಬೀಸುವ ಕಲ್ಲು, ಕುಟ್ಟುವ ಒಳಕಲ್ಲನ್ನು ಮುಂಬಾಗಿಲ ಬಳಿಯ ಕೋಣೆಯಲ್ಲಿರುತ್ತವೆ. ತಾವು ಬಳಸುವುದಲ್ಲದೆ ಇತರರು ಬಂದರೆ ಅವನ್ನು ಬಳಕೆಗೆ ಕೊಡಬೇಕಾಗುತ್ತದೆ. ಆದುದರಿಂದ ಬಾಗಿಲ ಸಮೀಪ ಒಳಗಡೆ ಅವುಗಳ ನೆಲದಲ್ಲಿ ಕೂಡ್ರಿಸಿರುತ್ತಾರೆ.

**ಕೊಟ್ಟಿಗೆ :** ತಮ್ಮ ಆದಾಯಕ್ಕಾಗಿ ಕೋಳಿ, ಆಡು, ಕುರಿ, ಎಮ್ಮೆ, ಆಕಳು, ಸಾಕುವುದು ಸಾಮಾನ್ಯ. ಗುಡಾರ–ಗುಡಿಸಲುಗಳ ಮುಂದೆಯೇ ಈ ಪ್ರಾಣಿಗಳನ್ನು ಕಟ್ಟುವ, ಕೋಳಿ ಗೂಡನ್ನು ಇಡುವ ವ್ಯವಸ್ಥೆ ಇರುತ್ತದೆ. ಬಾಗಿಲ ಮುಂದಿದ್ದರೆ ರಕ್ಷಣೆ ಮಾಡಲು ಅನುಕೂಲ. ಕುಂತರೂ ಮಲಗಿದರೂ ಅವರು ಕಣ್ಣೆದುರಿಗಿರುತ್ತವೆ. ಬಾಗಿಲ ಎಡಕ್ಕೋ ಬಲಕ್ಕೋ ಸ್ವಲ್ಪ ಬದಿಗೆ ಸರಿಸಿ ಕಟ್ಟುತ್ತಾರೆ. ಮುಂದೆ ಸ್ವಲ್ಪ ದೂರದಲ್ಲಿ ಒಂದು ಚಿಕ್ಕ ಹೊಂಡ ತೆಗೆದು ತಿಪ್ಪೆ ಮಾಡಿರುತ್ತಾರೆ. ಒಲೆಯಬೂದಿ, ಪ್ರಾಣಿಗಳ ಸೆಗಣಿ ಪ್ರಾಣಿಗಳು ತಿಂದು ಉಳಿಸಿದ ಮೇವಿನ ಗಲೀಜು ಈ ತಿಪ್ಪೆಯಲ್ಲಿ ಹಾಕಿ ಗೊಬ್ಬರ ಮಾಡುತ್ತಾರೆ. ಕೆಲವರು ಮನೆಯ ಹಿಂಬಾಗದಲ್ಲಿ ಮಾಡುತ್ತಾರಾದರೂ ನೋಡುವ ಮತ್ತು ಎತ್ತಿ ಹಾಕುವ ದೃಷ್ಟಿಯಿಂದ ಮನೆಯ ಅಂಗಳದ ಮುಂದೆಯೇ ತಿಪ್ಪೆ ಗುಂಡಿಯನ್ನೂ ಮಾಡಿರುತ್ತಾರೆ. ಈ ತಿಪ್ಪೆಯ ಗೊಬ್ಬರವನ್ನು ಮಾರಿ ಆದಾಯವನ್ನು ಹೆಚ್ಚಿಸಿಕೊಳ್ಳುತ್ತಾರೆ.

ಕರ್ನಾಟಕ ಚೆನ್ನ ದಾಸರಲ್ಲಿ ಸುಮಾರು ಶೇಕಡ ೫೦ ರಷ್ಟು ಕುಟುಂಬಗಳಿಗೆ ಭದ್ರವಾದ ಮನೆಗಳಿಲ್ಲ. ಇವರಲ್ಲಿ ಬಹುತೇಕರು ಅಲೆಮಾರಿ ಜೀವನ ಸಾಗಿಸುವರು. ಇವರ ವಾಸದ ವಿವರ ಹೀಗಿದೆ.

ಕೋಷ್ಟಕ: ೩.೧ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಮನೆಗಳ ಸ್ವರೂಪ (೨೦೦೭)

| ಮನೆಗಳ ಮಾದರಿ | ಕುಟುಂಬ | ಶೇಕಡ |
|---|---|---|
| ಗುಡಾರ | ೩೫೬ | ೮.೦೯ |
| ಗುಡಿಸಲು | ೧೪೧೫ | ೩೨.೩೮ |
| ತಗಡು ಮನೆ | ೯೭ | ೨.೨೨ |
| ಮಾಳಿಗೆ ಮನೆ | ೨೦೨ | ೪.೬೨ |
| ಆರ್ ಸಿ ಸಿ ಮನೆ | ೨೫೦ | ೫.೭೨ |
| ಆಶ್ರಯ ಮನೆ | ೪೯೭ | ೧೧.೩೭ |
| ಹೆಂಚಿನ ಮನೆ | ೧೧೮೫ | ೨೭.೧೨ |
| ಬಾಡಿಗೆ ಮನೆ | ೩೬೭ | ೮.೪೦ |
| ಒಟ್ಟು | ೪೩೬೯ | ೧೦೦.೦೦ |

**ಗಲ್ಲಿ ಮತ್ತು ಮೇರೆ :** ಸಾಮಾನ್ಯವಾಗಿ ಊರು ಬಿಟ್ಟು ದೂರವೇ ಗುಂಪು ಗುಂಪಾಗಿ ಈ ಸಮುದಾಯ ವಾಸಿಸುತ್ತಿರುವುದರಿಂದಾಗಿ ಬೇರೆಯವರು ಇವರನ್ನು ಗುರುತಿಸುವುದು, ದಾಸರ ಗುಡಾರಗಳು, ದಾಸರ ಗುಡಿಸಲುಗಳು, ದಾಸರ ವಠಾರ, ದಾಸರ ತೋಟ (ಕೊಂಪೆ ಅಥವಾ ಕೊಪ್ಪಲು) ಎಂದು. ವಿಶೇಷವಾಗಿ ಮನೆಗಳಾಗಲೀ, ಗುಡಿಸಲುಗಳಾಗಲೀ ಸಾಲಾಗಿ ಇರುತ್ತವೆ. ಮತ್ತು ಬಾಗಿಲುಗಳೂ ಕೂಡ ಒಂದೇ ದಿಕ್ಕಿಗಿರುತ್ತವೆ. ಎರಡೆರಡು ಸಾಲುಗಳಿದ್ದರೆ ದಕ್ಷಿಣ ಮತ್ತು ಪಶ್ಚಿಮಕ್ಕೆ ಹೊರತುಪಡಿಸಿ ಉತ್ತರಕ್ಕೆ ಇಲ್ಲವೆ ಪೂರ್ವಕ್ಕೆ ಮುಖ ಮಾಡಿರುತ್ತವೆ. ಎಷ್ಟೋ ಸಾರಿ ಇವರದೇ ಒಂದು ಊರಾಗುವಷ್ಟು ಮನೆ ಅಥವಾ ಗುಡಿಸಲುಗಳಿರುತ್ತವೆ.

ಚಿತ್ರ: ೩.೧. ಚೆನ್ನ ದಾಸರ ಮನೆಗಳ ಸ್ವರೂಪ (೨೦೦೭)



ಊರಿನ ಸಮೀಪದಲ್ಲಿದ್ದರೆ ಹೊಲ–ಮಾದಿಗರ ಕೇರಿಗಳ ತರುವಾಯ ವಾಸಸ್ಥಾನ ವಿರುತ್ತದೆ. ಪಟ್ಟಣ ಮತ್ತು ನಗರಗಳಲ್ಲಿ ಇವರು ಇರುವುದು ಕಡಿಮೆಯಾದರೂ ಒಂದೇ ಕಡೆಗೆ ವಾಸವಾಗಿರುತ್ತಾರೆ. ಅಲ್ಲಿ ದಾಸರ ಓಣಿ, ದಾಸರ ಗಲ್ಲಿ ಎಂದು ಕರೆಯುತ್ತಾರೆ. ಉದಾಹರಣೆಗೆ ಗದಗ, ರಾಯಚೂರು, ಹುಬ್ಬಳ್ಳಿ, ದಾವಣಗೆರೆ ಇತ್ಯಾದಿ ಕೆಲವು ಪ್ರದೇಶಗಳನ್ನು ಹೆಸರಿಸಬಹುದು. ಅಲ್ಲಿ ಅವರದೇ ಆದ ಸಮಾಜ ಮಂದಿರ, ದೇವಸ್ಥಾನ, ನೀರಿನ ವ್ಯವಸ್ಥೆ ಇರುತ್ತದೆ. ಇತ್ತೀಚೆಗೆ ಶೈಕ್ಷಣಿಕ ಅರಿವಿನಿಂದಾಗಿ, ಜಾಗೃತರಾಗಿ ಸಂಘಟನೆ ಮಾಡಿಕೊಂಡು ಆ ಪ್ರದೇಶದ ಪ್ರವೇಶ ಜಾಗದಲ್ಲಿ ತಮ್ಮ ಸಂಘ ಮತ್ತು ಓಣಿಯ ನಾಮಫಲಕ ಹಾಕಿಕೊಳ್ಳತೊಡಗಿದ್ದಾರೆ.

### ಕ್ರಿಯಾ ವಿಧಿಯ ಸ್ಥಳಾವರಣ

ಕ್ರಿಯಾವಿಧಿಯ ಸ್ಥಳಾವರಣವನ್ನು ಮೂರು ಹಂತಗಳಲ್ಲಿ ವಿಭಾಗಿಸಬಹುದು. ಮೊದಲನೆಯದಾಗಿ ನಿತ್ಯ ಬದುಕಿಗೆ ಸಂಬಂಧಿಸಿದ ಸ್ಥಳಾವರಣ, ಎರಡನೆಯದಾಗಿ ಹುಟ್ಟು ಸಾವುಗಳಂತಹ ಆಚರಣೆಗಳಲ್ಲಿ ಮೈಲಿಗೆ ಉಂಟಾಗುತ್ತದೆ ಎಂದು ಭಾವಿಸ ಲಾಗುತ್ತದೆ. ಆ ಮೈಲಿಗೆಯ ವೇಳೆ ನಡೆಸುವ ಕ್ರಿಯಾವಿಧಿಯ ಸ್ಥಳಾವರಣ, ಮೂರನೆಯ ದಾಗಿ ದೈವಗಳಿಗೆ ಸಂಬಂಧಿಸಿದಂತೆ ನಡೆಸುವ ಸ್ಥಳಾವರಣ.

ನಿತ್ಯ ಬದುಕಿನಲ್ಲಿ ಅಡುಗೆ, ಊಟ, ವಾಸ, ಇತ್ಯಾದಿಗಳನ್ನು ನಡೆಸಲು ಒಂದು ನಿರ್ದಿಷ್ಟವಾದ ಸ್ಥಳವನ್ನು ಗುರುತಿಸಿಕೊಂಡಿರುತ್ತಾರೆ. ಅಲೆಮಾರಿಗಳಿಗೆ ಒಂದು ನಿರ್ದಿಷ್ಟ ವಾದ ಸ್ಥಳವಿಲ್ಲದಿದ್ದರೂ ಅಲೆಮಾರಿತನದಲ್ಲಿ ತಾತ್ಕಾಲಿಕವಾಗಿ ನೆಲೆಸಿದ ಜಾಗವೇ ಸ್ಥಳಾವರಣವಾಗಿರುತ್ತದೆ.

ಹೆಣ್ಣು ಮೈನೆರೆದಾಗ ಮನೆಯೊಳಗೆ ಹೆಣ್ಣನ್ನು ಸೇರಿಸದೆ ಗುಡಾರ ಅಥವಾ ಮನೆಯ ಮೂಲೆಯನ್ನು ಮಾತ್ರ ಬಳಸಿಕೊಳ್ಳುತ್ತಾರೆ. ಹಾಗೇ ಸಾವಿಗೆ ಸಂಬಂಧಿಸಿದ ಆಚರಣೆಗಳು ಕೆಲವು ಮನೆಯೊಳಗೆ ನಡೆದರೆ ಕೆಲವು ಸ್ಮಶಾನದಲ್ಲಿ ನಡೆಯುತ್ತವೆ. ಮೈಲಿಗೆ ಸಂದರ್ಭದಲ್ಲಿ ನಡೆಸಬಹುದಾದ ಕ್ರಿಯಾವಿಧಿಗಳು ಆಯಾ ವಿಧಿ ನಿಷೇಧಗಳಿಗೆ ಸಂಬಂಧಿಸಿದಂತೆ ಸ್ಥಳಾವರಣವನ್ನು ರೂಪಿಸಿಕೊಳ್ಳುತ್ತವೆ.

ದೈವಗಳಿಗೆ ಸಂಬಂಧಿಸಿದಂತೆ ಮನೆಯೊಳಗಿನಂತೆ ಮನೆಯ ಹೊರಭಾಗದಲ್ಲಿ ಕೇರಿಯ ಒಂದು ಕಡೆ ದೇವತೆಗಳನ್ನು ಪ್ರತಿಷ್ಠಾಪಿಸಿಕೊಳ್ಳುವುದುಂಟು. ಸಾಮಾನ್ಯವಾಗಿ ಅಲೆಮಾರಿಗಳಾದ ಚೆನ್ನದಾಸರು ತಾವು ನೆಲೆನಿಂತ ಜೀವನಾವಸ್ಥೆ ಸ್ಥಳಾವರಣವಾಗಿ ರೂಪಿಸಿಕೊಳ್ಳಬಲ್ಲರು.

ಕೆಲವು ದೇವರುಗಳ ದೇವಸ್ಥಾನಗಳು ದೂರವಿರುವುದರಿಂದ ವರ್ಷಕ್ಕೊಮ್ಮೆ ಇಲ್ಲವೆ ಮೂರು ವರ್ಷಕ್ಕೊಮ್ಮೆ ಅಲ್ಲಿಗೆ ಹೋಗಿ ದರುಶನ ಪಡೆದು ಹರಕೆ ಸಲ್ಲಿಸಿ ಬರುತ್ತಾರೆ. ಉಳಿದ ಸಂದರ್ಭಗಳಲ್ಲಿ ಮನೆಯಲ್ಲಿ ಮತ್ತು ತಮ್ಮ ವಸತಿ ಪ್ರದೇಶದಲ್ಲಿ ಆ ಆಚರಣೆ ನೆರವೇರಿಸುತ್ತಾರೆ. ಮನೆಯಲ್ಲಿ ಚಿಕ್ಕ ಚಿಕ್ಕ ಮೂರ್ತಿಗಳನ್ನು ಅಕ್ಕಸಾಲಿಗರಿಂದ ಮಾಡಿಸಿ ತಂದಿರುತ್ತಾರೆ. ಇವನ್ನು, ದೇವರ, ಹಿರಿಯರ ರೂಪವೆಂದೂ ಕರೆಯುತ್ತಾರೆ. ಮನೆಯಲ್ಲಿ

ನೆಲಸಾರಿಸಿ, ಕಟ್ಟೆ ಇದ್ದರೆ ಕಟ್ಟೆ ಸಾರಿಸಿ ಪೂಜಿಸುತ್ತಾರೆ. ಆಚರಣೆಗಳನ್ನು ಮಾತ್ರ ಸಾಮೂಹಿಕವಾಗಿ ವಸತಿ ಪ್ರದೇಶದ ಕೇಂದ್ರ ಸ್ಥಳದಲ್ಲಿ ನೆರವೇರಿಸುತ್ತಾರೆ. ವಿಶೇಷವಾಗಿ ಅವರಿರುವ ವಸತಿ ಪ್ರದೇಶದ ಮಧ್ಯದಲ್ಲಿ ಇಲ್ಲವೆ ಪಶ್ಚಿಮ ಭಾಗದಲ್ಲಿ ಹೆಣ್ಣು ದೇವರ ಗುಡಿ ಇರುತ್ತದೆ. ಆ ಗುಡಿಯ ಸುತ್ತ ೨೦ ರಿಂದ ೨೫ ಅಡಿಗಳಾಚೆಯಷ್ಟು ವಿಶಾಲ ಜಾಗವನ್ನು ದೇವರಗುಡಿಗಾಗಿ ಬಿಟ್ಟಿರುತ್ತಾರೆ. ಗುಡಿಯ ಎದುರಿಗೆ ಮಾತ್ರ ಹೆಚ್ಚಿನ ಅಂಗಳವಿರುತ್ತದೆ. ದೇವತೆಗೆ ಪ್ರದಕ್ಷಿಣೆ ಹಾಕಲು, ಪ್ರಾಣಿಬಲಿ ಕೊಡಲು ಯಾವುದೇ ಅಡಚಣೆ ಅಥವಾ ದಟ್ಟಣೆಯಾಗದಂತೆ ಹೆಚ್ಚಿನ ಜಾಗವಿರುತ್ತದೆ. ಇಲ್ಲಿ ಜಾತ್ರೆ ಮತ್ತು ಹರಕೆಯ ದಿನ ಸಾಮೂಹಿಕ ಭೋಜನ ವ್ಯವಸ್ಥೆಯೂ ನಡೆಯುತ್ತದೆ. ಮಂಗಳವಾರ ಮತ್ತು ಶುಕ್ರವಾರ ಈ ದೇವತೆಗಳ ವಾರವಿರುವುದರಿಂದ ಆ ಸಂದರ್ಭದಲ್ಲಿ ಶುಚಿತ್ವವನ್ನು ಪಾಲಿಸಲಾಗುತ್ತದೆ. ಕುಟುಂಬದ ಯಾವುದೇ ಸಮಾರಂಭಕ್ಕೂ ಈ ದೇವತೆಯ ಸಂಬಂಧ ಇದ್ದೇ ಇರುತ್ತದೆ.

**ಬ್ರಹ್ಮಾಂಡದ ಪರಿಕಲ್ಪನೆ :** ವಿಶ್ವದ ಅನೇಕ ವಿದ್ಯಾಮಾನಗಳ ಬಗ್ಗೆ ಸಮುದಾಯಗಳು ತಮ್ಮದೇ ಆದ ಕಲ್ಪನೆಗಳನ್ನು ಕಟ್ಟಿಕೊಂಡು ಬಂದಿವೆ. ಖಗೋಳ, ಸೂರ್ಯ, ಚಂದ್ರ ನಕ್ಷತ್ರ ಹೀಗೆ ಅನೇಕ ಬ್ರಹ್ಮಾಂಡದ ಅಂಶಗಳ ಬಗ್ಗೆ ಕಥೆಗಳನ್ನು ಮೌಖಿಕವಾಗಿ ಸೃಷ್ಟಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ಕಾಲ್ಪನಿಕ ಕಥೆಗಳನ್ನು ಖಗೋಳ ವಿದ್ಯಾಮಾನ ಗಳಿಗೆ ಹೊಂದುವಂತೆ ತಮಗೆ ತಿಳಿದ ನೆಲೆಗಟ್ಟಿನಲ್ಲಿ ಸೃಷ್ಟಿಸುತ್ತಾ ಬಂದರು. ಚೆನ್ನದಾಸರ ಸಮುದಾಯವು ಕೂಡ ಬ್ರಹ್ಮಾಂಡದ ಪರಿಕಲ್ಪನೆಗಳನ್ನು ತನ್ನದೇ ಆದ ನೆಲೆಯಲ್ಲಿ ಕಂಡುಕೊಂಡಿದೆ ಈ ಸಮುದಾಯದ ಹಿರಿಯರು ಕಟ್ಟಿಕೊಂಡ ಕಥೆಗಳಲ್ಲಿ ಕೆಲವನ್ನು ನೋಡಬಹುದು.

**ಚೆನ್ನಮ್ಮನ ದಂಡಿ (ಕೋಳಿಮರಿಗಳು):** ಒಂದು ಊರಿನಲ್ಲಿ ಒಬ್ಬ ಪತಿವ್ರತೆ ಇದ್ದಳು. ತನ್ನ ಗಂಡನನ್ನೇ ದೇವರೆಂದು ತಿಳಿದು ಸುಖವಾಗಿದ್ದಳು. ಸಮಾಜದಲ್ಲಿ ಒಳ್ಳೆಯ ಹೆಸರನ್ನು ಗಳಿಸಿದಳು. ಇದನ್ನು ಸಹಿಸದ ಕೆಲವರು ಇವರ ದಾಂಪತ್ಯವನ್ನು ಮುರಿಯಲು ಯೋಚಿಸಿದರು. ಇವರ ನೈತಿಕ ಮಟ್ಟವನ್ನು ಕುಸಿಯುವಂತೆ ಮಾಡಬೇಕೆಂದು ಯೋಚಿಸಿ ಆಕೆಯ ಬಗ್ಗೆ ಇಲ್ಲಸಲ್ಲದ ನುಡಿಗಳನ್ನು ಹೇಳುತ್ತಾರೆ. ಅಪಮಾನವಾಗುವಂತೆ ಬಗೆ ಬಗೆಯಾಗಿ ನಿಂದಿಸುತ್ತಾರೆ. ಇದನ್ನು ಕೇಳಿಸಿಕೊಂಡ ಆಕೆ ಗಂಡನಲ್ಲಿಗೆ ಬಂದು 'ನೀನೆ ದೇವರೆಂದು ನಂಬಿರುವ ನನಗೆ ಈ ಅಪವಾದ ಸಹಿಸಲು ಆಗುವುದಿಲ್ಲ, ಏನು ಮಾಡಲಿ' ಎಂದು ಕೇಳುತ್ತಾಳೆ. ಆಗ ಪತಿಯು "ನಿನ್ನ ಶೀಲದ ಮೇಲೆ ನನಗೆ ಪೂರ್ಣ ನಂಬಿಕೆಯಿದೆ. ನೀನು ಕೆಟ್ಟವಳಲ್ಲ. ಅದು ನನಗೆ ಗೊತ್ತು" ಎಂದು ಸಮಾಧಾನ ಪಡಿಸಿದ. ಈ ಸಮಸ್ಯೆ ಇಬ್ಬರಿಗೂ ಚಿಂತೆಯಾಗಿ ಮಾನಸಿಕ ತೊಳಲಾಟ ಶುರುವಾಯಿತು. ಇದನ್ನು ಪರಿಹರಿಸಿಕೊಳ್ಳಲು ದೇವರಲ್ಲಿ ಮೊರೆಇಟ್ಟರು. ಆಗ ಪರಮೇಶ್ವರ ಪ್ರತ್ಯಕ್ಷನಾಗಿ ಹೂವಿನ ದಂಡೆಯನ್ನು ಕೊಟ್ಟು ಪತಿಗೆ ಹೇಳುತ್ತಾ 'ನಿನ್ನ ಹೆಂಡತಿ ಪತಿವ್ರತೆ ಈ ಹೂವಿನ ಹಾರ ತೆಗೋ ಆಕೆಯ ಕೊರಳಿಗೆ ಹಾಕು' ಎಂದು ಹೇಳಿದಾಗ ಪತಿ

ಹೂವಿನ ಹಾರವನ್ನು ಪತ್ನಿಗೆ ಹಾಕುತ್ತಾನೆ. ಆಕೆ ಖುಷಿಯಿಂದ ಹೂವಿನ ದಂಡೆಯನ್ನು ಆಕಾಶಕ್ಕೆ ಎಸೆದು "ನಮ್ಮ ದಾಂಪತ್ಯ ಶುದ್ಧವಾದದ್ದು" ಎಂದು ಹೇಳುತ್ತಾಳೆ. ಎಸೆದ ಹೂವಿನ ಎಸಳುಗಳು ಅವರ ಸುತ್ತಲೂ ಚೆಲ್ಲಿದವು. ಅವೇ ಆಕಾಶದ ಕೋಳಿ ಮರಿಗಳಾದವು ಚೆಲ್ಲಿದ ಆಕೆ ಚೆನ್ನಮ್ಮಳಾಗಿ ಆಕೆಯ ಹೆಸರಿನ ದಂಡೆಯಾಯಿತು ಎಂದು ಒಂದು ಕಥೆ ಹುಟ್ಟಿಕೊಂಡಿದೆ.

**ಸಪ್ತರ್ಷಿ ಮಂಡಲ, ನಕ್ಷತ್ರ :** ಒಂದು ಕಾಲದಲ್ಲಿ ಒಂದು ಊರಿನಲ್ಲಿ ಒಬ್ಬ ಕಳ್ಳ ಇದ್ದ ಮದುವೆಯಾಗಿ ಕಳ್ಳತನ ಮಾಡಿಕೊಂಡು ಹೆಂಡತಿಯೊಂದಿಗೆ ಸುಖವಾಗಿ ಇದ್ದನು. ಕೆಲವು ವರ್ಷಗಳ ನಂತರ ಒಂದು ಮಗುವನ್ನು ಪಡೆದರು. ಕಾಲವಶದಿಂದ ಕಳ್ಳ ಸತ್ತು ಹೋದನು. ಕಳ್ಳನ ಹೆಂಡತಿ ಆ ಮಗುವಿನೊಂದಿಗೆ ಜೀವನ ನೂಕುತ್ತಿರುವಾಗ, ಮಗನು ತಂದೆಯಂತೆ ಕಳ್ಳನಾಗಬಾರದೆಂದು ತಿಳಿದು ಆಕೆ ಗುರುಗಳ ಹತ್ತಿರ ವಿದ್ಯೆ ಕಲಿಸುತ್ತಾಳೆ. ದೊಡ್ಡವನಾದ ಅವನು ಆ ಪ್ರದೇಶದ ಶೂರ ವ್ಯಕ್ತಿಯಾಗಿ ಪ್ರಸಿದ್ಧಿಯಾಗುತ್ತಾನೆ. ಅವನು ತನ್ನ ಮೂರು ಜನ ಸ್ನೇಹಿತರಾದ ಕೋತ್ವಾಲನ ಮಗ ಮತ್ತು ವಾಲೇಕಾರನ ಮಗನೊಂದಿಗೆ ಸುಖವಾಗಿರುವಾಗ ಆ ಪ್ರದೇಶದ ರಾಜನ ಶಯನ ಗೃಹದ ಮಂಚದ ಕಾಲುಗಳು ಬಂಗಾರದವು ಎಂದು ತಿಳಿಯುತ್ತದೆ.

ಕಳ್ಳನ ಮಗ ಬುದ್ಧಿ ಎಲ್ಲಿ ಹೋಗುತ್ತದೆ? ಈ ಸುದ್ದಿಯನ್ನು ತಿಳಿದ ಅವನು ತನ್ನ ಸ್ನೇಹಿತರೊಂದಿಗೆ ರಾಜನ ಶಯನ ಗೃಹದ ಬಂಗಾರದ ಕಾಲುಗಳನ್ನು ಕದಿಯಲು ಯೋಚಿಸುತ್ತಾನೆ. ಬಡಗಿಯ ಹತ್ತಿರ ಹೋಗಿ ನಾಲ್ಕು ಕಟ್ಟಿಗೆಯ ಕಾಲುಗಳನ್ನು ಮಾಡಿಸಿಕೊಂಡು ಒಂದು ದಿನ ರಾತ್ರಿ ಅರಮನೆಯನ್ನು ಕಷ್ಟಪಟ್ಟು ಪ್ರವೇಶಿಸುತ್ತಾರೆ. ಮಹಡಿಯನ್ನು ಹತ್ತಿದ ಅವರಿಗೆ ಒಂದು ವಾರ ಕಾಲವಾದರೂ ರಾಜನ ಶಯನಗೃಹ ಪ್ರವೇಶ ಮಾಡಲು ಆಗುವುದಿಲ್ಲ ಆದರೂ ಪ್ರಯತ್ನಿಸುತ್ತಾರೆ. ಒಂದು ದಿನ ರಾಜ ಗಾಢನಿದ್ರೆಯಲ್ಲಿರುವಾಗ ಮಧ್ಯರಾತ್ರಿಯಲ್ಲಿ ಮೂವರೂ ಸ್ನೇಹಿತರು ರಾಜನ ಶಯನ ಗೃಹದ ಕಡೆ ಧಾವಿಸಿದಾಗ ಅಲ್ಲಿರುವ ಇಬ್ಬರು ಕಾವಲುಗಾರರನ್ನು ಮೋಸದಿಂದ ಕೊಂದು ಅವರ ಸಮವಸ್ತ್ರಗಳನ್ನು ತೊಟ್ಟುಕೊಂಡು ಇಬ್ಬರು ಶಯನ ಗೃಹ ಪ್ರವೇಶಿಸುತ್ತಾರೆ.

ಮಲಗಿರುವ ರಾಜನು ಎಚ್ಚರವಾಗದಂತೆ ತಾವು ತಂದ ಕಟ್ಟಿಗೆಯ ಕಾಲುಗಳನ್ನು ಸಾವಕಾಶವಾಗಿ ಜೋಡಿಸಿ ಬಂಗಾರದ ಕಾಲುಗಳನ್ನು ಹೊರತೆಗೆದು ಅಲ್ಲಿಂದ ಪಾರಾಗುತ್ತಾರೆ. ಅಲ್ಲಿಂದ ಒಬ್ಬಳು ಅಜ್ಜಿಯ ಮನೆಗೆ ಬಂದು, ಆಕೆಯ ಸಹಕಾರ ಕೋರುತ್ತಾರೆ. ಆಯ್ತು ಈ ರಾತ್ರಿ ಇಲ್ಲಿದ್ದು ಹೋಗಿ ಎಂದಳು. ಆ ಮೂವರು ಅಜ್ಜಿಯ ಮನೆಯೊಳಗಿನ ಒಲೆಯ ಮುಂದೆ ಚಳಿಕಾಯಿಸುತ್ತಾ, ಪಿಸುಮಾತಾಡುತ್ತಾ ತಾವು ತಂದ ಬಂಗಾರದ ಕಾಲುಗಳನ್ನು ಅಜ್ಜಿಗೆ ತಿಳಿಯದಂತೆ ಒಲೆಯ ಮುಂದೆ ತಗ್ಗು ತೋಡಿ ಹೂಳಿಡುತ್ತಾರೆ. ಇದನ್ನು ದೂರದಿಂದಲೇ ಗಮನಿಸಿದ ಅಜ್ಜಿ ಅವರಿಗೆ ಅನುಮಾನವಾಗದಂತೆ ನೋಡಿಕೊಳ್ಳುತ್ತಾಳೆ. ಮರುದಿನ ಸುದ್ದಿಯೋ ಸುದ್ದಿ 'ರಾಜನ

ಮಂಚದ ಕಾಲು ಕದ್ದಿದ್ದಾರೆ' ಎಂದು ಎಷ್ಟು ಹುಡುಕಿದರೂ ಸಿಗದಾದಾಗ ರಾಜ ಬಹುಮಾನವನ್ನು ಘೋಷಿಸಿ ಡಂಗುರ ಹಾಕಿಸುತ್ತಾನೆ. ಈ ಸುದ್ದಿ ಅಜ್ಜಿಯ ಕಿವಿಗೂ ಬೀಳುತ್ತದೆ.

ಅಜ್ಜಿಯು ರಾಜನ ಬಹುಮಾನದ ಆಸೆಗೆ ಎಲ್ಲವನ್ನು ಹೇಳುತ್ತಾಳೆ, ಕದ್ದಿರುವ ಮೂವರನ್ನು ರಾಜನ ಭಟರು ಹಿಡಿದು ತರುತ್ತಾರೆ. ಅವರನ್ನು ವಿಚಾರಿಸಿದಾಗ ಮೂಲಕಾರಣ ಕಳ್ಳನ ಮಗನೆಂದು ತಿಳಿಯುತ್ತದೆ. ಆಗ ರಾಜ ಯೋಚಿಸುತ್ತಾನೆ. ಇವರ ಧೈರ್ಯ, ಸಾಹಸ, ಮೆಚ್ಚುವುದಿದ್ದರೂ ಮಾಡಿದ್ದು ಒಳ್ಳೆಯ ಕೆಲಸವಲ್ಲ, ಹೀಗಾಗಿ ಇವರು ಮಾಡಿದ ಕಳ್ಳತನದ ಅಪವಾದ ಜಗವಿರುವವರೆಗೂ ಸಾಗಲಿ. ಎಂದು ಯೋಚಿಸಿ ಆ ಬಂಗಾರದ ಮಂಚದ ಕಾಲುಗಳನ್ನು ಆಕಾಶಕ್ಕೆ ಎಸೆಯುತ್ತಾನೆ.

ಇದನ್ನು ಕಂಡ ಮೂವರು ಕಳ್ಳರು 'ಅಯ್ಯೋ ಬಂಗಾರದ ಕಾಲುಗಳು' ಎಂದು ಓಡುತ್ತಾ ಅದರ ಹಿಂದೆ ಒಬ್ಬರಿಂದೊಬ್ಬರು ಓಡುತ್ತಾರೆ. ಹಾಗೆಯೇ ಓಡುತ್ತಲೇ ಇದ್ದಾರೆ. ಈಗಲೂ ಅವರು ಆ ಬಂಗಾರದ ಮಂಚದ ಕಾಲುಗಳನ್ನು ಹಿಡಿಯಲಾಗಿಲ್ಲ. ಅವರ ಜೊತೆಗೆ ಬಂಗಾರದ ಮಂಚದ ಆಸೆಗೆ ಓಡಿದ ಮುದಿಕಿಯೂ ಅವರ ಜೊತೆ ಇದ್ದಾಳೆ. ಅದೇ 'ಸಪ್ತರ್ಷಿ ಮಂಡಲ'ವಾಗಿದೆ. ನಾಲ್ಕು ಮಂಚದ ಕಾಲು, ಮೂವರು ಕಳ್ಳರು ಮತ್ತು ಆನಂತರ ಕಾಣುವ ಒಂದು ಚಿಕ್ಕ ನಕ್ಷತ್ರ ಆ ಮುದುಕಿಯದು ಎಂಬ ಒಂದು ಕಥೆ ಇದೆ.

ಚೇಳಿನ ಕೊಂಡಿ (ವೃಶ್ಚಿಕ ರಾಶಿ): ಒಬ್ಬ ಮುನಿ ಇದ್ದ. ಆತ ಯಾರಿಂದಲೂ, ಯಾವುದರಿಂದಲೂ ಸಾಯದಂತೆ ವರ ಪಡೆದಿರುತ್ತಾನೆ. ಚೇಳಿನ ಕೊಂಡಿಯಿಂದ ಮಾತ್ರ ಸಾಯುವುದು ಎಂದು ಶಾಪವಿರುತ್ತದೆ. ಹೀಗಿರುವಾಗ ಚೇಳು ಚಿಕ್ಕದು ಅದು ನನ್ನನ್ನು ಎಲ್ಲಿ ಕಡಿಯುವುದು, ನಾನು ಎತ್ತರದ ಜಾಗದಲ್ಲಿ ಮಲಗಿದರೆ ಯಾವುದೇ ತೊಂದರೆಯಾಗದು, ಎಂದು ಭಾವಿಸಿಕೊಂಡಿರುತ್ತಾನೆ. ಒಂದು ಸಲ ಆ ಮುನಿ ಸ್ವಲ್ಪ ಎತ್ತರದ ಜಾಗದಲ್ಲಿ ಮಲಗಿರುತ್ತಾನೆ. ಅಲ್ಲಿಗೆ ಆಕಸ್ಮಿಕವಾಗಿ ಚೇಳು ಬರುತ್ತದೆ. ಆತನನ್ನು ಕೊಂಡಿಯಿಂದ ಹೊಡೆಯಲು ನೋಡುತ್ತದೆ. ಪ್ರಯತ್ನ ಫಲಿಸದು. ಆಗ ಚೇಳು ಅಲ್ಲಿರುವ ಕುಳ್ಳು ತಂದು ಒಂದರ ಮೇಲೊಂದು ಜೋಡಿಸಿ ಅದರ ಮೇಲೆ ಹತ್ತಿ ಆ ಮುನಿಯನ್ನು ಕಚ್ಚುತ್ತದೆ.

ಎಚ್ಚರವಾಗಿ ನೋಡಿದಾಗ ಮುನಿಗೆ ಗಾಬರಿಯಾಗುತ್ತದೆ. ಚೇಳು ಎಂತಹ ಮೋಸ ಮಾಡಿತಲ್ಲ, ಇದರ ಮೋಸ ಜಗತ್ತಿಗೆ ತಿಳಿಯಲಿ ಎಂದುಸಿಟ್ಟಿನಿಂದ ಅದನ್ನು ಹಿಡಿದು ಆಕಾಶಕ್ಕೆ ಎಸೆಯುತ್ತಾನೆ. ಅದೇ ಚೇಳು, ಚೇಳಿನ ಕೊಂಡಿಯಾಗಿದೆ. ಚುಕ್ಕಿಯರಾಶಿಯಾಗಿ ಹಾಗೆ ಕಾಣುವುದೇ ವೃಶ್ಚಿಕರಾಶಿ ಎಂಬುದೊಂದು ನಂಬಿಕೆ ಈ ಸಮುದಾಯದಲ್ಲಿದೆ.

# ೪

# ಬಂಧುತ್ವ ಮತ್ತು ವಿವಾಹ

**ನಾ**ಗರಿಕ ಸಮಾಜದ ಸುಖೀ ಜೀವನಕ್ಕೆ ವಿವಾಹವುಗಟ್ಟಿ ನೆಲೆಯಾಗಿದೆ. ಅನೈತಿಕ ಮತ್ತು ಅಸಹ್ಯ ಸಂಬಂಧದಿಂದ ಹೊರತಾಗಿರಲು, ಗಂಡು ಹೆಣ್ಣು ಜೀವನ ಪರ್ಯಂತ ಒಂದಾಗಿರಲು ಹಾಗೂ ವಂಶೋತ್ಪತ್ತಿಯನ್ನು ಕ್ರಮಬದ್ಧವಾಗಿಸಲು ಮದುವೆ ನಾಗರಿಕ ಸಮಾಜದ ಒಂದು ಪವಿತ್ರ ಒಪ್ಪಂದವಾಗಿದೆ. ಹಾಗಾಗಿ ಪ್ರತಿಯೊಂದು ಸಮುದಾಯವೂ ಮದುವೆಯನ್ನು ಒಂದು ಕ್ರಮಬದ್ಧ ವ್ಯವಸ್ಥೆಯ ಆಚರಣೆಯನ್ನಾಗಿಸಿದೆ.

## ಬಳಿ, ಬೆಡಗು

ಬಹುತೇಕ ಸಮುದಾಯಗಳಲ್ಲಿ ಮದುವೆಯು ಸಹೋದರಿ ಸಂಬಂಧಗಳನ್ನೊಳಗೊಂಡಿದೆ. ಸಹೋದರ ಸಂಬಂಧಗಳಲ್ಲಿ ಮದುವೆಯಾಗಲು ನಿಷೇಧವಿದೆ. ಅದನ್ನು ಒಂದು ವ್ಯವಸ್ಥೆಯನ್ನಾಗಿ ಮುಂದುವರಿಸಿಕೊಂಡು ಹೋಗಲು ಸಹೋದರತೆಯ ಗುರುತಾಗಿ ಬೆಡಗುಗಳನ್ನು ಸೃಷ್ಟಿಸಲಾಗಿದೆ. ಚೆನ್ನದಾಸರ ಸಮುದಾಯದಲ್ಲಿ ನೂರಾರು ಬೆಡಗುಗಳಿವೆ. ಒಂದು ಬೆಡಗಿನವರು ತಮ್ಮ ಬೆಡಗನ್ನು ಹೊರತುಪಡಿಸಿ ಉಳಿದ ಯಾವುದೇ ಬೆಡಗಿನವರೊಂದಿಗೆ ಸಂಬಂಧ ಬೆಳೆಸಬಹುದು. ಅಲ್ಲದೆ ಈ ಸಮುದಾಯದಲ್ಲಿ ಮತ್ತೆ ಕೆಲವು ಬೆಡಗಿನವರು ತಮ್ಮ ಬೆಡಗನ್ನೊರತುಪಡಿಸಿ ಕೆಲವನ್ನು ಸೋದರ ಸಂಬಂಧವೆಂದೂ ಇನ್ನು ಕೆಲವು ಬೆಡಗಿನವರನ್ನು ಸೋದರಿ ಸಂಬಂಧವೆಂದೂ ಪರಿಗಣಿಸುತ್ತಾರೆ. ಅಂಥಲ್ಲಿ ಸೋದರ ಸಂಬಂಧದ ಬೆಡಗಿನವರನ್ನು ಹೊರತುಪಡಿಸಿ ಸೋದರಿ ಸಂಬಂಧ ಬೆಡಗಿನವರೊಂದಿಗೆ ಮದುವೆ ಮಾಡಿಕೊಳ್ಳುತ್ತಾರೆ. ಚೆನ್ನದಾಸರ ಸಮೀಕ್ಷೆಯಲ್ಲಿ ಕಂಡುಬಂದ ಬೆಡಗುಗಳು (ಕೋಷ್ಟಕ:೪.೧) ಕೆಳಗಿನಂತಿವೆ

**ಕೋಷ್ಟಕ : ೪.೧ ಸಮೀಕ್ಷೆಗೊಳಪಟ್ಟ ಚೆನ್ನದಾಸರ ಬೆಡಗುಗಳು (೨೦೦೭)**

| ಸಂ. | ಬೆಡಗು | ಕುಟುಂಬಗಳ ಸಂಖ್ಯೆ |
|---|---|---|
| ೦೧ | ಅಂಬಿ (ಅಪ್ಪ/ಅಬಿ) ತೆಟ್ಟೋಳ್ಳು | ೭೦ |
| ೦೨ | ಅಕ್ಕಿನವರ್(ಮುಕುಂದೊಳ್) | ೪೫೯ |
| ೦೩ | ಅಕ್ಷತ (ಅಚ್ಯುತ) | ೫೦ |
| ೦೪ | ಅಮಟವೊಳು | ೬೭ |

೦೫ ಆವಲೋಳು ೬೨
೦೬ ಬಂಡ್ವಾರು (ಬಂಡ್ಯಾವರ) ೬
೦೭ ಬೆಳ್ಳೆನ್ನವರ್ ೬೨
೦೮ ಬೋದೆನ್ನವರ(ಬೋದುಲೊಳು) ೩೧೧
೦೯ ಬೊಳ್ಳನವರು ೧೩
೧೦ ಭೀಮನೋಳು ೧೨೫
೧೧ ಚಿಮಿಡೋಳು ೫೦
೧೨ ಚೆರಿಕೆಪಲ್ಲೊಳು ೧೪
೧೩ ದ್ಯಾವರ ಪಲ್ಲೊಳ್ಳು ೯೦
೧೪ ದುಂಪಲೊಳು ೧೫೯
೧೫ ದುರ್ವಾಂಡೊಳು ೫೯
೧೬ ದೊಂತರ ಬ್ಯೆ(ಮ್ಯೆ)ನೊಳ್ಳು ೧೦೩
೧೭ ಧಡಮಲೊಳು ೧೧೪
೧೮ ಇಮಿಡೊಳು(ಇಮಿಡೇರ ಶೆಟ್ಟಿ) ೧೭೭
೧೯ ಗಟ್ಟಿನೊಳು ೪೬
೨೦ ಗ್ವಾದಾವೊಳ್ಳು ೯೧
೨೧ ಗ್ವಾ(ಗ)ಲೊಳ್ಳು (ಗಾಣಿಗೇರ) ೬ ೨೬
೨೨ ಗುಡಾರ ೭೧
೨೩ ಗೋಪಾಳವರ ೩೫
೨೪ ಗೋವಿಂದೋರು ೨೧
೨೫ ಹಾತ್ನೋಳು ೫೫
೨೬ ಹೊನ್ನಪೇಡ ೨೧
೨೭ ಜೊನ್ನಲೋಳು ೪೯
೨೮ ಕುಂದ್ರೋಳ್ಳು ೭೯
೨೯ ಕ್ವಾಮಟೊಳ್ಳು ೧೧೬
೩೦ ಕುಂಬ ೫೪
೩೧ ಕೂಗಕುಲದವರು ೧೬
೩೨ ಲಿಂಗದವರು ೧೭
೩೩ ಮಕರ ೯
೩೪ ಮಾದ್ನೋಳು ೮೪
೩೫ ಮಾಡಬ್ಯೆನೋಳು ೧೨೬
೩೬ ಮುಡ್ರೋಳು(ಮುರೆನ್ನವರ್) ೬೬

| | | |
|---|---|---|
| ೩೭ | ಮೇಚಿನೋಳು | ೪೫ |
| ೩೮ | ಮೈಲಬೈನೋರು | ೩೪ |
| ೩೯ | ಮೊಗಸಾಲೊಳ್ಳು | ೧೮ |
| ೪೦ | ನಿಡಗುಂಟಿ | ೫ |
| ೪೧ | ಪಲ್ಲೋಳ್ಳು (ಪಲ್ಲೆವಾಳು) | ೧೯ |
| ೪೨ | ಪಸುಪೋಳು (ಅರಿಷಿಣ) | ೨೦ |
| ೪೩ | ಪಾಪಿನವರು | ೬೦ |
| ೪೪ | ಪುಲಿಯೋಳು(ಹುಲ್ಲೆನ್ನವರ) | ೨೦೦ |
| ೪೫ | ರೇಕೆಲೋಳು | ೩೮ |
| ೪೬ | ಸಾಕ್ಕೋಳು | ೨೩ |
| ೪೭ | ಶಿಲಿ(ಶೆಲ)ಮಶೆಟ್ಟೋಳು | ೮ |
| ೪೮ | ಶೆರಿಕೊಪ್ಪನವರ | ೭ |
| ೪೯ | ಸಿಂಹ | ೩ |
| ೫೦ | ಸುಣ್ಣಪೋಳು | ೫೩ |
| ೫೧ | ತಟ್ಟಿಲೋಳು | ೧ |
| ೫೨ | ವೃಷಭ | ೩ |
| ೫೩ | ವಾಟ್ಕೋಳ್ಳು | ೫೪ |
| | ಬೆಡಗು ಹೇಳದವರು | ೩೨೮ |
| | ಒಟ್ಟು | ೪೫೨೧ |

ಈ ಬೆಡಗುಗಳೊಂದಿಗೆ ಅಗದಳ್ಳಿ, ಅಗಡ ಕೈವಾರ, ಹೂವಿನಕುಲ, ಅಮೃತದವರು, ಆಕಲೋಳ್ಳು, ಆಚಾರಿವೊಳ್ಳು, ಆನಂದ, ಆರ್ಮಿಲಾ, ಆವಲವರ, ಬಂದ್ನಿಪೇಟೆ, ಬಡಿಗೆಲ್ಲರು, ಬನ್ನೆಲರ, ಬ್ರಹ್ಮನವರ, ಬಾಪನೋಳು, ಬಿರಲಾರ, ಬೇರಲದವರ, ಚಟ್ಯಾರ, ಚಂದವಾರ, ದೈವ ಶೆಟ್ಟೊಳ್ಳು, ದೊಡ್ಡ ಗೌಂಡಲದೇವ, ಏಕತಾರಿಕಾಯಿ, ಗಡ್ಡದವರ, ಗಂಟೆಲೋರ, ಗಬ್ಬಗಡಿಯವರ, ಕಸ್ತೂರಿಕುಲ, ಸೆಟ್ಟಿಕುಲ, ಮೀನಗಲರು, ಗೊಡಗಲಾರ (ಗೊಡಗಲವರ), ಗೊರಮುಚ್ಚೊಳ್ಳು, ಗೊರೆಂಟ್ಲವರ, ಗೊಸಲೇರ, ಗೌಡ್ಲರುಹಂದ್ಯಾವೊಳ್ಳು, ಹಗದಳ್ಳಿ ಹೂವಲವರು, ಹೊನ್ನಬೀರೂರ, ಹೊನ್ನಬೆನ್ನಲರು, ಹೊನ್ನಗುಂಡ್ಲನವರ, ಹೊನ್ನಗೂಡ ಗಲಾರ, ಹೊನ್ನಗೋಪಾಳ, ಹೊನ್ನಮಲ್ಲಿಗೆ, ಹೊನ್ನಮುರೆನ್ನವರ, ಹೊನ್ನಹೊಟಗದವರ, ಹೊನ್ನಾವಿಗೆ, ಹೋನನವರ, ಜಾಗಟೋಳು, ಮುಚ್ಚಲರು, ಜಿನದವಾಳಗಾರ, ಕಟಿಗೇಲ, ಕರಿಯದ್ಲೋರು, ಕಸ್ತೂರಿಯವರ, ಕುರಿಯವರ, ಕೂಡ್ಲ ಮಾದೇಶರ, ಕೊಪ್ಪಲಾರ, ಕೋಣೆಯವರ, ಕೋರನೋಳು, ಕೋಲಾ, ಮಂಗಲದವರ, ಮಲ್ಲಯ್ಯನವರ, ಮೀಣಗಲವರ, ಮಿನಿಕ್ಕರ, ಮುದಗೊಂಡ್ಲಾರ, ಒಂಟಿಗಲಾರ, ಪಂಚ ವಾಳರು, ಪಿನಮೋಳು, ಪೋಶಗೋಳರು, ರಾವಲರು, ಶಂಕಲೋಳು ಶರಿಕಿ ಪಲ್ಲೊಳು,

ಶೆಟ್ಟೆಲವರ, ಸಕ್ರಿಯವರ, ಸಣ್ಣಕ್ಕಿಯವರ, ಸರಿಗೇರ, ತಮಟಮೊಳ್ಳು (ತಮಟೋಳು), ತೀರ್ಥಲೋರ, ತೇಜಲೋರು ಎಂಬೀ ಬೆಡಗುಗಳು ಅಲ್ಲಲ್ಲಿ ಕಾಣಸಿಗುವವು.

**ಬೆಡಗುಗಳ ಅರ್ಥ**

ಒಂದು ಸಮುದಾಯದ ಒಳಗೆ ಇರುವ ಬೇರೆಬೇರೆ ಗುಂಪುಗಳನ್ನು ಬೆಡಗುಗಳ ಹೆಸರಿನಿಂದ ಗುರುತಿಸುತ್ತೇವೆ. ಈ ಗುರುತಿಸುವಿಕೆಯಿಂದ ಒಂದೇ ರಕ್ತ ಸಂಬಂಧದಲ್ಲಿ ವಿವಾಹವಾಗವುದನ್ನು ತಪ್ಪಿಸವ ಉದ್ದೇಶವಿದೆ. ಈ ರೀತಿಯ ವಿಶೇಷ ಬೆಡಗುಗಳ ಉಗಮ ಮತ್ತು ಅದರ ಅರ್ಥದ ವಿವರಗಳನ್ನು ಕೆಳಕಂಡಂತೆ ವಿಶ್ಲೇಷಿಸಲಾಗಿದೆ:

೧. **ಮುತ್ತಿಮಶೆಟ್ಟಿ :** ಹಿರಿಯರೊಬ್ಬರು ಹೇಳುವಂತೆ ಇವರು ವಿಜಯನಗರ ಸಾಮ್ರಾಜ್ಯದಲ್ಲಿ ಮುತ್ತುರತ್ನಗಳನ್ನು ವ್ಯಾಪಾರ ಮಾಡುತ್ತಿದ್ದ ಮನೆತನವಾಗಿದ್ದು ವಿಜಯನಗರ ಪಥನಾನಂತರ ಇವರು ಭಿಕಾರಿಗಳಾದರು. ಆದರೆ ಇವರ ಮನೆತನದ ಹೆಸರು ಮಾತ್ರ ಮುತ್ತಿಮಶೆಟ್ಟೊಳು ಆಗಿಯೇ ಉಳಿಯಿತು.

೨. **ಮುದೆನೂರೋಳ್ಳು :** ಮುದೆನೂರ ಎನ್ನುವುದು ಆಂಧ್ರ ಪ್ರದೇಶದ ಒಂದು ಹಳ್ಳಿಯಿಂದ ವಲಸೆ ಬಂದರು. ಕರ್ನಾಟಕದಲ್ಲಿ ಇವರು ಮುದೆನೂರೋಳ್ಳು ಬೆಡಗಿನವರೆಂದೆ ಗುರುತಿಸಿಕೊಂಡರು.

೩. **ಕೊಂಡಾವೊಳ್ಳು :** ತೆಲುಗಿನ "ಕೊಂಡ" ಎನ್ನುವ ಪದ ಕನ್ನಡದ ಬೆಟ್ಟ ಎಂದಾಗುತ್ತದೆ. ಕೊಂಡ ಸೀಮ ಅಥವಾ ಬೆಟ್ಟ ಸೀಮೆಯಿಂದ ಬಂದವರು ಕೊಂಡಾವೊಳ್ಳು ಎಂದಾದರು.

೪. **ಗೊಳ್‌ಮೋಳ್ಳು :** ಗೋಳಳ್ಳಿ ಎಂಬುದು ಆಂಧ್ರ ಪ್ರದೇಶದಲ್ಲಿನ ಒಂದು ಗ್ರಾಮ. ಈ ಗ್ರಾಮದಿಂದ ವಲಸೆಬಂದವರಾದ್ದರಿಂದ ಇವರು ತಮ್ಮನ್ನು ಗೊಳ್‌ಮೊಳ್ಳು ಎಂಬ ಬೆಡಗಿನಿಂದ ಕರೆದುಕೊಂಡರು. ಹೀಗೆ ಒಂದೊಂದು ಬೆಡಗಿಗೂ ಒಂದೊಂದು ಉಗಮದ ಕಥೆ ಇರುವುದನ್ನು ಕಾಣಬಹುದು.

ಕರ್ನಾಟಕದ ಚನ್ನದಾಸರ ಮತ್ತು ಇವರ ಪರ್ಯಾಯ ಸಮುದಾಯದ ಬೆಡಗಗಳು ಮತ್ತು ಆಂಧ್ರ ಪ್ರದೇಶದ ಹೊಲೆಯ ದಾಸರಿ ಬೆಡಗಗಳ ನಡುವಿನ ಸಾಮ್ಯತೆಗಳನ್ನು ಈ ರೀತಿ ಗುರುತಿಸಬಹುದು.

**ವೈವಾಹಿಕ ಸ್ಥಾನಮಾನ**

ಪ್ರಸ್ತುತ ಅಧ್ಯಯನದ ಪ್ರಕಾರ ಸಮೀಕ್ಷೆಗೊಳಪಟ್ಟ ಚೆನ್ನದಾಸರ ಒಟ್ಟು ಜನಸಂಖ್ಯೆಯ ಪೈಕಿ ಶೇ. ೪೯.೨೭ ರಷ್ಟು ಜನರು ವಿವಾಹಿತರಾಗಿದ್ದು, ಅವರ ಪೈಕಿ ಶೇ. ೫೪.೦೩ ರಷ್ಟು ಮಹಿಳೆಯರಾಗಿದ್ದಾರೆ. ಅವಿವಾಹಿತರು ೪೯.೯೫ರಷ್ಟಿರುವವರು. ಇವರಲ್ಲಿ ಶೇ. ೫೪.೮೧ ರಷ್ಟು ಪುರುಷರು ಕಂಡು ಬಂದರೆ, ಶೇ. ೪೪.೬೯ ರಷ್ಟು ಮಹಿಳೆಯರು ಕಂಡು ಬರುತ್ತಾರೆ(ಕೋಷ್ಟಕ:೪.೨). ಇವರಲ್ಲಿ ವಿವಾಹಿತ ಮತ್ತು ಅವಿವಾಹಿತರ ಪ್ರಮಾಣ ಸಮವಿರುವುದು ವಿಶೇಷ. ಈ ಅಧ್ಯಯನದಿಂದ ಕಂಡು ಬರುವುದೇನೆಂದರೆ ಲಿಂಗವಾರು ವಿಷಯಗಳಲ್ಲಿ ಪುರುಷರಿಗಿಂತ ಮಹಿಳೆಯರಲ್ಲಿ ಹೆಚ್ಚು ಜನರು ವಿವಾಹಿತರಾಗಿದ್ದಾರೆ.

ಕಾರಣವೆಂದರೆ ಅಲೆಮಾರಿ ಬುಡಕಟ್ಟು ಸಮುದಾಯಗಳಲ್ಲಿ ಹೆಣ್ಣು ಮಕ್ಕಳನ್ನು ಬೇಗ ಮದುವೆ ಮಾಡುತ್ತಾರೆ. ಹಾಗೆಯೇ ಇದಕ್ಕೆ ತದ್ವಿರುದ್ಧವಾಗಿ ಅವಿವಾಹಿತರಲ್ಲಿ ಪುರುಷರೇ ಮಹಿಳೆಯರಿಗಿಂತ ಅಧಿಕ ವಾಗಿರುವುದು ಪುರುಷರು ತಡವಾಗಿ ಮದುವೆಯಾಗುವುದನ್ನು ತೋರಿಸುತ್ತದೆ.

**ಕೋಷ್ಟಕ: ೪.೨ ಸಮೀಕ್ಷೆಗೊಳಪಟ್ಟ ಚೆನ್ನದಾಸರ ಶೇಕಡಾವಾರು ವೈವಾಹಿಕ ಸ್ಥಾನಮಾನ (೨೦೦೬)**

| ಸಂ | ವೈ. ಸ್ಥಾನಮಾನ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅವಿವಾಹಿತ | ೬೦೦೦ | ೪೫೧೭ | ೧೦೫೧೭ |
| | ಶೇಕಡ | ೫೪.೮೧ | ೪೪.೬೯ | ೪೯.೯೫ |
| ೨ | ವಿವಾಹಿತ | ೪೯೧೨ | ೫೪೬೧ | ೧೦೩೭೩ |
| | ಶೇಕಡ | ೪೪.೮೭ | ೫೪.೦೩ | ೪೯.೨೭ |
| ೩ | ವಿಧುರ/ವಿಧವೆ | ೧೯ | ೧೨೦ | ೧೩೯ |
| | ಶೇಕಡ | ೦.೧೭ | ೧.೧೮ | ೦.೬೬ |
| ೪ | ಬೇರ್ಪಡೆ | ೧೫ | ೮ | ೨೩ |
| | ಶೇಕಡ | ೦.೧೩ | ೦.೦೭ | ೦.೧೧ |
| | ಒಟ್ಟು | ೧೯೪೬ | ೧೦೧೦೭ | ೨೧೦೫೩ |
| | | ೧೦೦.೦೦ | ೧೦೦.೦೦ | ೧೦೦.೦೦ |

**ಹೆಣ್ಣು, ತೆರ, ಮದುವೆ**

ಸಮುದಾಯದಲ್ಲಿ ವಿಶೇಷವಾಗಿ ಸೋದರತ್ತೆಯ ಅಥವಾ ಅಕ್ಕನ ಮಗಳೊಂದಿಗೆ ಮದುವೆ ಸಂಬಂಧ ಬೆಳೆಸುವುದು ರೂಢಿಯಲ್ಲಿದೆ. ಒಟ್ಟಿನಲ್ಲಿ ಬೆಡಗು ನೋಡಿಯೇ ಹೆಣ್ಣು ತರುವುದು ಸಂಪ್ರದಾಯವಾಗಿದೆ. ಮೊದಲಬಾರಿಗೆ ಮದುವೆಯಾಗುವ ಪುರುಷ ನಿಗೆ ತರುವ ಹೆಣ್ಣು ಶೀಲಗೆಟ್ಟಿರಬಾರದು, ಬೇರೆಯವರೊಂದಿಗೆ ದೈಹಿಕ ಸಂಬಂಧ ಬೆಳೆಸಿರಬಾರದು. ಬಿಳುಪು ಅಥವಾ ಇನ್ನಾವುದೇ ರೋಗ ಇರಬಾರದು, ಸುಳಿ ಉತ್ತಮ ವಾಗಿರಬೇಕು ಇತ್ಯಾದಿ ನಿಬಂಧನೆಗಳನ್ನು ಅನುಸರಿಸಿ ಹೆಣ್ಣನ್ನು ತರುವ ರೂಢಿಯಿದೆ.

ಹೆಣ್ಣನ್ನು ನೋಡಲು ಹೋಗುವ ಮುಂಚೆ ಆಕೆಯ ಬಗ್ಗೆ ಈ ಮೇಲಿನಂತೆ ವಿಚಾರಿಸುತ್ತಾರೆ. ಹೆಣ್ಣು ನೋಡಲು ಗಂಡಿನ ಕಡೆಯವರು ಮೊದಲು ತಾವು ಬರುವ ಸುದ್ದಿಯನ್ನು ಹೆಣ್ಣಿನ ಮನೆಯವರಿಗೆ ಮೊದಲೇ ತಿಳಿಸಿರುತ್ತಾರೆ. ಹೆಣ್ಣಿನ ಕಡೆಯವರು ತಮಗೆ ಬೇಕಾದವರನ್ನು ಮತ್ತು ತಮ್ಮ ಗುಂಪಿನ ಗುಡೇಗಾಡನನ್ನು ಕರೆಸಿಕೊಳ್ಳುತ್ತಾರೆ.

ಕನ್ಯಾ ನಿಶ್ಚಯ ಮಾಡಲು ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಬರುತ್ತಾರೆ. ಕೂಡಿದ ದೈವದ ನಡುವೆ ಗಂಡಿನ ಕಡೆಯವರು ಹೆಣ್ಣಿನ ಮನೆಯ ಮುಖ್ಯಸ್ಥನನ್ನು ಉದ್ದೇಶಿಸಿಸಿ 'ನಾವು ನಿಮ್ಮ ಮನೆಗೆ ಬೇಳೆ ಅನ್ನವನ್ನು (ಪಪ್ಪು ವಂಡಕಮು)ಕೇಳಲು

ಬಂದಿದ್ದೇವೆ" ಎನ್ನುತ್ತಾನೆ ಹುಡಿಗಿಯನ್ನು ಕೊಡುವ ಮನಸ್ಸು ಇದ್ದರೆ, ಆತ "ಕೊಡುತ್ತೇವೆ ತೆಗೆದು ಕೊಳ್ಳಿರಿ" ಎನ್ನುವನು. ಆಗ ಹೆಣ್ಣಿಗೆ ಓಲಿ-ಕೂಲಿ(ತೆರವು ಮತ್ತು ಖರ್ಚು) ಕೊಡುವುದರ ಕುರಿತು ಮಾತು ಕತೆ ನಡೆಯುತ್ತದೆ. ಗಂಡಿನ ಕಡೆಯವರು ಹೆಣ್ಣಿಗೆ ತೆರವು ೧೦೦ ರೂಪಾಯಿ, ಕುಲಸ್ಥರ ತೆರವು ೨೦೦ ರೂಪಾಯಿ ಕೊಡಬೇಕೆಂದೂ ಅಲ್ಲದೆ ಕೂಲಿಯಾಗಿ ಸೀರೆ, ಕುಪ್ಪಸ ಕೊಡಿಸಲು ಹಣ ಕೊಡಬೇಕೆಂದು ಮಾತುಕತೆ ಮಾಡುತ್ತಾರೆ. ಇದಲ್ಲದೆ ದೈವದ ಖುಷಿಗಾಗಿ ಗಂಡಿನವರು ಹಣ ಕೊಡಬೇಕು, ಅವರ ಅರ್ಧದಷ್ಟು ಹೆಣ್ಣಿನವರು ಕೊಡಬೇಕು ಎಂದು ನಿಶ್ಚಯಿಸುತ್ತಾರೆ.ಆಗ ಗಂಡಿನ ಕಡೆಯಿಂದ ಬಂದ ಮುತ್ತೈದೆಯರು ವಧುವಿಗೆ ಹಸಿರುಸೀರೆ ಉಡಿಸಿ,ಕೂಡಿಸಿ ಉಡಿ ಯೊಳಗೆ ಉಡಿಯಕ್ಕಿ ಹಾಕಿ ಎಲೆ ಅಡಿಕೆ ಮತ್ತು ಬಾಳೆಹಣ್ಣು ಇಟ್ಟು ಉಡಿ ತುಂಬು ತ್ತಾರೆ. ಇದು ಶರೀರ ಸಂಬಂಧ ಹೊಂದಿತು ಎನ್ನುವುದಕ್ಕೆ ಸಾಕ್ಷಿ. ಇದಕ್ಕೆ ಸಾಕಲು ಶಾಸ್ತ್ರ ಎನ್ನುತ್ತಾರೆ. ಅಂದೇ ಮದುವೆಮಾಡುವ ದಿನವನ್ನು ಮತ್ತು ಇತರ ಒಪ್ಪಂದಗಳ ಕುರಿತು ಮಾತಾನಾಡುತ್ತಾರೆ. ಉಡಿ ತುಂಬುವಾಗ ಗಂಡಿನವರು ೧೫ ಮತ್ತು ಬಳೆಗಳಿಗೆ ೫೦ ರೂಪಾಯಿಗಳನ್ನು ಕೊಡುವುದು ರೂಢಿ. ಕನ್ಯಾ ನಿಶ್ಚಯದ ನಂತರ ಗುಂಪಿನ ಮುತ್ತೈದೆಯರಿಂದ ಸೋಬಾನೆ ಪದ ಹಾಡಿಸುತ್ತಾರೆ, ಬಳಿಕ ಹಿರಿಯರಿಗೆ ಮತ್ತು ಸೇರಿ ದವರಿಗೆ ಸರಾಯಿ ಕುಡಿಸಿ ಊಟ ಹಾಕುತ್ತಾರೆ.

**ಮದುವೆ:** ಈ ಸಮುದಾಯದಲ್ಲಿ ಐದು ದಿನಗಳವರೆಗೆ ಮದುವೆ ಕಾರ್ಯಕ್ರಮಗಳು ನಡೆಯುತ್ತವೆ. ಇನ್ನು ಕೆಲವು ಕಡೆಗಳಲ್ಲಿ ಮೂರುದಿನಗಳ ಕಾಲ ಮದುವೆ ನಡೆಯುತ್ತದೆ.

ಐದು ದಿನಗಳ ಮದುವೆ ಕಾರ್ಯದಲ್ಲಿ ಒಂದನೇ ದಿನ ಶಕ್ತಿ ಪೂಜೆ ಮಾಡುವರು. ಯಲ್ಲಮ್ಮ, ದುರುಗಮ್ಮ, ಲಕ್ಕಮ್ಮ ಇತ್ಯಾದಿ ಮನೆ ದೇವರ ಪೂಜೆಯನ್ನು ಬ್ಯಾಟಿ ಕೊಯ್ದು ಅಡುಗೆ ಮಾಡಿ ಬಂಧುಗಳೊಂದಿಗೆ ಊಟಮಾಡುವ ಮೂಲಕ ಮದುವೆಯ ಮೊದಲ ದಿನದ ಕಾರ್ಯಕ್ಕೆ ಮುಕ್ತಾಯ ಹಾಡುತ್ತಾರೆ.

ಎರಡನೇ ದಿನ ಮಣ್ಣಿನಿಂದ ಮೂರ್ತಿಮಾಡಿ ಬೆಳ್ಳಿಯ ಅಥವ ಕಂಚಿನ ರೂಪು ಗಳನ್ನಿಟ್ಟು ಹಿರಿಯರ ಪೂಜೆ ಎಂದು ಮಾಡುತ್ತಾರೆ. ಮೂರನೇ ದಿನ ಹಂದರ ಹಾಕುವ ಕಾರ್ಯ ನಡೆಯುತ್ತದೆ. ಊರವರಿಂದ ಬಂಡಿಯ ನೊಗಗಳನ್ನು ಬೇಡಿ ತಂದು, ಅವುಗಳಿಗೆ ಚಾಬು ಹಚ್ಚಿ ಸುಣ್ಣದ ಬಟ್ಟು ಬಳಿದು, ಕಂಕಣಗಳನ್ನು ಅವುಗಳಿಗ ಕಟ್ಟಿ ನಾಲ್ಕು ತಗ್ಗುಗಳನ್ನು ಮದುವೆ ಮಂಟಪಕ್ಕಾಗಿ ತೋಡುತ್ತಾರೆ. ನಂತರ ಆ ತಗ್ಗಿನಲ್ಲಿ ಅನ್ನದ ಮುದ್ದೆ ಹಾಕಿ ಪೂಜಿಸಿ ನೊಗಗಳನ್ನು ನೆಡುತ್ತಾರೆ. ನಂತರ ಇದರ ಜೊತೆ ಐದನೆಯದಾಗಿ ಹಾಲಗಂಬ ಅಥವಾ ಪಾಲಕೊಮ್ಮವೆಂಬುದನ್ನು ಹತ್ತಿಹಣ್ಣಿನ ಗಿಡದಿಂದ ತಂದು ನೊಗದ ಜೊತೆಗೆ ನೆಡುತ್ತಾರೆ.

ಹಂದರದ ಮೇಲೆ ಬಸರೆ ತಪ್ಪಲು ಅತ್ತಿಗಿಡದ ತಪ್ಪಲು, ಕಣಕೆಸೊಪ್ಪು, ಇತರೆ ಸೊಪ್ಪಿ ಹಾಕಿ ಚಪ್ಪರ ತಯಾರಿ ಮಾಡುವರು. ಈ ಹಂದರದ ಹಾಕಿದ ದಿನ ಮಾಂಸಾಹಾರ ಇರುವುದಿಲ್ಲ. ಇಂದು ವೆಂಕಟರಣನ ಬಂತಿ ಇರುತ್ತದೆ. ಎಲ್ಲರು ಶುಚಿಭೂತರಾಗಿ, ಹುತ್ತಿನ ಮಣ್ಣುತಂದು, ಹಂದರದ ಕೆಳಗೆ ಹುತ್ತಿನ ಮಣ್ಣಿನಿಂದ

ಒಂಬತ್ತು ಕಾಲುಗಳಿರುವಂತೆ ಶಾಸಿ ರಚಿಸುತ್ತಾರೆ. ಬೇರೆ ಬೇರೆ ಬಣ್ಣದ ಎಲೆ, ಹೂ, ಹಣ್ಣು ಕಾಯಿಗಳ ಒಣಗಿದ ಪುಡಿಯಿಂದ ತಯಾರಿಸಿದ ರಂಗೋಲಿಯ ಪುಡಿಯನ್ನು ಉಪಯೋಗಿಸಿ ಹಂದರದ ಶಾಸಿ ಕಟ್ಟೆ ಮೇಲೆ ರಂಗೋಲಿಯಿಂದ ಚಿತ್ತಾರಗಳನ್ನು ರಚಿಸಿ, ಮಾವಿನ ಎಲೆಗಳಿಂದ ತಳಿರು, ತೋರಣ ಕಟ್ಟುತ್ತಾರೆ.

ನಾಲ್ಕನೇ ದಿನ ಮುಂಜಾನೆ ಐರಾಣಿ ಕೊಡತರುವುದು. ಅಂದರೆ, ಐರಾಣಿ ಕೊಡದಿಂದ ನೀರು ತರಲು ಹೋಗುವ ಪೂರ್ವದಲ್ಲಿ ಕುಂಬಾರನ ಗಡಿಗೆ ಮಾರಾಟದ ಅಣುಕು ಪ್ರದರ್ಶನವನ್ನು ಪೂರ್ತಿಗೊಳಿಸಿ, ಮಧುಮಕ್ಕಳು ಸೇರಿ ಎಲ್ಲರೂ ಗಂಗಾ ಮಾತೆಗೆ ಪೂಜೆ ಮಾಡಿ ನೀರು ತರುವರು. ನಾಲ್ಕುದೊಡ್ಡಗಡಿಗೆ, ನಾಲ್ಕು ಚಿಕ್ಕ ಮಗಿಗಳು ಒಂದು ತಂಬಿಗೆ ಒಟ್ಟು ಒಂಬತ್ತು ಕೊಡಗಳಂತೆ ನೀರು ತುಂಬಿಟ್ಟು ಪೂಜೆಸಲ್ಲಿಸಿ ಅಲ್ಲಿಂದ ಲಗ್ನದ ಮನೆಗೆ ಬಂದು ಅಲ್ಲಿ ಐರಾಣಿಕೊಡವನ್ನು ಸ್ಥಾಪಿಸುತ್ತಾರೆ.

ಅದೇ ದಿನ ಮಾಂಗಲ್ಯ ಕಾರ್ಯಕ್ರಮವಿರುತ್ತದೆ. ಮದುಮಕ್ಕಳಿಗೆ ಹಂದರ ಮುಂದೆ ಒನಕೆಯನ್ನಿಟ್ಟು ಅದರ ಮೇಲೆ ಪೂರ್ವಾಭಿಮುಖಿವಾಗಿ ಕೂಡಿಸಿ, ನೀರನ್ನು ಹಾಕಿ ಮತ್ತೆ ವಸ್ತ್ರ ಧರಿಸಿಕೊಂಡು ಹಂದರದ ಮಧ್ಯದ ಶಾಸಿಕಟ್ಟೆಯ ಮೇಲೆ ಕೂಡಿಸುತ್ತಾರೆ. ಸಮುದಾಯದ ಬಲ್ಲ ಹಿರಿಯರು ಹಿಂದಿನ ಸಂಪ್ರದಾಯದಂತೆ ಮಾಂಗಲ್ಯಧಾರಣೆ ಮಾಡಿಸುವರು.

ಮಾಂಗಲ್ಯಧಾರಣೆಯ ನಂತರ ಮದುಮಕ್ಕಳು ಹಾಲಿನಲ್ಲಿ ಇಲ್ಲವೆ ನೀರಿನಲ್ಲಿ ಮುತ್ತು ಹುಡುಕುವ ಶಾಸ್ತ್ರ ಮಾಡುತ್ತಾರೆ. ಆ ಮೇಲೆ ಸಭಾಶ್ಯಾಸಿ, ಅಂದರೆ ಮುಯ್ಯಿ ಇಡುವುದು, ಮೆರವಣಿಗೆ, ಗ್ರಾಮದೇವರ ಪೂಜೆ, ಹನುಮಂತ ದೇವರ ಪೂಜೆಯನ್ನು ಮದುಮಕ್ಕಳು ಮಾಡುತ್ತಾರೆ.

ಕೊನೆಯದಿನ ಅಂದರೆ ಐದನೆಯ ದಿನ 'ನಾಗೋಲಿ' ಎಂದು ಮಾಡುತ್ತಾರೆ. ಬೀಗರು ಒಂದು ಬೇಟೆಯನ್ನು ಹಿಡಿದು ತರುತ್ತಾರೆ. ಹಂದರದ ಕೆಳಗೆ ಶಾಸಿಕಟ್ಟೆಯ ಮೇಲೆ ಕೊಯ್ಯುತ್ತಾರೆ. ಮದುವೆಗೆ ಬಂದವರೆಲ್ಲಾ ರಕ್ತವನ್ನು ನೋಡಲೇಬೇಕು ಎಂಬುದು ಈ ಸಮುದಾಯದ ಆಚರಣೆಗಳಲ್ಲಿ ಒಂದು. ರಕ್ತ ನೋಡಿದ ನಂತರ ಮದುಮಕ್ಕಳಿಂದ ಹಂದರದ ಕೆಲವು ತಪ್ಪಲನ್ನು ತೆಗೆಯಲು ಹೇಳಿ ನಂತರ ಉಳಿದದ್ದನ್ನು ಬೇರೆಯವರು ತೆಗೆಯುತ್ತಾರೆ.

ಸಂಜೆ ಮಾಂಸದ ಅಡುಗೆಯ ಊಟವನ್ನು ಎರಡೂ ಕಡೆಯವರು ಮಾಡುತ್ತಾರೆ. ಇಂದಿಗೆ ಐದು ದಿನಗಳ ಮದುವೆಯ ಎಲ್ಲಾ ಸಂಪ್ರದಾಯಗಳು ಮುಗಿದು ಮಾರನೆಯ ದಿನ ತಮ್ಮ ನೆಲೆಗಳಿಗೆ ಪ್ರಯಾಣಿಸುತ್ತಾರೆ.

ಈ ಸಮುದಾಯದವರಲ್ಲಿ ಬಾಲ್ಯವಿವಾಹಗಳು ನಡೆಯುತ್ತವೆ. ಅವಿಭಕ್ತ ಕುಟುಂಬದಲ್ಲಿ ಹಿರಿಯ ಮಗನ ಮದುವೆ ಮಾಡುತ್ತಿದ್ದರೆ ಅದೇ ಖರ್ಚಿನಲ್ಲಿ ಕಿರಿಯರ ಮದುವೆಯೂ ಮಾಡುವ, ಇಲ್ಲವೆ ವಯಸ್ಸಾದ ತಂದೆ ತಾಯಿಗಳಿಗೆ ತಾವು ಸಾಯುವ ಮೊದಲೇ ಮಕ್ಕಳ ಮದುವೆ ಮಾಡಬೇಕೆಂಬ ಇಚ್ಛೆಯಿಂದ ಇಂತ ಮದುವೆಗಳು ನಡೆಯುತ್ತವೆ. ಬಹು ಪತ್ನಿತ್ವವೂ ಈ ಸಮುದಾಯದಲ್ಲಿದೆ, ಅಲ್ಲದೆ ಉಡುಕಿ (ಕೂಡಿಕೆ) ಮದುವೆ ಮತ್ತು ವಿಧವಾ ವಿವಾಹಗಳು ಕೂಡ ನಡೆಯುತ್ತವೆ.

# ೫

# ಆರಾಧನೆ ಆಚರಣೆ ನಂಬಿಕೆ

**ಸಂಪ್ರದಾಯಗಳು:** ಈ ಸಮುದಾಯದಲ್ಲಿ ಮೊದಲ ಬಾಣಂತನ ಹೆಣ್ಣಿನ ತವರು ಮನೆಯಲ್ಲಿ ಆಗುವುದು. ಕೂಸು ಹುಟ್ಟಿದ ನಂತರ ಮಾಸನ್ನು ತಗ್ಗು ತೋಡಿ ಹೂಳಿಡುವುದು ವಾಡಿಕೆ. ಬೆಳಗಾವಿ ವಿಭಾಗದಲ್ಲಿ ಕೂಸಿನ ಮಾಸನ್ನು ಮಣ್ಣಿನ ಒಂದು ಸಣ್ಣ ಮಡಿಕೆಯಲ್ಲಿ ತುಂಬಿ ಮೂರು ದಿನಗಳವರೆಗೆ ಇಡುತ್ತಾರೆ. ಮೂರನೇ ದಿನಕ್ಕೆ ಮನೆಯ ಹಿತ್ತಲಲ್ಲಿ ನಾಲ್ಕುಜನ ಕೌದಿಯನ್ನು ಎತ್ತಿ ಹಿಡಿದು, ಅದರ ಕೆಳಗೆ ತಾಯಿ ಮತ್ತು ಮಗುವನ್ನು ಸ್ನಾನಮಾಡಿಸುತ್ತಾರೆ. ಮಾಸವನ್ನು ಅಲ್ಲಿಯೇ ಅಗೆದು ಮುಚ್ಚುತ್ತಾರೆ. ನಂತರ ಕೂಸಿಗೆ ನಾಮಕರಣ ಮಾಡಿ ಬಂಧು ಬಳಗದವರಿಗೆ ಗುಗ್ಗರಿ ಹಂಚಿ ಊಟ ಹಾಕುತ್ತಾರೆ. ನಂತರ ಐದನೇ ದಿನಕ್ಕೆ ಹಗ್ಗದ ತೊಟ್ಟಿಲು ಕಟ್ಟಿ ಅದರಲ್ಲಿ ಕೂಸನ್ನು ಹಾಕಿ ಐದೇಶಿ ಮಾಡುತ್ತಾರೆ. ಇಲ್ಲಿಗೆ ಜನನದ ಸೂತಕ ಕಳೆಯುತ್ತಾರೆ.

ಕೆಲವು ಭಾಗದಲ್ಲಿ ಕೂಸು ಹುಟ್ಟಿದ ನಂತರ ಅದೇ ದಿನ ಮಾಸನ್ನು ಮಡಿಕೆಯಲ್ಲಿ ಹಾಕಿ, ತಾಯಿಗೆ ನೀರು ಹಾಕುವ ಸ್ಥಳದಲ್ಲಿಯೇ ಹೂಳುವುದು ವಾಡಿಕೆಯಲ್ಲಿದೆ. ಇನ್ನು ಕೆಲವು ಕಡೆ ಮಾಸನ್ನು ಮೂರು ದಿನಗಳಲ್ಲಿ ಹೂಳುತ್ತಾರೆ. ಮಾಸನ್ನು ತೆಗೆದಿಟ್ಟು ನಂತರ ಸೂಲಗಿತ್ತಿಯರಿಗೆ ಎಲೆ, ಅಡಿಕೆ, ಕುಂಕುಮ ಕೊಬ್ಬರಿ, ಉತ್ತುತ್ತಿ ಇತ್ಯಾದಿ ವಸ್ತುಗಳಿಂದ ಉಡಿತುಂಬಿ, ಸ್ವಲ್ಪ ಸ್ಥಿತಿವಂತರಾಗಿದ್ದರೆ ಸೂಲಗಿತ್ತಿಗೆ ಹೊಸ ಸೀರೆ ಉಡಿಸಿದ ನಂತರ ಗುಡಿಸಲಿನ ಎದುರಿಗೆ ತಗ್ಗು ತೆಗೆದು ಮಾಸನ್ನು ಅದರಲ್ಲಿ ಮುಚ್ಚಿ ಅದರ ಮೇಲೊಂದು ಬಂಡೆ ಕಲ್ಲು ಇಟ್ಟು ಪೂಜೆ ಮಾಡುವುದು ಕೂಡ ವಾಡಿಕೆಯಲ್ಲಿದೆ.

ಮಾಸಿಗೆ ಪೂಜೆ ಮಾಡುವುದರಿಂದ ಮಕ್ಕಳಾಗದವರಿಗೂ ಮಕ್ಕಳಾಗುತ್ತವೆಂಬ ನಂಬಿಕೆ ಕೆಲವು ಕಡೆಗಿದೆ. ಬಾಣಂತಿತನವನ್ನು ಪೂರೈಸಿದ ಸೂಲಗಿತ್ತಿಗೆ ಕೆಲವು ಕಡೆ ಮೂರು ದಿನ, ಇನ್ನು ಕೆಲವು ಕಡೆ ಐದುದಿನಗಳವರೆಗೆ ಮುಟ್ಟಿಸಿಕೊಳ್ಳದೆ ಇರುತ್ತಿದ್ದರು.

**ಈರ್ಲ:** ಜನನದ ಸಂದರ್ಭದಲ್ಲಿ ಮೂರುದಿನ ಇಲ್ಲವೆ ಐದು ದಿನ ಸೂತಕವಿರುತ್ತದೆ. ಅದೇ ದಿನ ಮಗು ಹುಟ್ಟಿದ ಸ್ಥಳದಲ್ಲಿ ಒಂದು ಕೋಳಿಯನ್ನು ಕೊಯ್ದು, ಎಲ್ಲರ ಸಮ್ಮುಖದಲ್ಲಿ ಮಾಸನ್ನು ಹೂತಿಟ್ಟು, ಅನ್ನದ ಮುದ್ದೆ ಹಾಕಿ ಪೂಜೆ ಮಾಡುವ ಸಂಪ್ರದಾಯವಿದೆ. ಇದನ್ನೇ ಕೆಲವು ಕಡೆ ಈರ್ಲ ಮಾಡುವುದು ಎಂದು ಕರೆಯುತ್ತಾರೆ.

ಮಗುವಿನ ತಾಯಿ ಒಂಬತ್ತು ದಿನಗಳವರೆಗೆ ಮುಡಚಟ್ಟಿನಲ್ಲಿರುತ್ತಾಳೆ. ನಂತರ ಗಂಗಾಪೂಜೆ ಮಾಡುತ್ತಾರೆ. ಕೆಲವು ಕಡೆ ಇದನ್ನು ಸೀತಾಳ ಪೂಜೆ ಎಂದು ಕೂಡ ಕರೆಯುತ್ತಾರೆ. ಗಂಗಾಪೂಜೆ ಮಾಡಿ ನೀರು ಮುಟ್ಟಿಸಿದ ತಕ್ಷಣ ಆಕೆ ಎಂದಿನಂತೆ ಎಲ್ಲರ ಸಂಪರ್ಕಕ್ಕೆ ಬರುತ್ತಾಳೆ. ಮುಟ್ಟರಿಯಿತು ಮುಡಚಟ್ಟು ಹೋಯಿತು ಎಂದು ತಿಳಿಯುತ್ತಾರೆ.

ಬಾಣಂತಿಗೆ ಮತ್ತು ಮಗುವಿಗೆ ಐದು ದಿನಗಳವರೆಗೆ ಬಿಸಿನೀರಿಗೆ ಬೇವಿನ ತಪ್ಪಲು ಹಾಕಿ, ಮೈಗೆ ಅರಿಷಿಣ ಹಚ್ಚಿ ಸ್ನಾನಮಾಡಿಸುವರು. ಕೆಲವು ಕಡೆ ಲಕ್ಕಿ ತಪ್ಪಲು ಅಥವಾ ವಾಯಿಲಾಕು ತಪ್ಪಲು ಬಿಸಿನೀರಿನಲ್ಲಿ ಬೆರೆಸಿ ಬಾಣಂತಿಗೆ ಕುಲದ ಹೆಣ್ಣು ಮಕ್ಕಳೆಲ್ಲ ಸೇರಿ ಸ್ನಾನ ಮಾಡಿಸುತ್ತಾರೆ. ಎಕ್ಕೆ ಗಿಡದ ತಪ್ಪಲನ್ನು ಮಕ್ಕಳ ಮೂತ್ರದಲ್ಲಿ ನೆನೆಸಿ ಕುಟ್ಟಿದ ಚೂರ್ಣದಿಂದ ಸಣ್ಣಸಣ್ಣ ಗುಳಿಗೆಗಳನ್ನು ತಯಾರಿಸಿ ಊಟಕ್ಕಿಂತ ಮುಂಚೆ ಬಾಣಂತಿಗೆ ನುಂಗಿಸುವುದನ್ನು ಇಂದಿಗೂ ಬಳ್ಳಾರಿ, ರಾಯಚೂರು, ಕೊಪ್ಪಳ, ಸೇರಿದಂತೆ ಇನ್ನಿತರ ಕಡೆಗಳಲ್ಲಿ ಕಾಣುತ್ತೇವೆ. ಕೆಲವು ಕಡೆ ಕೂಸು ಹುಟ್ಟಿದ ಐದನೇ ದಿನಕ್ಕೆ ಮಂಚದ ಕಾಲಿಗೆ ಹಗ್ಗದಿಂದ ತೊಟ್ಟಿಲು ಮಾಡಿ ಕೂಸನ್ನು ಹಾಕಿ ತೂಗುತ್ತಾರೆ. ಇದನ್ನು ಐದೇಶಿ ಎಂದು ಕೂಡ ಕರೆಯುತ್ತಾರೆ. ಇಲ್ಲಿಗೆ ಜನನದ ಸೂತಕ ಕಳೆಯುತ್ತದೆ.

**ನಾಮಕರಣ:** ಒಂಬತ್ತು ದಿನಕ್ಕೆ ಮಗುವಿಗೆ ನಾಮಕರಣ ನಡೆಯುವ ಪದ್ಧತಿ ಇವರಲ್ಲಿದೆ. ಕೆಲವು ಭಾಗಗಳಲ್ಲಿ ಹೆಣ್ಣು ಕೂಸಿಗೆ ೧೨ ನೇ ದಿನಕ್ಕೆ ಗಂಡಾಗಿದ್ದರೆ ೧೩ ನೇ ದಿನಕ್ಕೆ ನಾಮಕರಣ ಮಾಡುವ ಸಂಪ್ರದಾಯವಿದೆ. ಕೂಸಿನ ನಾಮಕರಣ ಸಂದರ್ಭದಲ್ಲಿ ಜಿಲ್ಲಿಡಾಕು ಅಥವಾ ಎಕ್ಕೆ ಹೂವಿನಿಂದ ತೆಗೆದ ದಾರವನ್ನು ಮಗುವಿಗೆ ಉಡುದಾರವನ್ನಾಗಿ ತೊಡಿಸುತ್ತಾರೆ. ಮೂರು ದಿನಗಳವರೆಗೆ ಅದು ಮಿಂಚುತ್ತಿರುತ್ತದೆ. ನಂತರ ಅದನ್ನು ಬಿಚ್ಚಿ ಅದಕ್ಕೆ ಬದಲಾಗಿ ಕಾಶಿದಾರವನ್ನು ಉಡಿಸುತ್ತಾರೆ. ನಾಮಕರಣಕ್ಕೆ ಬಂಧುಗಳೆಲ್ಲರನ್ನು ಕರೆದು ತರುತ್ತಾರೆ. ಬಟ್ಟೆಯಿಂದ ತೊಟ್ಟಿಲನ್ನು ಕಟ್ಟಿ ಅದಕ್ಕೆ ಪೂಜೆ ಮಾಡಿ, ನಾಲ್ಕು ಜೋಗುಳ ಪದಹಾಡಿ ಸೋದರ ಮಾವನಿಂದ ಕೂಸಿಗೆ ಹೆಸರನ್ನು ಇಡಿಸುತ್ತಾರೆ.

ಸೋದರ ಮಾವ ಇಲ್ಲದಿದ್ದರೆ ಮಾವ ಆಗುವವರಲ್ಲಿ ಒಬ್ಬರು ಹೆಸರಿಡಲು ಅರ್ಹ ರಾಗುತ್ತಾರೆ. ಮಗುವಿನ ಹೆಸರನ್ನು ಕೂಗುವುದಕ್ಕೆ ಮುಂಚೆ ತಮ್ಮ ಮನೆದೇವರ ಹೆಸರನ್ನು ಕೂಗಿ ನಂತರ ನಿಜನಾಮವನ್ನು ಮೂರು ಸಲ ಕೂಗುವರು. ಕೊನೆಯಲ್ಲಿ ಹೇಳುವ ಹೆಸರೆ ನಿಜವಾದದ್ದು. ಅದನ್ನು ಮಾವನಾದವನು ಹೇಳುವಾಗ ಮಗುವಿನ ಕಿವಿಯಲ್ಲಿ ನಿಧಾನವಾಗಿ ಕೂಗುವನು. ಮಗುವಿನ ಹೆಸರನ್ನು ಎರಡು ಸಲ ಹೇಳಿ ಕೊನೆಗೆ ಕುರ್ರ್ ಎನ್ನುವನು. ಎಲ್ಲರಿಗೂ ಕೇಳುವಂತೆ ಬಾಗಿ ಮಗವಿನ ಕಿವಿಯಲ್ಲಿ ಹೇಳುವಾಗ, ಬಾಗಿದ ಆತನ ಬೆನ್ನಿಗೆ ಮಕ್ಕಳಾದಿಯಾಗಿ ಎಲ್ಲರೂ ಗುದ್ದುವರು. ಹೀಗೆ ಮೂರು ಸಲವೂ ನಡೆಯುತ್ತದೆ.

ನಾಮಕರಣದ ನಂತರ ತೊಟ್ಟಿಲಲ್ಲಿ ಮಗುವಿನ ಪಕ್ಕದಲ್ಲಿನ ಗಂಟು ಅಂದರೆ ಸೋದರ ಮಾವನ ಚಾಜು, ಗುಗ್ರಿಕಾಳು, ಮಂಡಾಳು, ಮತ್ತು ಚಿಲ್ಲರೆ ಹಣ ಬಿಳಿ

ಬಟ್ಟೆಯಲ್ಲಿ ಕಟ್ಟಿ ಇಟ್ಟಿದ್ದನ್ನು ತೆಗೆದುಕೊಂಡು ಹೋಗುವನು. ಅದನ್ನು ಸೋದರಮಾವನ ಗಂಟು ಅಥವಾ ಮ್ಯಾನಮಾಮ ಗಂಟು ಎಂದು ಕೂಡಾ ಕರೆಯುತ್ತಾರೆ.

ನಾಮಕರಣ ಪ್ರಕ್ರಿಯೆ ಮುಗಿದ ನಂತರ ಬಂದ ಎಲ್ಲ ಬಂಧುಗಳಿಗೆ ಗುಗ್ರಿಕಾಳು ಮಂಡಾಳು ಕೊಡುತ್ತಾರೆ. ಇನ್ನು ಕೆಲವು ಸ್ಥಿತಿವಂತರು ಎಲ್ಲರಿಗೂ ಊಟ ಹಾಕುತ್ತಾರೆ. ಹಾಗೆಯೇ ನಾಮಕರಣಕ್ಕೆ ಬಂದ ಬಂಧುಬಾಂಧವರು ಈ ಸಂದರ್ಭದಲ್ಲಿ ಮುಯ್ಯಿ ಅಂದರೆ ಅಯಾರ ಮಾಡುತ್ತಾರೆ.

ಕೂಸುಹುಟ್ಟಿದ ಮೂರು ತಿಂಗಳೊಳಗೆ ಮನೆದೇವರಿಗೆ ಎಲೆ ಕತ್ತರಿ ಕೊಟ್ಟು ಬಂದು ಸೋದರ ಮಾವನನ್ನು ಕರೆಯಿಸಿ ಕೂದಲನ್ನು ಹೊಳೆಯಲ್ಲಿ ಚೆಲ್ಲಿ ಬರುತ್ತಾರೆ. ಈ ಸಂದರ್ಭದಲ್ಲಿ ಸೋದರ ಮಾವನಿಗೆ ಬಟ್ಟೆ ಆಯಾರ ಮಾಡುತ್ತಾರೆ.

ಋತುಮತಿ: ಈ ಸಮುದಾಯದಲ್ಲಿ ಹೆಣ್ಣು ಋತುಮತಿಯಾದರೆ ಐದು ದಿನಗಳವರೆಗೆ ಆಕೆಯನ್ನು ಮುಟ್ಟದಂತೆ ಬೇರೆಯಾಗಿ ಕೂಡಿಸುವರು. ಊಟವನ್ನು ದೂರದಿಂದಲೇ ಎಡೆಮಾಡಿ ಕೊಡುವರು. ಮತ್ತು ಏನೆ ಕೊಟ್ಟರೂ ಎತ್ತಿ ಹಾಕುವುದು ಇಲ್ಲಿ ಕಂಡು ಬರುತ್ತದೆ. ಐದು ದಿನ ಆಕೆ ಮೇಲು ಮುಸುಕು ಹಾಕಿಕೊಂಡು ಹೋಗುವುದು ಹಾಗೂ ಕೈಯಲ್ಲಿ ಕುಡುಗೋಲು, ಬೇವಿನ ತಪ್ಪಲು, ನಿಂಬೆಕಾಯಿ ಹಿಡಿದುಕೊಂಡು ಹೊರಹೋಗಬೇಕು. ಆಕೆಯ ಮೇಲೆ ಯಾವುದೇ ದೃಷ್ಟಿ ತಾಕದಂತೆ ಮಾಡಲು ಈ ಪದ್ಧತಿ ಅನುಸರಿಸುವರು.

ಋತುಮತಿಯಾದ ದಿನ ಸೋದರ ಮಾವನು ಆಕೆಯ ತಲೆಮೇಲೆ ಕೊಬ್ಬರಿ ಬಟ್ಟಲನ್ನು ಮುರಿಯುವನು. ನಂತರ ಆಕೆಗೆ ಕೊಬ್ಬರಿ, ಬೆಲ್ಲ, ಉತ್ತತ್ತಿ ಮತ್ತು ತುಪ್ಪ ಇನ್ನಿತರೆ ಪೌಷ್ಟಿಕ ಆಹಾರವನ್ನು ೯ ದಿನಗಳವರೆಗೆ ಕೊಡುವರು. ಸ್ಥಳದ ಅಭಾವದಿಂದಾಗಿ ಋತುಮತಿ ಹೆಣ್ಣನ್ನು ಪ್ರತ್ಯೇಕ ಗುಡಾರ ಹಾಕಿ ಕೂಡಿಸಲಾಗುವುದು. ನಂತರ ಆಕೆಯನ್ನು ಎಬ್ಬಿಸುವಾಗ ಉಡಿ ತುಂಬಿ, ಶಾಶಿಹಾಕಿ ಕೂಡಿಸಿ ಸೋದರ ಮಾವನಿಂದ ಉಡಿಯನ್ನು ತುಂಬಿಸಿ ನಂತರ ಐದುಮಂದಿ ಮುತ್ತೈದೆಯರಿಂದ ಎಬ್ಬಿಸಲಾಗುವುದು. ಕೂಡ್ರಿಸಿದ ಮೊದಲ ದಿನದಿಂದ ಎಬ್ಬಿಸುವ ಕೊನೆದಿನದವರೆಗೂ ಪ್ರತಿ ಸಂಜೆ ಸೋಬಾನೆ ಹಾಡು ಮತ್ತಿತರ ಸಾಂಸ್ಕೃತಿಕ ಕಾರ್ಯಗಳನ್ನು ನಡೆಸುತ್ತಾರೆ.

ಕೆಲವು ಭಾಗದಲ್ಲಿ ಕಡೆಯ ದಿನ ಸಂಜೆ ಎಬ್ಬಿಸುವ ಮುಂಚೆ ಸೋದರ ಮಾವನು ಹೂದಂಡೆ ಸೀರೆ, ಕುಬುಸ, ತೆಂಗು ಉಡಿಯಕ್ಕಿ ತಂದು ಹುಡುಗಿಯ ಉಡಿ ತುಂಬುತ್ತಾನೆ. ನಂತರ ಬ್ಯಾಟಿಯನ್ನು ಕೊಯ್ದು, ಆ ರಕ್ತದ ಬೊಟ್ಟನ್ನು ಸೋದರಮಾವ ಆಕೆಯ ಹಣೆಗೆ ಹಚ್ಚುತ್ತಾನೆ. ನಂತರ ಮನೆಯವರು ಬ್ಯಾಟಿಯ ಊಟವನ್ನು ಎಲ್ಲರಿಗೂ ಬಡಿಸುವರು. ಇಲ್ಲಿಗೆ ಮೈನೆರೆದ ಸೂತಕ ಕಳೆಯುತ್ತದೆಂದು ನಂಬಿಕೆ ಇದೆ.

ಸೀಮಂತ: ಬೆಳಗಾಂ ಬಿಜಾಪುರ ಭಾಗದವರು ಸೀಮಂತ ಕಾರ್ಯಮಾಡುವುದು (ಕುಬಸದ ಕಾರ್ಯಕ್ರಮ) ಎಂದು ಕರೆಯುತ್ತಾರೆ. ಮೊದಲಿಗೆ ಗಂಡನ ಮನೆಯಲ್ಲಿ ನಂತರ ತವರು ಮನೆಯಲ್ಲಿ ಆಚರಿಸುವರು ಬಳೆ ತೊಡಿಸಿ ಹೊಸಬಟ್ಟೆ ಉಡಿಸಿ. ಆರತಿ ಕಾರ್ಯಕ್ರಮ ಮಾಡುತ್ತಾರೆ. ಮೊದಲನೆಯ ಹೆರಿಗೆ ಹೆಣ್ಣಿನ ತವರು ಮನೆಯಲ್ಲಿ ನಡೆಯುತ್ತದೆ.

ಎಲೆ ಹಂಚುವಾಗ ಮೂರು ಪಂಕ್ತಿ ಸರತಿಯಲ್ಲಿ ಐದು ಎಲೆ, ಅಡಿಕೆ, ಇಟ್ಟು ದೇವರವೀಳ್ಯ, ಸಾಕ್ಷಿವೀಳ್ಯ, ದೈವದ ವೀಳ್ಯ ಎಂದು ಮೂರು ಸ್ಥಾಪಿಸಿದನಂತರ ಉಡಿ ತುಂಬುವ ಕಾರ್ಯ ಪ್ರಾರಂಭಿಸುತ್ತಾರೆ.

ಮರಣ: ಈ ಸಮುದಾಯದಲ್ಲಿ ಶವವನ್ನು ಹೂಳುವ, ಕೆಲವು ಭಾಗಗಳಲ್ಲಿ ಶವವನ್ನು ಸುಡುವ ಪದ್ಧತಿ ಇಂದಿಗೂ ಚಾರಿಯಲ್ಲಿದೆ. ಕೌವುದಿ, ಕಳ್ಳಿಕಟ್ಟಿಗೆ ಚಟ್ಟಕಟ್ಟಿ ಶವಯಾತ್ರೆ ನಡೆಸುತ್ತಾರೆ. ಶವಯಾತ್ರೆ ನಡೆಯುವ ಹಾದಿಯಲ್ಲಿ ಕೋಳಿ ತತ್ತಿ ಒಯ್ಯುತ್ತಾರೆ. ಶವದ ಕಂಕುಳದಲ್ಲಿಇಡುತ್ತಾರೆ. ಹೋಗುವಾಗ ನೀರು ತುಂಬಿದ ಗಡಿಗೆಯನ್ನು ಒಯ್ಯುತ್ತಾರೆ. ಐದು ಸುತ್ತು ಸುತ್ತಿ ಪೂರ್ವ ಎತ್ತರದ ದಂಡ ಮೇಲೆ ಶವವನ್ನು ಕೆಳಗೆ ಇಳಿಸಿ ಕುಣಿಯಲ್ಲಿ ಹಾಕಿ ಅಂತಿಮ ದರ್ಶನ ಪಡೆದು ಎಲ್ಲರೂ ಕೈಕೂಡಿಸಿ ಮಣ್ಣು ಮಾಡಿದ ಬಳಿಕ, ಎರಡು ಕಲ್ಲುಗಳನ್ನು ತಂದು ಒಂದು ಶವದ ಮಧ್ಯ ಭಾಗದಲ್ಲಿ ಮತ್ತು ಕಾಲು ಕಡೆಗೆ ಒಂದು ಇಟ್ಟು ಸಂಬಂಧಪಟ್ಟ ಹಿರಿಯ ಮಗ ತಲೆಗೋರಿ ಕೊಡುತ್ತಾನೆ.

**ತಲೆಗೋರಿ ಕೋಡುವ ವಿಧಾನ:** ಗಡಿಗೆ ಹೊತ್ತು ಐದು ಸುತ್ತು ತಿರುಗುವಾಗ ಪ್ರತಿ ಸುತ್ತಿಗೊಂದರಂತೆ ಐದುಸಾರಿ ಕುರುಪಿ ಇಲ್ಲವೆ ಕುಡುಗೋಲಿನಿಂದ ಹೊಡೆದು ರಂಧ್ರ ಮಾಡುತ್ತಾರೆ. ಉತ್ತರ ದಿಕ್ಕಿಗೆ ಮುಖಮಾಡಿದಾಗ ಹಿಂದಿನ ಸಹಾಯಕರು ನೆಲಕ್ಕೆ ಹೊಡೆಯುತ್ತಾರೆ. ಮಡಿಕೆಯನ್ನು ನೀರು ನಿಲ್ಲದಂತೆಚೂರು ಅತಿ ಚಿಕ್ಕ ಚಿಕ್ಕ ತುಕುಡೆ ಮಾಡಬೇಕು. ದೊಡ್ಡವು ಉಳಿಯಕೂಡದು. ಮಳೆಯ ನೀರು ಅದರಲ್ಲಿ ನಿಲ್ಲಕೂಡದು. ನಿಂತರೆ ದುಷ್ಪಾರಿಣಾಮವೆಂದು ನಂಬುತ್ತಾರೆ. ಶವಸಂಸ್ಕಾರ ಮುಗಿದ ನಂತರ ಸತ್ತವರ ಮನೆಯಲ್ಲಿ ದೀಪ ನೋಡಿ ಅವರವರ ಮನೆಗೆ ತೆರಳಿ, ಮುಂಚೆ ಮನೆಯಲ್ಲಿ ಇದ್ದ ನೀರು ಚೆಲ್ಲಿ ಹೊಸನೀರು ತಂದು ಎಲ್ಲರೂ ಸ್ನಾನ ಮಾಡುತ್ತಾರೆ. ಮರಣ ಹೊಂದಿದವರ ಮನೆಯಲ್ಲಿ ದೈವದ ಆಳು, ಆಹಾರಕ್ಕಾಗಿ ಮನೆಮನೆಗೆ ತಿರುಗಾಡಿ ಸಮಾಜದ ಎಲ್ಲರಿಂದ ತಂದು ಕೊಡುತ್ತಾರೆ. ಅಂದ್ರೇ ಬೀಗರು ವಿಷದ ಬಾಯಿ ಬೆಲ್ಲದ ನೀರಿನಿಂದ ತೊಳಿಸುತ್ತಾರೆ.

ಸತ್ತವನ ಹೆಸರಿನಲ್ಲಿ ಅವನ ಇಷ್ಟ ಆಹಾರ ವಸ್ತುಗಳಾದ ಹಣ್ಣು ಅನ್ನ ಮತ್ತು ತತ್ತಿ ಇವುಗಳನ್ನು ಮೂರನೇ ದಿನ ಆಹಾರವೆಂದು(ಮೂಡೊದ್ದುಲ) ಕೂಡ ಕುಣಿಗೆ ಪೂಜೆಮಾಡಿ ಕುಣಿಯ ಮಧ್ಯಭಾಗದಲ್ಲಿ (ಪಿಂಡಕೂಡು) ಸಣ್ಣ ತಗ್ಗುಮಾಡಿ ಆಹಾರ ಹಾಕುವುದು. ಉಳಿದ ಆಹಾರ ಚೆಲ್ಲಿ ದೂರ ಕುಳಿತು ನೋಡುವರು ಕಾಗೆ ಬಂದು ಮುಟ್ಟಿದಾಗ ದೈವದಲ್ಲಿ ಕಲಿತನೆಂದು ಸ್ಮಶಾನದಿಂದ ಹಿಂತಿರಾಗುತ್ತಾರೆ.

**ಧಾರ್ಮಿಕ ವಿಧಿ ವಿಧಾನಗಳು ದೇವರು ಧಾರ್ಮಿಕ ಕೇಂದ್ರಗಳು**

ಸಮುದಾಯದಲ್ಲಿ ಜನನದಿಂದ ಪ್ರಾರಂಭಿಸಿ ಸಾವಿನ ತನಕವೂ ದೇವರ ಮೇಲೆ ನಂಬಿಕೆಯನ್ನುಟ್ಟು ನಡೆದುಕೊಳ್ಳುತ್ತಾರೆ. ಒಳಿತಾದರೂ ದೇವರೇ ಕಾರಣ, ಕೆಡಕುಗಳಾದರೂ ದೇವರೇ ಕಾರಣವೆಂದು ಬಗೆಯುತ್ತಾರೆ. ಅದಕ್ಕಾಗಿ ಒಳಿತಾಗಲು ಮತ್ತು ಕೆಡಕುಗಳನ್ನು ತಡೆಯಲು ದೇವರ ಮೊರೆ ಹೋಗುತ್ತಾರೆ. ಈ ರೀತಿಯ ಆಚರಣೆಗಳನ್ನು

ದೇವರಿಗೆ ಮಾಡುತ್ತೇವೆ ಎಂದು ಬೇಡಿಕೊಳ್ಳುತ್ತಾರೆ. ಅದಕ್ಕಾಗಿ ತಮ್ಮ ಮನೆದೇವರಿಗೆ, ಕುಲದೇವರಿಗೆ ಹಾಗೂ ಊರದೇವರುಗಳಿಗೆ ಜಾತ್ರೆಮಾಡಿ, ಹಬ್ಬಗಳನ್ನು ಆಚರಿಸಿ ಹರಕೆ ಪೂರೈಸುತ್ತಾರೆ.

ಧಾರ್ಮಿಕ ವಿಧಾನಗಳು ಮತ್ತು ದೇವರು

ಈ ಸಮುದಾಯದಲ್ಲಿ ಎರಡು ರೀತಿಯ ದೈವಾರಾಧನೆಗಳಿವೆ. ಒಂದು ಕುಲದೇವರು ಮತ್ತೊಂದು ಮನೆದೇವರು. ಈ ಸಮುದಾಯದವರು ತಮ್ಮ ಕುಲದೇರನ್ನಾಗಿ ತಿರುಪತಿಯ ವೆಂಕಟರಮಣನಿಗೆ ನಡೆದುಕೊಳ್ಳುತ್ತಾರೆ. ವಿಶೇಷವಾಗಿ ಕಾರ್ತಿಕ ಮಾಸದಲ್ಲಿ ಈ ದೇವರ ಹರಕೆ ತೀರಿಸುತ್ತಾರೆ. ಆ ಕಾರಣಕ್ಕಾಗಿ ಪ್ರತಿ ಶನಿವಾರ ವ್ರತ ಮಾಡುತ್ತಾರೆ. ಶನಿವಾರದಂದೇ ಗೋಪಾಳ ಬುಟ್ಟಿಯನ್ನು ಹೊತ್ತು ಭಿಕ್ಷೆಗೆ ಹೋಗುತ್ತಾರೆ. ಪ್ರತಿ ಶನಿವಾರದಂದು ಮಾಂಸಹಾರ ನಿಷೇಧ ಮಾಡುವ ಇವರು, ಮಾಂಸ ಸೇವನೆ ಮಾಡಿದ ಯಾವುದೇ ದಿನ ಹನುಮಂತನ ದೇವಸ್ಥಾನ ಪ್ರವೇಶಿಸುವುದಿಲ್ಲ. ತಿರುಪತಿ ಗಿರಿಗೆ ಹೋಗದ ಬಹುತೇಕರು ತಮ್ಮ ಸಮೀಪದ ಪ್ರಸಿದ್ಧ ಹನುಮಂತ ದೇವರಿಗೆ ಹೋಗುತ್ತಾರೆ. ಹನುಮಂತನನ್ನು ಸಮುದಾಯದವರು ತಿಮ್ಮಪ್ಪ ಅಥವಾ ವೆಂಕಟರಮಣನ ಅವತಾರವೆಂದು ನಂಬುತ್ತಾರೆ.

ವಿಶೇಷವಾಗಿ ಎಲ್ಲ ಕಡೆಗೂ ಪ್ರತಿ ವರ್ಷ ದೀಪಾವಳಿ ಆದ ಏಳನೇ ಶನಿವಾರಕ್ಕೆ ಕಾರ್ತಿಕ ಮಾಸದಲ್ಲಿ ಹನುಮಂತ ದೇವರ ಜಾತ್ರೆ ನಡೆಯುತ್ತದೆ. ಏಳನೇ ಶನಿವಾರ ಮತ್ತು ಎಂಟನೇ ಶನಿವಾರ ಹೀಗೆ ಎರಡು ಸಾರೆ ಜಾತ್ರೆ ನಡೆಯುತ್ತದೆ. ಮೊದಲ ಶನಿವಾರ ಸಾಧಾರಣ ಜಾತ್ರೆಯಾದರೆ, ಎರಡನೇ ಶನಿವಾರ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಹನುಮಂತ ದೇವರಿಗೆ ಬರುವವರು ಮನೆಯಿಂದಲೇ "ವೆಂಕಟರಮಣಾ ಗೋವಿಂದಾ ಗೋವಿಂದ" ಎಂದು ಹೇಳುತ್ತ ಬರುತ್ತಾರೆ. ದೇವರಿಗೆ ಕಾಯಿ ಕರ್ಪೂರ ಸಲ್ಲಿಸುತ್ತಾರೆ. ಅಲ್ಲಿರುವ ಗೋಪಾಳ ಬುಟ್ಟಿಗೆ ತಮ್ಮ ಹರಕೆಯ ಮುಡುಪು ಹಾಕುತ್ತಾರೆ. ಕೆಲವರು ಗುಡಿಯ ಮುಂದಿನ ಗೋಪಾಳ ಬುಟ್ಟಿಯನ್ನು ಹೆಗಲಿಗೆ ಹಾಕಿಕೊಂಡು ವೆಂಕಟರಮಣನ ಸ್ತುತಿ ಮಾಡಿ ಐದು ಜನಗಳಿಂದ ಭಿಕ್ಷೆ ಬೇಡಿ ಅದನ್ನು ದೇವರಿಗೆ ಒಪ್ಪಿಸುತ್ತಾರೆ. ಮತ್ತು ದೇವರಿಗೆ ತುಪ್ಪದ ಇಲ್ಲವೆ ಎಣ್ಣೆಯ ದೀಪಗಳನ್ನು ಹಚ್ಚಿ ಹರಕೆ ತೀರಿಸುತ್ತಾರೆ.

**ಧಾರ್ಮಿಕ ಕೇಂದ್ರಗಳು:** ತಿರುಪತಿಯ ತಿಮ್ಮಪ್ಪನ ಬೆಟ್ಟವೇ ಸಮುದಾಯದ ಮೂಲ ಧಾರ್ಮಿಕ ಕೇಂದ್ರ, ಅಲ್ಲಿಗೆ ಹೋಗಲು ಆಗದವರು ತಮ್ಮ ಸುತ್ತಲಿನ ಪ್ರಸಿದ್ಧ ಹನುಮಂತ ದೇವರ ದೇವಸ್ಥಾನಗಳನ್ನು ತಮ್ಮ ಧಾರ್ಮಿಕ ಕೇಂದ್ರಗಳೆಂದು ಭಾವಿಸುತ್ತಾರೆ. ಅವುಗಳಲ್ಲಿ ಪ್ರಸಿದ್ಧವಾದವುಗಳೆಂದರೆ, ಹಂಸನೂರು, ಕದರಮಂಡಲಗಿ, ತುಳಸಿಗೇರಿ, ಕಲ್ಲೋಳಿ, ಕನಕಗಿರಿ, ಬಯ್ಯಾಪುರ, ಬಂಕಾಪುರ, ಕುದುರೆಮೋತಿ ಪ್ರಸಿದ್ಧ ಧಾರ್ಮಿಕ ಕೇಂದ್ರಗಳೆನಿಸಿವೆ. ಈ ಕಾರಣಕ್ಕಾಗಿಯೇ ಚೆನ್ನದಾಸರ ಸಮುದಾಯದವರಲ್ಲಿ ಕುಲದೇವರ ಹೆಸರನ್ನು ತಮ್ಮ ಮಕ್ಕಳಿಗೆ ಇಡುವ ವಾಡಿಕೆಯಿದೆ. ಗಂಡು ಮಕ್ಕಳಿಗೆ ವೆಂಕಪ್ಪ [ಯಂಕಪ್ಪ],

ಮೂಡಲ ಗಿರಿಯಪ್ಪ, ಬಾಲಾಜಿ, ಬಾಲಕೃಷ್ಣ, ಬಾಳಪ್ಪ, ಹನುಮಂತ, ಮಾರುತಿ, ಆಂಜನೇಯ, ಬಾಲತಾತ, ತಾತೆಪ್ಪ ಮತ್ತು ರಾಮ, ಲಕ್ಷ್ಮಣ ಹೆಸರುಗಳನ್ನಿಡುತ್ತಾರೆ. ಇನ್ನು ಕೆಲವರು ಈ ಹೆಸರುಗಳ ಮುಂದೆ ದಾಸ, ದಾಸ್, ದಾಸಯ್ಯ ಎಂದು ಇಟ್ಟಿರುತ್ತಾರೆ. ಹೆಣ್ಣುಮಕ್ಕಳಿಗೂ ಕೂಡ, ಹನುಮವ್ವ, ಯಂಕವ್ವ, ಬಾಳವ್ವ ಎಂದು ಹೆಸರಿಡುವರು.

ಮನೆದೇವರನ್ನಾಗಿ ಸಮುದಾಯದ ಬಹುತೇಕ ಗುಂಪುಗಳೆಲ್ಲ ಹೆಣ್ಣುದೇವರನ್ನು ಆರಾಧಿಸುತ್ತಾರೆ. ಯಲ್ಲಮ್ಮ, ದುರುಗಮ್ಮ, ಮಾರೆಮ್ಮ, ಮರುಗಮ್ಮ ತಾಯಮ್ಮ, ಭಾಗ್ಯಮ್ಮ ಅಥವಾ ಭಾಗಮ್ಮ ಉದ್ದಮ್ಮ, ಮತ್ತು ಹುಲಿಗೆಮ್ಮ ಇವು ಪ್ರಮುಖ ಮಾತೃ ದೇವತೆಗಳು. ಈ ದೇವರುಗಳ ಆಚರಣೆಯ ದಿನಗಳನ್ನಾಗಿ ಮಂಗಳವಾರ ಮತ್ತು ಶುಕ್ರವಾರಗಳನ್ನು ಮಾಡುತ್ತಾರೆ. ಗೌರಿ, ಹೊಸ್ತಿಲ ಮತ್ತು ಭರತ ಹುಣ್ಣಿಮೆ ದೇವರುಗಳ ಜಾತ್ರೆ ನೆರವೇರಿಸುವ ವಿಶೇಷ ಹುಣ್ಣಿಮೆಗಳಾಗಿವೆ. ಕೆಲವು ಕಡೆ ಈ ದೇವಿಯರುಗಳ ಜಾತ್ರೆಯ ಸಂದರ್ಭದಲ್ಲಿ ಬೇವಿನ ಉಡುಗೆ ಉಡುವ ಸಂಪ್ರದಾಯ ಆಚರಣೆಯಲ್ಲಿದೆ.

ಈ ದೇವತೆಗಳಿಗೆ ಪ್ರಾಣಿ ಬಲಿಕೊಡುತ್ತಾರೆ. ಪ್ರತಿ ವರುಷ ಮತ್ತು ಮೂರು ವರುಷಗಳಿಗೊಮ್ಮೆ ಉಗಾದಿ ಇಲ್ಲವೆ ವಿಜಯದಶಮಿಯಂದು ಈ ಜಾತ್ರೆಯನ್ನು ನೆರವೇರಿಸುತ್ತಾರೆ. ಜಾತ್ರೆಗಾಗಿ ಪಟ್ಟಿ[ವಂತಿಗೆ]ಯನ್ನು ಮೊದಲಿಗೆ ಹೊಲೆಯರ ಇಲ್ಲವೆ ಮಾದಿಗರ ಮನೆಯಿಂದ ಎತ್ತಿ ನಂತರ ಸಮಾಜದವರಲ್ಲಿ ಎತ್ತುತ್ತಾರೆ. ಬಲಿಕೊಡುವ ಜಾತ್ರೆ ಮಾಡುವ ಒಂದು ವಾರ ಮೊದಲು ಸಮೀಪದ ತಮ್ಮ ಮನೆಯ ದೇವತೆಗೆ ಹೋಗಿ ಉಡಿತುಂಬಿ ಬರುತ್ತಾರೆ. ಉಡಿತುಂಬಿ ಬರದೆ ಜಾತ್ರೆ ಮಾಡುವಂತಿಲ್ಲ. ಉಡಿ ತುಂಬಿದ ಒಂದು ವಾರದಲ್ಲಿ ಬರುವ ಮಂಗಳವಾರ ಇಲ್ಲವೆ ಶುಕ್ರವಾರ ಜಾತ್ರೆ ಮಾಡಲೇಬೇಕು. ಜಾತ್ರೆಯನ್ನು ಮುಂದೂಡುವಂತಿಲ್ಲ. ಅಂಥ ಸಂದರ್ಭದಲ್ಲಿ ಸಾವು ನೋವು ಸಂಭವಿಸಿದರೂ ಜಾತ್ರೆ ಮುಂದೂಡುವುದಿಲ್ಲ. ಜಾತ್ರೆಗೆ ಪರ ಊರುಗಳ ಸಂಬಂಧಿಕರನ್ನು ಕರೆಸಿರುತ್ತಾರೆ. ಅಂದು ಸಂಜೆ ಸಾಮೂಹಿಕವಾಗಿ ಮಾಂಸದ ಊಟ ವಿರುತ್ತದೆ. ಅದು ಮುಗಿದ ಬಳಿಕ ರಾತ್ರಿಯಿಡೀ ಒಂದು ಬೈಲಾಟ, ನಾಟಕ ಅಥವಾ ಗೀಗೀ ಪದಗಳ ಹಾಡುಗರಿಕೆ ನಡೆಸುತ್ತಾರೆ.

ಮನೆದೇವರುಗಳ ಹರಕೆಯಿಂದ ಹುಟ್ಟುವ ಮಕ್ಕಳಿಗೆ ಆ ದೇವರ ಹೆಸರುಗಳನ್ನಿಡುತ್ತಾರೆ. ಯಲ್ಲಪ್ಪ –ಯಲ್ಲಮ್ಮ, ಹುಲಿಗೆಪ್ಪ –ಹುಲಿಗೆಮ್ಮ, ತಾಯಪ್ಪ –ತಾಯಮ್ಮ, ಉದ್ದಪ್ಪ – ಉದ್ದವ್ವ, ಮರೆಪ್ಪ –ಮರೆಮ್ಮ, ದುರುಗಪ್ಪ –ದುರುಗಮ್ಮ, ಭಾಗಮ್ಮ –ಭಾಗಪ್ಪ ಹೆಸರುಗಳನ್ನಿಡುವರು.

ಹಬ್ಬಗಳು: ಸಮುದಾಯದವರು ಆಚರಿಸುವ ಹಬ್ಬಗಳಲ್ಲಿ ನಾಗರ ಪಂಚಮಿ, ವಿಜಯದಶಮಿ, ದೀಪಾವಳಿ, ಮತ್ತು ಯುಗಾದಿ ಪ್ರಮುಖವಾದವುಗಳು. ನಾಗರ ಪಂಚಮಿಯ ಮುನ್ನಾದಿನ ಸಂಜೆ ಹುತ್ತಿನ ಮಣ್ಣು ತಂದು ನಾಗಪ್ಪನ ಮಣ್ಣಿನ ಮೂರ್ತಿ ಮಾಡುತ್ತಾರೆ. ಅದರ ಮಗ್ಗುಲಲ್ಲಿ ಚಿಕ್ಕದೊಂದು ಹೊಂಡಮಾಡಿ ಹೊಂಡದಲ್ಲಿ

ನಾಗಪ್ಪಗೆ ಹಾಲು ತಂದು ಸುರಿಯುತ್ತಾರೆ. ಅಲ್ಲಿರುವ ಸಮುದಾಯಕ್ಕೆ ಅದೊಂದೇ ನಾಗಪ್ಪ. ಅಂದು ರಾತ್ರಿ ಪ್ರತಿ ಮನೆಯವರು ನೂಲಿನ ಎಳೆಗಳನ್ನು ಮಾಡಿ ಅವುಗಳಲ್ಲಿ ಅರ್ಧ ನಾಗಪ್ಪನಿಗೆ ಹಾಕಿ, ಉಳಿದ ಅರ್ಧದಾರಗಳನ್ನು ಮನೆಯವರಿಗೆ ಹಾಕಿಕೊಳ್ಳಲು ಮನೆಗೆ ತರುತ್ತಾರೆ. ಅದರ ಜೊತೆಗೆ ಉರಿದ ಅರಳು, ತಂಬಿಟ್ಟು, ಹಾಲು ನಾಗಪ್ಪನಿಗೆ ನೈವೇದ್ಯ ಮಾಡುತ್ತಾರೆ. ಮರುದಿನ ಬೆಳಿಗ್ಗೆ ಮನೆಯಲ್ಲಿನ ಇಲ್ಲವೆ ನಾಗಪ್ಪ ಮೂರ್ತಿಗಳಿಗೆ ಹಾಕಿದ ದಾರಗಳನ್ನು ತೆಗೆದುಕೊಂಡು ಕೊರಳಿಗೆ ಧರಿಸಿಕೊಳ್ಳುತ್ತಾರೆ. ಇಲ್ಲವೆ ಬಲಗೈಯ ಮಣಿಕಟ್ಟಿಗೆ ಕಟ್ಟಿಕೊಳ್ಳುತ್ತಾರೆ. ಹೀಗೆ ಮಾಡುವುದರಿಂದ ನಾಗಪ್ಪನ ಆರ್ಶೀವಾದ ತಮ್ಮ ಮೇಲಿರುತ್ತದೆಂದು ನಂಬುತ್ತಾರೆ.

ಅಂದು ಮುಂಜಾನೆ ತವರು ಮನೆಗೆ ಬಂದಿರುವ ಹೆಣ್ಣುಮಕ್ಕಳು ಅಣ್ಣ ತಮ್ಮಂದಿರರಿಗೆ ಆರತಿ ಮಾಡುತ್ತಾರೆ. ಅಂದು ಸಂಜೆಯವರೆಗೂ ಸಮುದಾಯದವರು ಕಟ್ಟಿರುವ ವಿವಿಧ ಜೋಕಾಲಿಗಳಲ್ಲಿ ತೂಗಿ ಆಟವಾಡುತ್ತಾರೆ. ಜೋಕಾಲಿಯ ಎದುರಿಗೆ ಎತ್ತರದಲ್ಲಿ ರುಪಾಯಿಗಳ ನೋಟು ಮತ್ತು ಕೊಬ್ಬರಿ ಬಟ್ಟಲುಗಳನ್ನು ಕಟ್ಟಿರುತ್ತಾರೆ, ಸಾಹಸಿಗಳಿದ್ದವರು ಜೋಕಾಲಿಯನ್ನು ಅಷ್ಟು ಎತ್ತರಕ್ಕೆ ಏರಿಸಿ ಬಾಯಿಂದ ಕಚ್ಚಿ ಹರಿದುಕೊಳ್ಳುವ ಸ್ಪರ್ಧೆಯಲ್ಲಿ ಗಂಡಸರು ಹೆಂಗಸರು ಭಾಗವಹಿಸುತ್ತಾರೆ. ಅಂದು ರಾತ್ರಿ ಎಲ್ಲರೂ ಮಲಗಿದ ಮೇಲೆ ಪೂಜಾರಿಯಾದವನು ನಾಗಪ್ಪನ ಮಣ್ಣಿನ ಮೂರ್ತಿಯನ್ನು ಮುರಿದು ಮುಚ್ಚುತ್ತಾನೆ. ಅದರ ಜಾಗದಲ್ಲಿ ಒಂದು ಬುಟ್ಟಿಯನ್ನು ತಿರವಿ ಕೆಳಮುಖ ಮಾಡಿ ಹಾಕುತ್ತಾರೆ. ಕೊಬ್ಬರಿಯ ಬಟ್ಟಲನ್ನು ಚೂರುಚೂರುಮಾಡಿ ಮೇಲೆ ಎಸೆಯುತ್ತಾರೆ. ಹೀಗೆ ನಾಗರ ಪಂಚಮಿಯ ಆಚರಣೆ ಮಾಡುತ್ತಾರೆ.

**ವಿಜಯದಶಮಿ:** ಅಂದು ತಮ್ಮಲ್ಲಿರುವ ಆಯುಧಗಳನ್ನೆಲ್ಲ ಸೇರಿಸಿ ಪೂಜೆ ಮಾಡುತ್ತಾರೆ. ಮರುದಿನ ಸಂಜೆ ಹೋಗಿ ಬನ್ನಿಯ ಗಿಡಕ್ಕೆ ಪೂಜೆಸಲ್ಲಿಸಿ ಬನ್ನಿಯ ಎಲೆಗಳಿರುವ ಚಿಕ್ಕ ಚಿಕ್ಕ ಟೊಂಗೆಗಳನ್ನು ಕಡಿದು ದೇವರಿಗೆ ಬನ್ನಿ ಏರಿಸುತ್ತಾರೆ. ಬಳಿಕ ಸಮುದಾಯದ ಎಲ್ಲರೂ ತಮ್ಮ ತಮ್ಮವರಿಗೆ ನಾವು ನೀವು ಬಂಗಾರದಂತೆ ಇರೋಣ ಎಂದು ಹೇಳಿ ಒಬ್ಬರಿಗೊಬ್ಬರು ಬನ್ನಿ ಕೊಟ್ಟು ಕಾಲಿಗೆ ನಮಸ್ಕರಿಸುವುದು, ಕೈಮುಗಿದು ಆರ್ಶೀವಾದ ಬೇಡುವುದು ಮಾಡುತ್ತಾರೆ. ವಿಜಯದಶಮಿಯಂದೇ ಕೆಲವರು ತಮ್ಮ ಮನೆಯ ಅಂಗಳದಲ್ಲಿನ ಮೇಕೆ ಇಲ್ಲವೆ ಎಮ್ಮೆ ಕಟ್ಟುವ ಗೂಟಕ್ಕೆ ಪೂಜೆ ಸಲ್ಲಿಸಿ ಹಿರಿಯರ ಹೆಸರಲ್ಲಿ ಕೋಳಿಬಲಿ ಕೊಟ್ಟು ಅಡುಗೆ ಮಾಡಿ ನೈವೇದ್ಯ ತೋರಿಸಿ ಊಟ ಮಾಡುತ್ತಾರೆ.

**ದೀಪಾವಳಿ:** ಈ ಹಬ್ಬದಲ್ಲಿ ತಮ್ಮ ಮನೆಯ ಹೆಣ್ಣಮಕ್ಕಳನ್ನು ತವರಿಗೆ ಕರೆದುಕೊಂಡು ಬರುತ್ತಾರೆ. ಬೆಳಿಗ್ಗೆ ಗಂಡುಮಕ್ಕಳಿಗೆ ಎಣ್ಣೆ ಸ್ನಾನ ಮಾಡಿಸುತ್ತಾರೆ. ಇಳಿಹೊತ್ತಿಗೆ ಹೆಣ್ಣು ಮಕ್ಕಳುದೇವರಿಗೆ ಆರತಿ ಮಾಡಿದ ನಂತರ ತಮ್ಮ ತಂದೆಗೆ ಹಾಗೂ ಅಣ್ಣತಮ್ಮಂದಿರರಿಗೆ ಸಾಲಾಗಿ ಕೂಡ್ರಿಸಿ ದೀರ್ಘ ಆಯುಸಿಗಳಾಗಲಿ ಎಂದು ಹರಸಿ ಆರತಿ ಮಾಡುತ್ತಾರೆ, ಹೆಣ್ಣು ಮಕ್ಕಳಿಗೆ ಸೀರೆ, ಕುಪ್ಪಸ ಮತ್ತು ಹಣವನ್ನು ಆಯೇರ ಮಾಡುತ್ತಾರೆ. ರಾತ್ರಿ ದೀಪಹಚ್ಚಿ ಲಕ್ಷ್ಮಿಯನ್ನು ಪೂಜೆಮಾಡಿ ಪದ ಹಾಡುತ್ತಾರೆ.

**ಯುಗಾದಿ ಮತ್ತು ಹಿರಿಯರ ಪೂಜೆ:** ಯುಗಾದಿ ಈ ಸಮುದಾಯದ ದೊಡ್ಡ ಹಬ್ಬ. ಗಂಡನ ಮನೆಯಲ್ಲಿರುವ ತಮ್ಮ ಹೆಣ್ಣುಮಕ್ಕಳನ್ನು ಕರೆಯಿಸಿಕೊಳ್ಳುತ್ತಾರೆ. ಯುಗಾದಿ ಪಾಡ್ಯದ ಮೊದಲ ರಾತ್ರಿ ಕಡಲೆ ಬೇಳೆಯನ್ನು ನೆನೆಯಿಡುತ್ತಾರೆ. ಬೆಳಗ್ಗೆ ಎದ್ದು ಸಮುದ್ರಕಾಗೆಯ ಮುಖ ನೋಡುತ್ತಾರೆ. ಅಂದು ಆ ಪಕ್ಷಿ [ರತ್ನಪಕ್ಷಿ] ಕಂಡರೆ ಶುಭವೆಂದು ನಂಬುತ್ತಾರೆ. ಬಳಿಕ ಬೇವಿನ ಗಿಡದ ಎಲೆ ಹೂವುಗಳನ್ನು ನೀರಿನಲ್ಲಿ ಹಾಕಿ ಎಲ್ಲರೂ ಸ್ನಾನ ಮಾಡುತ್ತಾರೆ. ಬಳಿಕ ರಾತ್ರಿ ನೆನೆಯಿಟ್ಟ ಬೇಳೆಯನ್ನು ಬೇವಿನ ಎಲೆ ಮತ್ತು ಹೂವಿನಿಂದ ಬೆಲ್ಲದೊಂದಿಗೆ ಮಿಶ್ರಣ ಮಾಡಿ ಎಲ್ಲರಿಗೂ ಹಂಚಿ ಕಷ್ಟ ಸುಖ ಎರಡನ್ನು ಸಮನಾಗಿ ಹಂಚಿಕೊಳ್ಳುವ ಹಿರಿಮೆ ನಿನ್ನದಾಗಲಿ ಎಂದು ಹರಸುತ್ತಾರೆ. ಅಂದು ಮುಂಜಾನೆ ಮನೆದೇವರಿಗೆ ಹೋಳಿಗೆ ಎಡೆಮಾಡುತ್ತಾರೆ. ಮಧ್ಯಾಹ್ನ ಬಲಿ ಕೊಡುವ ಮೂಲಕ ಹಿರಿಯರ ಪೂಜೆ ಮಾಡುತ್ತಾರೆ.

ಹಿರಿಯರ ಪೂಜೆ

ಚೆನ್ನದಾಸರ ಧಾರ್ಮಿಕ ಪೂಜೆಯಲ್ಲಿ ಕುಲದೇವರ ಹಿರಿಯರ ಪೂಜೆಯು ಪ್ರಮುಖವಾಗಿದೆ. ಈ ಜನರು ಸತ್ತ ಹಿರಿಯರನ್ನು ದೈವದಲ್ಲಿ ಸೇರಿಸಿಕೊಂಡು ದೇವರೆಂದು ಭಾವಿಸಿ ಬೆಳ್ಳಿಯ ಲೋಹದ ಪದಕಗಳನ್ನು ಮಾಡಿಸಿ, ದೇವರೆಂದು ನಂಬಿ, ಕುಲದೇವರ ನಂತರ ಹಿರಿಯರೇ ದೇವರೆಂದು ವಿಶೇಷ ಕಾರ್ಯಕ್ರಮವನ್ನು ವರ್ಷಕ್ಕೆ ಒಂದು ಸಾರಿ ಮೂರು ವರ್ಷಕ್ಕೆ ಒಂದು ಸಾರಿ, ಹಿರಿಯರ ಮಣ್ಣಿನ ಮೂರ್ತಿಯನ್ನು ಮಾಡಿ ಪೂಜಿಸಿ ಪ್ರಾಣಿಬಲಿ(ಆಡು, ಕುರಿ, ಕೋಳಿ)ಯ ಮುಖಾಂತರ ಭಕ್ತಿಯನ್ನು ಸಮರ್ಪಿಸುತ್ತಾರೆ. ಹಿರಿಯರೆಂಬ ಪದಕಗಳು ಸಮುದಾಯದ ಪ್ರತಿಯೊಬ್ಬರ ಮನೆಗಳಲ್ಲಿವೆ.

## ಜನಪದ ವೈದ್ಯ

ಈ ಸಮುದಾಯದ ಜನರು ವೈದ್ಯ ವೃತ್ತಿಯಲ್ಲಿ ಅತಿ ನಿಪುಣರಾಗಿದ್ದಾರೆ. ಬೇಟೆಯಾಡಲು ಹೋದಾಗ ಅಡವಿಯಲ್ಲಿ ಕೆಲವು ಗಿಡಮೂಲಿಕೆಗಳಾದ ಬಜೆ, ಕೇರಕಾಯಿ, ಹೊಡಮೂರಕಾಯಿ, ಕೋನ್‌ಕುಸ ಸಂಗ್ರಹಿಸಿರುತ್ತಾರೆ. ಪೋಲಿಯೊ ಬಾರದಂತೆ ಎಲುಬಿನ ಮಣಿಗಳನ್ನು ಹಾಗೂ ಕಾಮಾಲೆ, ಧನುರುವಾತ, ಪಿತ್ತ, ಈ ಕಾಯಿಲೆಗಳಿಗೆ ಔಷಧಿಯಾಗಿ ಔಡಲ ಬೀಜ, ಜಾಜಿಕಾಯಿ, ಅಜಿವಾನ, ಬಜೆ, ಈ ರೀತಿಯ ರೋಗಗಳಿಗೆ ಔಷಧಿ ಉಪಚಾರಗಳನ್ನು ನೀಡುತ್ತಿದ್ದರು. ಹಾಗೂ ಬಾಣಂತಿ ಹೆಣ್ಣುಮಗಳಿಗೆ ಕೀಲುನೋವು ಬಾರದಂತೆ ಕಷಾಯವನ್ನು ತಯಾರಿಸಿ ಕುಡಿಸುತ್ತಿದ್ದರು. ಅಲ್ಲದೆ ಸರ್ಪದ ಹುಣ್ಣಿಗೆ ಔಷಧವನ್ನು ತಯಾರಿಸಿ ಕೊಡುವವರೂ ಇದ್ದಾರೆ.

**ನಂಜುರೋಗಕ್ಕೆ:** ಕಾಣಿಗೆನ ಬೀಜ (ಹೊಂಗೆ ಬೀಜ) ಮುತ್ತಲಿ ಬೀಜದ ಪುಡಿಯನ್ನು ತೀಡಿ ನಂಜಾದ ಗಾಯಕ್ಕೆ ದಿನಂಪ್ರತಿ ಹಚ್ಚುಲು ಈ ರೋಗ ವಾಸಿಯಾಗುತ್ತದೆ.

**ಮೂಲವ್ಯಾದಿ:** ಹಾಲಿವಿ ಪ್ರಾಣಿಯ ಚಿಪ್ಪಿನಿಂದ ತಯಾರಿಸಲಾದ ಉಂಗುರವನ್ನು ಮೂಲವ್ಯಾದಿವುಳ್ಳ ವ್ಯಕ್ತಿಗಳಿಗೆ ನೀಡಿ ಅದರ ಉಪಯೋಗ ಮಾಡುವಂತೆ ನಿಯಮಗಳನ್ನು

ಹೇಳಿಕೊಡುತ್ತಾರೆ. ಇದರ ನಿಯಮದಂತೆ ಈ ವ್ಯಾದಿಗೆ ಒಳಗಾದ ವ್ಯಕ್ತಿ ಕಟ್ಟುನಿಟ್ಟಾಗಿ ಪಾಲಿಸಿದಲ್ಲಿ ಈ ವ್ಯಾದಿ ಗುಣವಾಗುತ್ತದೆ. ಮೂಳೆಗಳಿಂದ ಔಷಧಿ ತಯಾರಿಸುವ ಕಲೆಯು ಈ ಜನಕ್ಕೆ ಗೊತ್ತಿದೆ.

**ಕಿವಿ ಬೇನೆ:** ಕಿವಿನೋವಿನಲ್ಲಿ ವಿಧವಿಧದ ಕಾಯಿಲೆಯುಂಟು. ಕಿವಿಸೋರುವಿಕೆಗೆ ಗಜಗೆಯ ಎಲೆಯ ರಸವನ್ನು ಹಾಕುತ್ತಾರೆ. ಹಾಗೂ ಕಿವಿಯ ಕೀವುಸೋರುವ ವಾಸನೆ ಇದ್ದಲ್ಲಿ ಅದಕ್ಕೆ ಕೋಳಿಯ ಪಿತ್ತರಸ ಹಾಗೂ ಮೊಲದ ಪಿತ್ತರಸ ಹಾಕುತ್ತಾರೆ.

**ಕಂಠವಾತ:** ಕಂಠವಾತಕ್ಕೆ ಏಡಿಯ ಕಷಾಯವನ್ನು ಕುಡಿಸುತ್ತಾರೆ ಮತ್ತು ಸಜ್ಜೆಸೊಪ್ಪಿಯ ಸೂಡನ್ನು, ಕಂಠಕ್ಕೆ ಒರೆಸಿದಾಗ ಕಂಠವಾತವು ಕಡಿಮೆಯಾಗುತ್ತದೆ.

**ಗಾಯ:** ದೇಹದ ಯಾವುದೇ ಭಾಗದ ದೊಡ್ಡ ಅಥವಾ ಸಣ್ಣಗಾಯಕ್ಕೆ ನಲ್ಲ ಕರಿ ಹಲಬು, ಹಲಬು, ಬಳ್ಳಯರಸವನ್ನು ಗಾಯದ ಮೇಲೆ ದಿನನಿತ್ಯ ಮೂರು ಸಾರಿ ಇಟ್ಟಲ್ಲಿ ಗಾಯ ವಾಸಿಯಾಗುತ್ತದೆ.

**ಹುಚ್ಚು ನಾಯಿ ಕಡಿತ:** ಹುಚ್ಚುನಾಯಿ ನಾಯಿ ಕಡಿದ ದೇಹದ ಯಾವುದೇ ಭಾಗದ ಮೇಲೆ ಅಡವಿ ಅಕ್ಕರಸಿ ತೊಪ್ಪಲ ರಸದಲ್ಲಿ ಮೆಣಸುಹಾಕಿ ಮತ್ತು ಹಂದಿರಕ್ತ ಕುಡಿಸವರು.

**ಚೇಳುಕಡಿತ:** ಬಜೆಯ ಬೀಜವನ್ನು ಗಂಧಬರುವಂತೆ ತೀಡಿ ಚೇಳು ಕಡಿದ ಭಾಗಕ್ಕೆ ಹಚ್ಚಿದರೆ ಕಡಿತದ ಪರಿಣಾಮವು ವಾಸಿಯಾಗುತ್ತದೆ.

**ನಾಯಿಕೆಮ್ಮು:** ಅಳಿಲಿನ ರಕ್ತ ಹಾಗೂ ಸಕ್ಕರೆಯನ್ನು ಬೆರೆಸಿ ನಾಯಿಕೆಮ್ಮು ಇದ್ದವರಿಗೆ ಒಂದುವಾರ ಕಾಲ ಬರಿಹೊಟ್ಟೆಯಲ್ಲಿ ಕುಡಿಸಿದರೆ ರೋಗವಾಸಿಯಾಗುತ್ತದೆ.

**ಪ್ರಾಣಿರೋಗ:** ಎತ್ತು, ಎಮ್ಮೆ, ಹಸು ಇವುಗಳಿಗೆ ಬಾಯಿ ರೋಗ ಬಂದರೆ ಜೀವಂತ ಚಿಕ್ಕ ಮೀನುಗಳನ್ನು ಹಿಡಿದು ತಂದು ಗೊಟ್ಟದ ಮೂಲಕ ಅವುಗಳಿಗೆ ಕುಡಿಸಿದರೆ ವಾಸಿಯಾಗುತ್ತದೆ.

ಎತ್ತು, ಎಮ್ಮೆ, ಹಸು, ಆಡು, ಕುರಿ ಈ ಪ್ರಾಣಿಗಳಿಗೆ ಹೊಟ್ಟೆ ಉಬ್ಬಿದರೆ, ಉಸಿರಾಟಕ್ಕೆ ತೊಂದರೆಯಾಗಿದ್ದರೆ ಅಡುಗೆಯ ಎಣ್ಣೆ ಮತ್ತು ಸುಣ್ಣವನ್ನು ಕಲಸಿ ಹಾಕುವದರಿಂದ ಈ ತೊಂದರೆ ಮಾಯವಾಗುವುದು.

ಸಾಕಿದ ನಾಟಿಕೋಳಿಗಳಿಗೆ ಹೇನುಗಳು ಆದಾಗ ಬಜೆಯನ್ನು ತಂದು ನೀರಿನಲ್ಲಿ ಕುದಿಸಿ ಕೋಳಿಗಳಿಗೆ ಸಿಂಪಡಿಸಿದರೆ ಹೇನುಗಳು ಸಾಯುತ್ತವೆ.

ಇದು ಅಲ್ಲದೆ ನೆಗಡಿ, ಕೆಮ್ಮು, ಮುಟ್ಟುದೋಷ, ಮೂತ್ರದೋಷ ಇತ್ಯಾದಿ ರೋಗಗಳಿಗೂ ಅನೇಕ ರೀತಿಯ ಜನಪದ ಔಷಧಗಳನ್ನು ಮಾಡಿ ಕೊಡುವ ಜನಪದ ವೈದ್ಯಪದ್ಧತಿ ಈ ಸಮುದಾಯದ ಅನೇಕರಲ್ಲಿ ಈಗಲೂ ಬಳಕೆಯಲ್ಲಿದೆ.

### ನಂಬಿಕೆಗಳು

ಜನಸಮುದಾಯದಲ್ಲಿ ನಂಬಿಕೆಗಳು ವೈಶಿಷ್ಟಪೂರ್ಣವಾಗಿ ವಾಡಿಕೆಯಲ್ಲಿರುವುದು ಕಾಣುತ್ತದೆ. ಮನುಷ್ಯ ಕುಲದ ಬದುಕೇ ನಂಬಿಕೆಯ ಆಧಾರದ ಮೇಲೆ ನಿಂತಿದೆ. ಈ

ನಂಬಿಕೆಗಳಲ್ಲಿ ಮೂಢನಂಬಿಕೆಗಳೂ ಸೇರಿಕೊಂಡಿವೆ. ನಂಬಿದವರಿಗೆ ಮಾತ್ರ ಅವು ವಿಶ್ವಾಸದ ಪ್ರತೀಕವೆ. ಕಾನೂನು-ಕಟ್ಟಳೆಗಳನ್ನು ಮೀರಬಹುದು ಮತ್ತು ಮುರಿಯಬಹುದು. ಆದರೆ ಸಮಾಜದ ಎಲ್ಲ ಸಮುದಾಯಗಳು ತಮ್ಮ ತಮ್ಮ ನಂಬಿಕೆಗಳನ್ನು ಶಿರಸಾವಹಿಸಿ ಪಾಲಿಸುತ್ತವೆ. ಈ ನಂಬಿಕೆಗಳು ಅವರ ದೃಷ್ಟಿಯಲ್ಲಿ ಪರಮ ಶ್ರೇಷ್ಠ ವಾಗ್ದಾನಗಳು, ಪವಿತ್ರ ಸಂದೇಶಗಳು. ಇಂಥ ಹಲವಾರು ನಂಬಿಕೆಗಳ ಹೆಮ್ಮರ ಚೆನ್ನದಾಸರ ಸಮುದಾಯ. ಈ ಸಮುದಾಯದ ಎಷ್ಟೋ ನಂಬಿಕೆಗಳು ಮತ್ತೊಂದು ಸಮುದಾಯದ ನಂಬಿಕೆಗಳೂ ಆಗಿರುತ್ತವೆ. ಇದು ಸಾಮಾಜಿಕ ಕೊಳುಕೊಡೆಯಾಗಿದೆ.

ಈ ಸಮುದಾಯದ ನಂಬಿಕೆಗಳನ್ನು ವಸ್ತು-ವಿಷಯ, ನಡೆ-ನುಡಿ ಆಧಾರಗಳ ಮೇಲಿಂದಲೂ ವಿಂಗಡಿಸಬಹುದು. ಪ್ರಾಕೃತಿಕ ನೆಲೆಯಲ್ಲೂ ವಿಂಗಡಿಸಬಹುದು. ವಿಂಗಡನೆ ಎಂಬುದು ಸಂಕೀರ್ಣತೆಯನ್ನು ಸರಳವಾಗಿ ಅರ್ಥೈಸುವುದು ಎಂದರ್ಥ. ಈ ಸಮುದಾಯದ ಮೂಲ ಕಸುಬೇ ಭಿಕ್ಷೆ. ಏಕತಾರಿ, ದಮ್ಮಡಿ ಹಿಡಿದು ಭಿಕ್ಷೆಗೆ ಹೊರಡುವ ಬೆಳಗಾವಿ ಜಿಲ್ಲೆಯ ವೃತ್ತಿಗಾಯಕರು ತಮ್ಮ ಗೋಪಾಳ ಬುಟ್ಟಿಯಲ್ಲಿ ಮೊದಲ ಭಿಕ್ಷೆಯನ್ನು ಹೊಲೆ-ಮಾದಿಗರ ಕೈಯಿಂದಲೇ ಹಾಕಿಸಿಕೊಳ್ಳುವುದು. ಹೊಲೆ-ಮಾದಿಗರು ತಮ್ಮ ಕುಲದ ಹಿರಿಯರು ಮತ್ತು ಅವರು ಸಂತೋಷದಿಂದ ನೀಡುವವರು ಎಂದು ನಂಬಲಾಗಿದೆ. ಇಂದಿಗೂ ಕೂಡ ಅವರು ಮೊದಲು ಭಿಕ್ಷೆ ಎತ್ತುವುದು ಮಾದಿಗರ, ಅವರಿಲ್ಲದಿದ್ದರೆ ಹೊಲೆಯರ ಮನೆಗಳಿಗೆ ಹೋಗಿ ಭಿಕ್ಷೆ ಹಾಕಿಸಿಕೊಂಡು ತಮ್ಮಭಿಕ್ಷಾ ವೃತ್ತಿ ಪ್ರಾರಂಭಿಸುತ್ತಾರೆ. ಅಷ್ಟೇ ಅಲ್ಲದೇ ಅವರು ಮೂರು ವರ್ಷಕ್ಕೊಮ್ಮೆ ಆಚರಿಸುವ ಮಾಡುವ ದುರುಗಮ್ಮನ ದೊಡ್ಡ ಜಾತ್ರೆಗೆ ಹೊಲೆ-ಮಾದಿಗರಿಂದಲೇ ಮೊದಲು ಪಟ್ಟಿ (ಹಣ ಸಂಗ್ರಹ) ಎತ್ತುತ್ತಾರೆ. ಈ ರೀತಿಯ ನಂಬಿಕೆಗಳನ್ನು ಕೆಳಗಿನಂತೆ ಕೆಲವನ್ನು ಮಾತ್ರ ಹೆಸರಿಸಲಾಗಿದೆ.

**ದೇವರು**

* ಮಂಗಳವಾರ, ಶುಕ್ರವಾರ ಹೆಣ್ಣು ದೇವರುಗಳ ವಾರ.
* ಹುಣ್ಣಿಮೆ ಹೆಣ್ಣು ದೇವರಿಗೆ ಸಂಬಂಧಿಸಿದ್ದು.
* ದೇವರಿಗೆ ಬರುತ್ತೇವೆನ್ನಬಾರದು, ಬಡವನಿಗೆ ಕೊಡುತ್ತೇವೆನ್ನಬಾರದು.
* ದೇವರು ಮೈತುಂಬಿ ಬೇಡುತ್ತಾನೆ. ಒಳಿತು-ಕೆಡುಕು ಹೇಳುತ್ತಾನೆ.
* ಎಲ್ಲಮ್ಮ ದೇವರಿಗೆ ಕೆಟ್ಟದ್ದಾಗಿ ನಡೆದುಕೊಂಡರೆ ವರ್ಷತುಂಬುವುದರೊಳಗಾಗಿ ಅವನಿಗೆ ಸೀರೆಯುಡಿಸಿ ಜಗ (ದೇವತೆ ಮೂರ್ತಿಯಿರುವ ಭಿಕ್ಷಾ ಬುಟ್ಟಿ) ಹೊರೆಸುತ್ತಾಳೆ.
* ದೇವರಿಗೆ ಮತ್ತು ಹಿರಿಯರಿಗೆ ಬೇಟೆಯನ್ನು ಕೊಯ್ದಾಗ ಮೇಕೆ ದಡವನ್ನು ಎತ್ತಬೇಕು. ಹಾಗೆ ಎತ್ತಿದರೆ ದೇವರು, ಹಿರಿಯರು ಸಂತೃಪ್ತಿಯಾಗಿದ್ದಾರೆ ಎಂದು ಅರ್ಥ. ಆಕಸ್ಮಾತ್ ಬಲಿಯಾದ ಪ್ರಾಣಿ ತನ್ನ ದಡವನ್ನು ಎತ್ತದಿದ್ದರೆ ದೇವರು, ಹಿರಿಯರು ಸಂತೃಪ್ತಿಯಾಗಲಿಲ್ಲ ಎಂದರ್ಥ. ಆ ಸಂದರ್ಭದಲ್ಲಿ ದಡ ಎತ್ತುವಂತೆ ದೇವರಿಗೆ, ಹಿರಿಯರಿಗೆ ಕೈಮುಗಿದು ಬೇಡಿಕೊಳ್ಳುವ ನಂಬಿಕೆಯಿದೆ.

ದೆವ್ವ

* ಅಮವಾಸ್ಯೆಗೆ ಗಂಡು ದೆವ್ವ, ಹುಣ್ಣಿಮೆಗೆ ಹೆಣ್ಣುದೆವ್ವ ರಾತ್ರಿ ವೇಳೆ ತಿರುಗುತ್ತವೆ. ಬಾಗಿಲ ಬಳಿ ಚಪ್ಪಲಿ ಬೋರಲಾಗಿ ಇಟ್ಟರೆ ದೆವ್ವ ಮನೆಕಡೆಗೆ ಬರುವುದಿಲ್ಲ.

ಪ್ರಾಣಿ–ಪಕ್ಷಿ

* ನಾಯಿ ದೇವರು, ಅವನ್ನು ಒದೆಯಬಾರದು.
* ಕುರಿ ಕಳ್ಳನಿಗೆ ಮಾತು ಕೊಟ್ಟಿದೆ, ಅದಕ್ಕಾಗಿ ಅದನ್ನು ಹೊತ್ತು ಒಯ್ದರೂ ಒದರುವುದಿಲ್ಲ.
* ಮುಂಗುಸಿ ಮುಖ ನೋಡಿದರೆ ಒಳ್ಳೆಯದಾಗುತ್ತದೆ.
* ನೂರು ಮಂದಿ ಇದ್ದರೂ ಮೊಲದ ಮಾಂಸ ಒಬ್ಬೊಬ್ಬರಿಗೆ ಅದರ ತಲೆಯಷ್ಟು ಪಾಲು ಸಿಗುತ್ತದೆ.
* ಆಕಳು ಕಣ್ಣೀರು ಸುರಿಸುತ್ತಿದ್ದರೆ ದೃಷ್ಟಿಯಾಗುತ್ತದೆ.
* ಕೂಡಿದ ಹಾವು ಮತ್ತು ಕಾಗೆಗಳನ್ನು ನೋಡಬಾರದು, ನೋಡಿದ್ದೇ ಆದರೆ ತನ್ನಲ್ಲಿರುವ ಬಟ್ಟೆಯನ್ನು ಅವುಗಳೆಡೆಗೆ ಎಸೆಯಬೇಕು. ಮತ್ತು ನೋಡಿದವರಿಗೆ ಅಪಘಾತ ಆಗಿದೆ ಎಂದು ಮನೆಯವರಿಗೆ ಸುದ್ದಿ ತಿಳಿಸಬೇಕು
* ಮನೆಯಲ್ಲಿ ಬೆಳವು ಹೊಕ್ಕರೆ ೬ ತಿಂಗಳು ಮನೆ ಬಿಡಬೇಕು.
* ರಾತ್ರಿ ಮನೆಯ ಮೇಲೆ ಗೂಬೆ ಕೂಗಿದರೆ ಯಾರದಾದರೂ ಸಾವು ನಿಶ್ಚಿತ ಎಂದು ತಿಳಿಯಬೇಕು.
* ನವಿಲಿನ ಮಾಂಸದೂಟ ಮಾಡುವಾಗ ಟಿಸಕಿ ಹೊಡೆದರೆ ಸಾವು ಖಂಡಿತ.
* ಉಗಾದಿಯಂದು ಸಮುದ್ರ ಕಾಗೆಯ ಮುಖನೋಡಿದರೆ ಒಳ್ಳೆಯದಾಗುತ್ತದೆ.

ಮಳೆ–ಗ್ರಹಣ

* ರೋಣಿ (ರೋಹಿಣಿ) ಮಳೆ ಆದರೆ ಓಣಿಯಲ್ಲಾ ಕಾಳು.
* ಸಾಕಿದ ಕೋಳಿ ಮಕ್ಕ ಕೆದರಿ ಕಾಲು ಮೇಲೆ ಮಾಡಿ ಮಲಗಿದರೆ ಮಳೆ ಬರುತ್ತದೆ.
* ಸೂರ್ಯ ಚಂದ್ರ ಗ್ರಹಣ ಹಿಡಿದಾಗ ನೀರು ಕುಡಿಯುವುದು, ಊಟ ಮಾಡುವುದು
  * ಮಾಡಬಾರದು ಅವನ್ನು ಹಾವು ನುಂಗುತ್ತಿರುತ್ತದೆ. ಬಿಟ್ಟ ಬಳಿಕ ಹಳೆ ನೀರು
  
ಚೆಲ್ಲಿ * ಹೊಸ ನೀರು ತಂದು ಅಡುಗೆ ಮಾಡಿ ಊಟ ಮಾಡಬೇಕು. ಗ್ರಹಣ ಕಾಲಕ್ಕೆ

* ಗರ್ಭಿಣಿ ಹೆಂಗಸರು ಏನಾದರೂ ಮುರಿಯುವುದು, ಹರಿಯುವುದು ಮಾಡಿದರೆ ಹುಟ್ಟಲಿರುವ ಮಕ್ಕಳು ಅಂಗವಿಕಲರಾಗುತ್ತಾರೆ.

ಅಂಗಾಂಗ

* ಹೆಂಗಸರಿಗೆ ಎಡಗಣ್ಣು, ಗಂಡಸರಿಗೆ ಬಲಗಣ್ಣು ಅದುರಿದರೆ ಶುಭ.
* ನಾಲಿಗೆ ತುದಿಮೇಲೆ ಮಚ್ಚೆ ಇದ್ದರೆ ಅವರು ಅಂದದೆಲ್ಲಾ ನಿಜವಾಗುತ್ತದೆ.
* ಎದೆಯ ಮೇಲೆ ಕೂದಲಿಲ್ಲದ ಗಂಡಸು ನಂಬಿಕೆಗೆ ಅರ್ಹನಲ್ಲ.
* ಕೈಯಲ್ಲಿ ಕತ್ತರಿ (ಅಂಗೈರೇಖೆ) ಇದ್ದರೆ ಹಣ ನಿಲ್ಲುವುದಿಲ್ಲ.
* ಬೆಂಕಿ, ಅನ್ನ, ನಾಯಿಯನ್ನು ಕಾಲಿನಿಂದ ತೋರಿಸಬಾರದು.

**ಶಕುನ**

* ಬರಿಕೊಡ ಎದುರಿಗೆ ಬಂದರೆ, ಬೆಕ್ಕು ಅಡ್ಡ ಹಾಯ್ದರೆ, ಕಾಗೆ ಎಡಕ್ಕೆ ಹೋದರೆ, ಒಂಟಿಸೀನು ಆದರೆ, ಯಾರಾದರೂ ಎಲ್ಲಿಗೆ ಹೊರಟೆ? ಎಂದರೆ– ಇವೆಲ್ಲ ಅಪಶಕುನಗಳು. ಕೆಲಸ ಕೈಗೂಡುವುದಿಲ್ಲ.
* ತುಂಬಿದ ಕೊಡ ಎದುರಿಗೆ ಬಂದರೆ, ಸತ್ತ ಹಾವು ನೋಡಿದರೆ, ಒಲೆಯ ಮೇಲ ಹಾಲು ಉಕ್ಕಿದರೆ ಶುಭ ಶಕುನ, ಒಳ್ಳೆಯದಾಗುತ್ತದೆ.
* ಕನಸಿನಲ್ಲಿ ಮದುವೆ–ಜಾತ್ರೆಗಳಾದರೆ ಯಾರಾದರೂ ಒಬ್ಬರು ಸಾಯುತ್ತಾರೆ. ಅದಕ್ಕಾಗಿ ಜನ ಕೂಡುತ್ತಾರ ಎಂದರ್ಥ.
* ರಾತ್ರಿ ಹೊತ್ತು ನಾಯಿ ಅತ್ತರೆ ಏನಾದರೂ ಅಪಘಾತ ಸಂಭವಿಸುತ್ತದೆ.
* ಚುಕ್ಕಿಯು ಹಗಲು ಹೊತ್ತು ಚುಕ್ಕಿಯು ದೀರ್ಘವಾಗಿ ಬೆಳಕು ಸೂಸಿದಂತಾಗಿ ಬಿದ್ದರೆ ಯಾರಾದರೂ ದೊಡ್ಡ ವ್ಯಕ್ತಿ ಸಾಯುತ್ತಾರೆ ಎಂದರ್ಥ.

**ಹಚ್ಚೆ ಕಲೆ ಮತ್ತು ನಂಬಿಕೆ**

ಹಿಂದಿನ ಕಾಲದಲ್ಲಿ ಈ ಸಮುದಾಯದ ಪ್ರತಿಯೊಬ್ಬ ಮಹಿಳೆಯ ಹಚ್ಚೆಯನ್ನು ಹಾಕಿಸಿಕೋಳ್ಳುವುದು ಕಡ್ಡಾಯವಾಗಿತ್ತು. ಈಗಲೂ ಕಡ್ಡಾಯವಾಗಿದೆ. ಹಚ್ಚೆ ಹಾಕಿಸಿಕೊಳ್ಳದಿರುವವರನ್ನು ಅಸಹ್ಯ ದೃಷ್ಟಿಯಿಂದ ಕಾಣಲಾಗುತ್ತದೆ. ಹಿಂದೆ ಹಚ್ಚೆ ಇಲ್ಲದವರನ್ನು ಮದುವೆ ಮಾಡಿಕೊಳ್ಳಲು ನಿರಾಕರಿಸುತ್ತಿದ್ದರೆಂದು ಈ ಸಮುದಾಯದವರು ಹೇಳುತ್ತಾರೆ. ವಿವಿದ ಚಿತ್ರಗಳನ್ನು ಹಾಕಿಸಿಕೊಳ್ಳದಿದ್ದರೂ ಕೊನೆಯಲ್ಲಿ ಹಣೆಯ ಮೇಲೆ ಚಿಕ್ಕ ಗುಬ್ಬಿ ಇಲ್ಲವೆ ಚುಕ್ಕಿಯ ಚಿತ್ರದ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಿದ್ದರು.

**ಹಚ್ಚೆಯನ್ನು ಹಾಕಿಸಿ ಕೊಳ್ಳುವ ಅಂಗಾಂಗಳು:** ಕೈ ಬೆರಳು, ಅಂಗೈ ಮೇಲ್ಭಾಗ, ಮುಂಗೈ ಒಳಭಾಗ–ಹೊರಭಾಗ, ತೋಳು, ಗದ್ದ, ಗಲ್ಲ, ಕೆನ್ನೆ, ಹಣೆ ಮತ್ತು ಹುಬ್ಬುಗಳ ಕೊನೆಯ ಭಾಗ. ಕೆಲವರು ತಮ್ಮ ಪ್ರೀತಿಪಾತ್ರರಾದ ತಂದೆ–ತಾಯಿ, ಅಕ್ಕ–ತಂಗಿ ಇಲ್ಲವೆ ಗಂಡನ ಹೆಸರನ್ನು ಎದೆಯ ಮೇಲೆ ಹಾಕಿಸಿಕೊಳ್ಳುತ್ತಿದ್ದರೆಂದು ಹೇಳುತ್ತಿದ್ದರೂ ಅದು ಸರಿಯಾದ ಕ್ರಮದಿಂದ ಹಾಕಿಸಿದ್ದಲ್ಲ.

**ಹಚ್ಚೆಯ ಚಿತ್ರಗಳು:** ನಂದಿಕೋಲು, ಕೃಷ್ಣ ಚಕ್ರ, ಅಕ್ಕ–ತಂಗಿಯರ ಚಿತ್ರ, ಶಿವನ ಬಾಸಿಂಗ, ಪಗಡಿ ಬಾಜಾರ, ರಾಮನ ತೊಟ್ಟಿಲು, ಚೇಳು, ಜರಿ ಗುಬ್ಬಿ, ನವಿಲು, ನಗರ ಇತ್ಯಾದಿ.

**ನಂದಿಯ ಕೋಲು:** ಎಂದರೆ ದೇವರ ಜಾತ್ರೆಯಲ್ಲಿ ದೇವರ ಮುಂದೆ ಆಡಿಸುವ ಎತ್ತರದ ಕಟ್ಟಿಯ ಕೋಲು, ಮೇಲೆ ತುದಿಯಲ್ಲಿ ನಂದಿಯ ಚಿಕ್ಕ ಮೂರ್ತಿ ಇರುತ್ತದೆ. ಇದನ್ನು ಹಾಕಿಸಿಕೊಳ್ಳುವುದರಿಂದ ದೇವರ ಮುಂದಿನ ನಂದಿಕೋಲಿನ ರಕ್ಷಣೆ ತನಗಾಗುತ್ತದೆ ಎಂಬ ನಂಬಿಕೆಯಿದೆ.

**ಕೃಷ್ಣ ಚಕ್ರ** ಎಂದರೆ ವಿಷ್ಣು ಚಕ್ರ ಎಂದರ್ಥ, ಇದು ಇದ್ದರೆ ಹೆಣ್ಣಿನ ಸಂರಕ್ಷಣೆಯಾಗುತ್ತದೆ ಎಂಬ ನಂಬಿಕೆಇದೆ.

**ಅಕ್ಕ-ತಂಗಿಯ ಚಿತ್ರ:** ಎಂದರೆ ಎಲ್ಲಕ್ಕಿಂತ ದೊಡ್ಡ ಸಂಬಂಧ ಅಕ್ಕ ತಂಗಿಯರದು ಎಂದು, ಇದನ್ನು ಹಾಕಿಸಿಕೊಂಡರೆ ಅಕ್ಕ-ತಂಗಿಯರು ಅಗಲಲಾರರು ಎಂಬ ನಂಬಿಕೆಯಿದೆ.

**ಶಿವನ ಬಾಸಿಂಗ:** ಬಾಸಿಂಗ ಎಂದರೆ ಮದುವೆಯಲ್ಲಿ ಮದುಮಕ್ಕಳು ಕಟ್ಟಿಕೊಳ್ಳುವ "ಬಾಸಿಂಗ" ಎಂದರ್ಥ. ಬೇಗ ಕಂಕಣ ಬಲ ಕೂಡಿ ಬರುತ್ತದೆ ಎಂಬ ನಂಬಿಕೆಯಿದೆ.

**ಪಗಡಿ ಬಾಜಾರ:** ಪಗಡಿ ಬಾಜಾರ ಎಂದರೆ ಶಿವ-ಪಾರ್ವತಿ ಪಗಡೆಯಾಡುವುದು ಎಂದರ್ಥ. ಇದು ಇದ್ದರೆ ಗಂಡ-ಹೆಂಡತಿ ಅನ್ಯೋನ್ಯವಾಗಿರುತ್ತಾರೆ ಎಂಬ ನಂಬಿಕೆ ಇದೆ.

**ರಾಮನ ತೊಟ್ಟಿಲು:** ಬಹುಶಃ ಯಲ್ಲಮ್ಮ ದೇವಿಯ ಮಗ ಪರಶುರಾಮನ ತೊಟ್ಟಿಲು ಎನ್ನುತ್ತಾರೆ, ಇದು ಇದ್ದರೆ ಬೇಗ ಮಕ್ಕಳಾಗುತ್ತವೆ ಎಂಬ ನಂಬಿಕೆಯಿದೆ. ಮೇಲಿನ ಚಿತ್ರಗಳಲ್ಲಿ ಕೃಷ್ಣ ಚಕ್ರ ಮತ್ತು ಶಿವನಬಾಸಿಂಗವನ್ನು ಎರಡೂ ಕೈಗಳ ಅಂಗೈ ಮೇಲಿನ ಭಾಗದಲ್ಲಿ ಹಾಕಿಸಿದರೆ, ನಂದಿಕೋಲು, ಅಕ್ಕ-ತಂಗಿಯರು, ಪಗಡಿ ಬಾಜಾರ, ರಾಮನ ತೊಟ್ಟಿಲು, ಇವುಗಳನ್ನು ಒಂದೊಂದು ಕೈಗೆ ಎರಡೆರಡು ಚಿತ್ರಗಳಂತೆ ಮುಂಗೈನ ಒಳ ಭಾಗದಲ್ಲಿ ಹಾಕಿಸಿಕೊಳ್ಳುತ್ತಾರೆ. ಅಂಗೈ ಹಿಂಭಾಗದ ಮೇಲೆ ಒಂದು ಕಡೆ ಚೇಳು ಮತ್ತೊಂದು ಕಡೆ ಜರಿ ಇಲ್ಲವೆ ನಾಗರ ಹಾಕಿಸಿಕೊಳ್ಳುತ್ತಾರೆ. ಗದ್ದ ಮತ್ತು ಹಣೆಯ ಮೇಲೆ ಗುಬ್ಬಿಯ ಚಿತ್ರ, ಹುಬ್ಬುಗಳ ಕಡೆಯ ಮತು ಕಣ್ಣಿನ ಎಡಭಾಗದಲ್ಲಿ ಚಂದ್ರ-ಚುಕ್ಕಿಯ ಚಿತ್ರಗಳನ್ನು ಹಾಕಿಸಿಕೋಳ್ಳುತ್ತಾರೆ.

ಹಚ್ಚೆ ಹಾಕಿಸಿ ಕೋಳ್ಳಲು ಇರುವ ನಂಬಿಕೆ: ಸುಂದರ ಸ್ತ್ರೀಯರಿಗೆ ಪರಪುರುಷರ ದೃಷ್ಟಿ ಆಗಬಾರದು. ಹಸಿರು ಅಥವಾ ಕಪ್ಪು ದೃಷ್ಟಿ ನಿವಾರಣೆಯ ಸೂಚಕ. ಸತ್ತಾಗ ತಂದೆ-ತಾಯಿ, ಗಂಡ-ಮಕ್ಕಳು ಯಾರು ಬರುವುದಿಲ್ಲ, ಸತ್ತಾಗ ಬರುವ ಒಂದೇ ಸಂಗಾತಿ ಎಂದರೆ ಹಚ್ಚೆ, ಸತ್ತಾಗ ಜೊತೆಯಲ್ಲಿ ಬರುತ್ತದೆ. ಇದು ಇರುವುದರಿಂದಾಗಿ ದೇವರು ಪ್ರಕೃತಿ ಯಾವಾಗಲೂ ರಕ್ಷಿಸುತ್ತವೆ. ಇದು ಇರುವುದರಿಂದಾಗಿ ದೇವರು ಮತ್ತು ಸೌಂದರ್ಯದ ಪ್ರತೀಕವಾಗಿದೆ ಎಂಬ ನಂಬಿಕೆಗಳು ಇವೆ.

ಈ ರೀತಿಯ ಇನ್ನೂ ಅನೇಕ ನಂಬಿಕೆಗಳು ಈ ಸಮುದಾಯದಲ್ಲಿವೆ. ನಂಬಿದ ಘಟನೆಗಳು ಘಟಿಸಿದರೆ ಪರಿಹಾರೋಪಾಯಗಳನ್ನು ನೆರವೇರಿಸುವುದು, ವ್ರತ ಮಾಡುವುದು ಮಾಡುತ್ತಾರೆ. ದೇವರ ಮೇಲಿನ ನಂಬಿಕೆಯನ್ನೇ ನಂಬಿಕೆಗಳ ಮೇಲೂ ಇಟ್ಟಿರುವುದು ಅವುಗಳ ಶ್ರದ್ಧೆಗೆ ಹೆಗ್ಗುರುತಾಗಿದೆ. ಇವುಗಳ ಆಶಯದ ಹಿನ್ನೆಯಲ್ಲಿ ಯಾವುವು ಮೂಢನಂಬಿಕೆಗಳು, ಯಾವವು ಮೂಢನಂಬಿಕೆಗಳಲ್ಲ ಎಂದು ವಿವರಿಸಬಹುದು.

೬

# ಒಳಾಡಳಿತ ವ್ಯವಸ್ಥೆ

ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ತಮ್ಮ ಜೀವನ ವಿಧಾನದಲ್ಲಿ ತಮ್ಮದೇ ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡಿರುತ್ತಾರೆ. ಆಚರಣೆ, ಸಂಪ್ರದಾಯಗಳನ್ನಿಡಿದು ಒಳಾಡಳಿತದವರೆಗೂ ತಮ್ಮದೇ ಆದ ನಂಬಿಕೆ, ನಿಬಂಧನೆ, ಕಟ್ಟಳೆಗಳನ್ನು ಹೊಂದಿರುತ್ತಾರೆ. ಚೆನ್ನದಾಸರ ಸಮುದಾಯವೂ ಇದಕ್ಕೆ ಹೊರತಲ್ಲ. ಇವರ ಒಳಾಡಳಿತ ವ್ಯವಸ್ಥೆಯ ಸ್ವರೂಪ ಒಟ್ಟಾರೆ ಸಮುದಾಯವನ್ನು ಸುಸ್ಥಿತಿಯಲ್ಲಿಡಲು, ತನ್ನ ಮೂಲ ಸಾಂಸ್ಕೃತಿಕ ಅನನ್ಯತೆಯನ್ನು ಮುಂದುವರಿಸಲು ರೂಪಿತಗೊಂಡ ವ್ಯವಸ್ಥೆಯಾಗಿದೆ.

## ನ್ಯಾಯ ಪಂಚಾಯತಿ ರಚನೆ

ತಮ್ಮ ಸಮುದಾಯದಲ್ಲಿ ಅನ್ಯಾಯ ಅಸಮಾನತೆಗಳು, ಕಟ್ಟುಪಾಡುಗಳ ಉಲ್ಲಂಘನೆ, ಮತ್ತೊಬ್ಬರ ಮೇಲಿನ ದೌರ್ಜನ್ಯ ಇತ್ಯಾದಿಗಳನ್ನು ನಿಯಂತ್ರಿಸಲು ಈ ಸಮುದಾಯ ಮೊದಲಿನಿಂದಲೂ ನ್ಯಾಯ ಪಂಚಾಯತಿಯನ್ನು ರಚಿಸಿಕೊಂಡು ಬಂದಿದೆ. ಕೆ ಎಸ್ ಸಿಂಗ್ ಅವರ ಗ್ರಂಥದಲ್ಲಿ "ಸಾಂಪ್ರದಾಯಿಕ ಜಾತಿ ಸಮಿತಿ ಅವರಲ್ಲಿದ್ದು, ಅದನ್ನು ಕಟ್ಟೆ ಮನೆ ಎಂದು ಕರೆಯುತ್ತಾರೆ. ೧೫ ರಿಂದ ೨೦ ಸದಸ್ಯರ ಮುಖ್ಯಸ್ಥನನ್ನು ದೊಡ್ಡ ಯಜಮಾನ ಎಂದು ಕರೆಯುತ್ತಾರೆ. ಈ ದೊಡ್ಡ ಯಜಮಾನನನ್ನು ಧ್ವನಿ ಮತದಿಂದ ಆಯ್ಕೆ ಮಾಡುತ್ತಾರೆ. ಸಮುದಾಯದ ಸಾಮಾಜಿಕ ನಿಯಂತ್ರಣ ಮಾಡುವ ಹಾಗೂ ಕಲಹಗಳ ವಿಚಾರಣೆ ಈ ಸಮಿತಿಯ ವ್ಯಾಪ್ತಿಗೆ ಒಳಪಡುತ್ತವೆ. ಅಪರಾಧ ಮಾಡಿದವರಿಗೆ ದಂಡ ಹಾಕುವ, ಶಿಕ್ಷೆ ವಿಧಿಸುವ ಮತು ಸಾಮಾಜಿಕ ಬಹಿಷ್ಕಾರ ಹಾಕುವ ಅಧಿಕಾರ ಈ ಪಂಚಾಯಿತಿಗಿರುತ್ತದೆ." ಎಂದು ಹೇಳಿದರೆ, ಅನಂತಕೃಷ್ಣ ಅಯ್ಯರ್ ಅವರು "ದಾಸರಿಗಳು ಕಟ್ಟೆಮನೆ ಎಂಬ ಕುಲಸಭೆಯನ್ನು ಹೊಂದಿದ್ದಾರೆ... ಈ ಪ್ರತಿ ಸಭಾ ಮನೆಗಳನ್ನು ಪಿನ್ನಪೆದ್ದ [ಹಿರಿಯ ಅಥವಾ ಕಿರಿಯ]ನು ಗುಡಿಗಾಡನನ್ನು ಅಲಂಕರಿಸುತ್ತಾರೆ. ಗುಡಿಗಾಡು ದೇವಸ್ಥಾನದ ಸೇವಕರು ಕುಲಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಅವಲೋಕನ ಮಾಡುತ್ತಾರೆ. ಅಲ್ಲದೆ ಇವರ ಸಹೋದ್ಯೋಗಿಯಾದ ಪಿನ್ನಪೆದ್ದ ವರದಿಯನ್ನು ನೀಡುತ್ತಾನೆ. ಪಿನ್ನಪೆದ್ದನು ಜನರನ್ನು ಒಂದೆಡೆ ಸೇರಿಸಿ, ವಿವಾದವನ್ನೊಳಗೊಂಡ ವಿಷಯಗಳನ್ನು ಮತಗಳ ಸಂಖ್ಯೆಯಿಂದ ನಿರ್ಧರಿಸುತ್ತಾನೆ.

ಮತಗಳು ಸಮನಾಗಿದ್ದರೆ ತಮ್ಮ ಸಭೆಯಲ್ಲಿ ವಿಷಯವನ್ನು ನಿರ್ಧರಿಸಲು ಪ್ರಯಾಣದ ಅವಧಿಯಲ್ಲಿ ಗುರುವಿಗೆ ಬಿಡುತ್ತಾರೆ. ಗುರುವು ಕಟ್ಟೆಮನೆಯನ್ನು ವಿಚಾರಿಸಿ ಅಂತಿಮ ನಿರ್ಧಾರವನ್ನು ತೆಗೆದುಕೊಳ್ಳುತ್ತಾನೆ" ಎಂದು ವಿವರಿಸಿದ್ದಾರೆ.

ಈಗಲೂ ಈ 'ನ್ಯಾಯಪಂಚಾಯತಿ' ರಚನೆ ಸಮುದಾಯದಲ್ಲಿ ಉಳಿದುಕೊಂಡು ಬಂದಿದೆ. ಸಮುದಾಯದಲ್ಲಿ ಅನುಭವಸ್ಥನಾದ, ಬುದ್ಧಿವಂತನಾದ ಹಿರಿಯನನ್ನು ಕುಲಸ್ಥರೆಲ್ಲ ಸೇರಿ ಆಯ್ಕೆ ಮಾಡುತ್ತಾರೆ. ಕೆಲವು ಕಡೆ ಇದು ವಂಶಪಾರಂಪರ್ಯವಾಗಿ ಮುಂದುವರೆದಿರುತ್ತದೆ. ಈ ಕುಲಸಭೆಯ ಮುಖ್ಯಸ್ಥನನ್ನು ಪ್ರಾದೇಶಿಕವಾಗಿ ಗುಡೇಗಾಡು, ಕಟ್ಟೆಮನೆ, ಪಿನ್ನಪೆದ್ದ, ಕೊಂಡಿಕೋಲ, ಗುರಿಕಾರ, ಸಮೀಲು ಎಂದು ಕರೆಯುವ ವಾಡಿಕೆಯಿದೆ. ಮುಖ್ಯಸ್ಥನಿಗೆ ಸಹಕಾರಿಯಾಗಿ ಕೆಲಸ ನಿರ್ವಹಿಸಲು ತಳವಾರನನ್ನು ನೇಮಿಸಲಾಗುತ್ತದೆ. ಈತ ಪಂಚಾಯಿತಿಯ ಆದೇಶದಿಂದ ಸಭೆ ಕೂಡಿಸುವ, ಸಂದೇಶ ತಲುಪಿಸುವ ಕೆಲಸ ಮಾಡುತ್ತಾನೆ. ಇದಲ್ಲದೆ ಒಂದೊಂದು ಬೆಡಗಿನ ಹಿರಿಯರ ಸಲಹಾ ಸಮಿತಿಯಿದ್ದು ಪಂಚಾಯಿತಿಯ ತೀರ್ಮಾನಗಳನ್ನು ಜಾರಿಗೆ ತರಲು ಅದು ಕಾರ್ಯ ನಿರ್ವಹಿಸುತ್ತದೆ.

## ಪಂಚಾಯತಿ ಕಾರ್ಯಗಳು

ಈ ಪಂಚಾಯತಿಗೆ ಸಮುದಾಯದ ಸಾಮಾಜಿಕ ನಿಯಂತ್ರಣ ಮಾಡುವ ಬಹು ದೊಡ್ಡ ಜವಾಬ್ದಾರಿಯನ್ನು ವಹಿಸಲಾಗಿರುತ್ತದೆ. ಸಮುದಾಯದ ಯಾರೇ ಆಗಿರಲಿ ನ್ಯಾಯ ಪಂಚಾಯತಿ ಅಥವಾ ಕುಲಸಭೆಗಿಂತ ದೊಡ್ಡವರೆನಿಸಿಕೊಳ್ಳುವುದಿಲ್ಲ. ಸಮುದಾಯದ ಗುಂಪಿನ ನಡುವೆ ಕಲಹಗಳಾಗಿದ್ದರೆ ಅವನ್ನು ಬಗೆಹರಿಸುವ, ಅಪರಾಧ ಮಾಡಿದವರಿಗೆ ಶಿಕ್ಷೆ ವಿಧಿಸುವ, ಕಳ್ಳತನ ಅತ್ಯಾಚಾರ ಮಾಡಿದವರಿಗೆ ದಂಡ ವಿಧಿಸುವ ಅಪರಾಧ ಮಾಡಿ ಶಿಕ್ಷೆಯನ್ನು ವಿರೋಧಿಸುವ, ಕುಲಸಭೆಗೆ ಮರ್ಯಾದೆಯನ್ನು ಕೊಡದವರಿಗೆ ದಂಡ ವಿಧಿಸುವ, ಸಾಮಾಜಿಕ ಬಹಿಷ್ಕಾರ ಹಾಕುವ ಅಧಿಕಾರದಿಂದ ಕುಲಸಭೆ ಕಾರ್ಯನಿರ್ವಹಿಸುತ್ತದೆ.

ಮದುವೆ ಮತ್ತು ಧಾರ್ಮಿಕ ಕಾರ್ಯಗಳನ್ನು ಕುಲಸಭೆಯು ನಿರ್ವಹಿಸುತ್ತದೆ. ಮದವೆ ಸಮುದಾಯದ ಸಾಮಾಜಿಕ ಸಂಪ್ರದಾಯದಂತೆ, ನಿಬಂಧನೆಗಳಂತೆ ನಡೆಯುವ ಹಾಗೆ ಈ ಸಭೆ ಪ್ರಭಾವವನ್ನು ಹೊಂದಿರುತ್ತದೆ. ಅಂತರ್ ಜಾತಿ ವಿವಾಹ, ಬಹುಪತ್ನಿತ್ವ, ಸೋದರ ಸಂಬಂಧದ ವಿವಾಹ ಮೊದಲಾದವುಗಳನ್ನು ನಡೆಯದಂತೆ ನಿರ್ಬಂಧಿಸುತ್ತದೆ. ಧಾರ್ಮಿಕ ಕಾರ್ಯಗಳಲ್ಲಿಯೂ ಸಹ ಜಾತ್ರೆ ಯಾವಾಗ ಮಾಡಬೇಕು, ಮನೆಗೆ ವಂತಿಗೆ ಎಷ್ಟು ಹಾಕಬೇಕು, ಯಾರ್‍ಯಾರು ಯಾವ ಕೆಲಸ ನಿರ್ವಹಿಸಬೇಕು. ಬಯಲಾಟ ಅಥವಾ ಮನರಂಜನೆ ಯಾವುದಿರಬೇಕು ಇತ್ಯಾದಿ ವಿಧಿ ವಿಧಾನಗಳನ್ನು ಈ ಕುಲಸಭೆ ನಿರ್ವಹಿಸುತ್ತದೆ.

ಅಲ್ಲದೆ ಊರಿಗೆ ರೋಗ ಬಂದಾಗ, ಬರಗಾಲ ಬಿದ್ದಾಗ, ಯಾರಾದರೂ ದುರ್ಮರಣಕ್ಕೆ ಈಡಾದಾಗ, ಬೇರೆ ಸಮುದಾಯದವರೊಂದಿಗೆ ಯಾವುದೇ ವಿಷಯಕ್ಕಾಗಿ ಕಲಹಗಳುಂಟಾದಾಗ ಪರಿಹಾರಕ್ಕಾಗಿಯೂ ಕುಲಸಭೆ ನಡೆಯುತ್ತದೆ.

ಈ ಮೇಲಿನ ಸಂದರ್ಭಗಳಲ್ಲಿ ಕುಲಸಭೆಯ ಹಿರಿಯರು ತಳವಾರನ ಮೂಲಕ ಪಂಚಾಯಿತಿ ಸೇರಿಸಿ, ಸಂಬಂಧಿಸಿದವರಿಂದ ಹೇಳಿಕೆ ಪಡೆದು ನ್ಯಾಯನಿರ್ಣಯ ಮಾಡುತ್ತಾರೆ. ಒಂದೊಂದು ಸಾರಿ ಪಂಚಾಯತಿ ಸಭೆ ಒಂದೇ ದಿನದಲ್ಲಿ ಮುಗಿಯದೆ ವಾರದವರೆಗೂ ಮುಂದುವರಿದಿರುವ ಪ್ರಸಂಗಗಳಿವೆ.

**ನ್ಯಾಯ ನಿರ್ಣಯಗಳು**

ಕುಲಸಭೆಯ ನ್ಯಾಯ ನಿರ್ಣಯಗಳು ವಿವಿಧ ಹಂತಗಳನ್ನೊಳಗೊಂಡಿವೆ. ಸಮುದಾಯದ ಜನಗಳ ನಡುವೆ ಕಲಹಗಳಾದಾಗ ಮತ್ತು ವ್ಯಕ್ತಿ ಸಣ್ಣ ಪುಟ್ಟ ತಪ್ಪು ಮಾಡಿದಾಗ ಹಿರಿಯರು ಕಲಹವನ್ನು ಬಗೆಹರಿಸುವ ಸಣ್ಣ ಪುಟ್ಟ ತಪ್ಪುಗಳನ್ನುಇನ್ನೊಮ್ಮೆ ಮಾಡದಂತೆ ತಾಕೀತು ಮಾಡುವ ಸರಳ ನಿರ್ಣಯವನ್ನು ಕೊಡುತ್ತದೆ. ಅಣ್ಣ ತಮ್ಮರ ಮತ್ತು ತಂದೆ ಮಕ್ಕಳ ಆಸ್ತಿಯಲ್ಲಿ ಪಾಲನ್ನೂ ಸಹ ಇದೇ ನಿರ್ಣಯದಂತೆ ಮಾಡ ಲಾಗುತ್ತದೆ. ಪಂಚಾಯತಿ ಸೇರಿದ್ದಕ್ಕೆ ಕಾರಣರಾದವರು ಸಭೆಗೆ ಕುಲಸಭೆಯ ಖರ್ಚು ಕೊಡಬೇಕು.

ಹಿರಿಯರಿಗೆ, ಹೆಂಗಸರಿಗೆ ಅವಮಾನ ಮಾಡಿದ್ದರೆ, ಕಳ್ಳತನದ ಅಪರಾಧ ಮಾಡಿದ್ದರೆ, ಅಂಥವರಿಗೆ ದಂಡ ವಿಧಿಸುವ ನಿರ್ಣಯ ಕೈಗೊಳ್ಳಲಾಗುತ್ತದೆ. ದಂಡ ಹಣದರೂಪದ್ದಿರು ತ್ತದೆ. ಅಪರಾಧದ ಪ್ರಮಾಣದ ಮೇಲೆ ದಂಡದ ಪ್ರಮಾಣ ಹೆಚ್ಚು ಕಡಿಮೆಯಾಗುತ್ತಿರುತ್ತದೆ.

ಕೊಲೆ ಮಾಡಿದರೆ, ಹೆಂಗಸರ ಮೇಲೆ ಅತ್ಯಾಚಾರ ಮಾಡಿದರೆ, ಬೇರೊಬ್ಬನ ಅಥವಾ ಬೇರೊಬ್ಬಳ ಜೊತೆ ಓಡಿ ಹೋದರೆ, ಧಾರ್ಮಿಕ ಕಾರ್ಯಗಳಲ್ಲಿ ತಪ್ಪೆಸಗಿದರೆ ಅವರನ್ನು ಕುಲದಿಂದ ಬಹಿಷ್ಕಾರ ಹಾಕುವ ಕಠಿಣ ನಿರ್ಣಯವನ್ನು ಸಭೆಯ ನಡಾವಳಿ ಯನ್ನಾಧರಿಸಿ ನೀಡಲಾಗುತ್ತದೆ.

ನ್ಯಾಯ ನಿರ್ಣಯ ಕುಲಸಭೆಯಲ್ಲಿ ಬೇಗ ತೀರ್ಮಾನವಾಗದಿದ್ದರೆ ಕುಲಸಭೆಯ ಮುಖ್ಯಸ್ಥನು 'ಕಡ್ಡಿ ಮುರಿಯುವ' ಮೂಲಕ ಕೊನೆಯ ತೀರ್ಮಾನದ ತೀರ್ಪನ್ನು ಕೊಡುವ ನ್ಯಾಯ ಪದ್ಧತಿಯಿದೆ.

**ಶಿಕ್ಷೆಗಳ ವಿವರ**

ವ್ಯಕ್ತಿ ಮಾಡುವ ಅಪರಾಧದ ಪ್ರಮಾಣದ ಮೇಲೆ ಕುಲಸಭೆಯು ವಿವಿಧ ಹಂತದ ಶಿಕ್ಷೆಗಳನ್ನು ವಿಧಿಸುತ್ತದೆ. ಅಪರಾಧ ಸಾಧಾರಣವಾಗಿದ್ದರೆ ಅಪರಾಧಿಯು ಕುಲಸಭೆಯ ಕ್ಷಮೆಕೋರಿ, ತಪ್ಪಾಯಿತೆಂದು ಹಿರಿಯರ ಕಾಲ ಹಿಡಿಯಬೇಕು. ಮತ್ತು ಸಭೆಗೆ ಕುಲ ಸಭೆಯ ಖರ್ಚು ಕೊಡಬೇಕು. ಆ ಖರ್ಚು ಸಭೆಯ ಚಾಹಾಪಾನಿ ಇಲ್ಲವೆ ಸರಾಯಿ ಮತ್ತು ಊಟಕ್ಕಾಗುವಷ್ಟು ಕೊಡಬೇಕು.

ಸಮುದಾಯದ ಗುಂಪಿನಲ್ಲಿ ಮಾರಕಾಸ್ತ್ರಗಳಿಂದ ಹೊಡೆದಾಡಿದರೆ, ಚಪ್ಪಲಿಯಿಂದ ಹೊಡೆದಿದ್ದರೆ, ಹಿರಿಯರಿಗೆ ಹೆಂಗಸರಿಗೆ ಅವಮಾನ ಮಾಡಿದ್ದರೆ ಅವಮಾನ, ಅನ್ಯಾಯಕ್ಕೆ ಒಳಗಾದವರು ತಕ್ಷಣ ಬಂದು ಕುಲಸಭೆ ಸೇರಿಸಿದರೆ ಅದಕ್ಕೆ ಕಾರಣರಾದವರಿಗೆ ತಕ್ಷಣಕ್ಕೆ ನ್ಯಾಯ ನಿರ್ಣಯಕ್ಕಿಂತ ಮುಂಚೆಯೇ ೪೮ ಆಣೆಯಿಂದ ೫೦ ರೂಪಾಯಿಗಳ

ವರೆಗೆ ದಂಡ ವಿಧಿಸಲಾಗುತ್ತದೆ. ಆ ಬಳಿಕ ಪಂಚಾಯತಿಯ ತೀರ್ಮಾನದಂತೆ ತಪ್ಪು ಸಾಬೀತಾದರೆ ಅದರ ಎರಡು ಪಟ್ಟು ದಂಡ ವಿಧಿಸಲಾಗುತ್ತದೆ. ಆ ದಂಡದ ಹಣವನ್ನು ಅರ್ಧ ಭಾಗ ಮಾಡಿ ಅನ್ಯಾಯವಾದವರಿಗೆ ಕೊಟ್ಟರೆ ಉಳಿದರ್ಧ ಭಾಗವನ್ನು ಕುಲಸಭೆಗೆ ಇಟ್ಟುಕೊಳ್ಳಲಾಗುತ್ತದೆ.

ಮದುವೆಯಾದ ಹೆಣ್ಣು ಮಗಳ ಮೇಲೆ ಅತ್ಯಾಚಾರ ಮಾಡಿದರೆ, ಮತ್ತೊಬ್ಬನ ಪತ್ನಿಯನ್ನು ಓಡಿಸಿಕೊಂಡು ಹೋಗಿದ್ದರೆ ಅದಕ್ಕೆ ಕೊಡುವ ಶಿಕ್ಷೆಗೆ 'ಮೋಗಿನಾಲು ಧರ್ಮ' ಎಂದು ಕರೆಯುತ್ತಾರೆ. ಇದು ಮೊದಲಿನಿಂದ ನಡೆದುಕೊಂಡು ಬಂದಿದೆ. ಒಬ್ಬಾತ ಇನ್ನೊಬ್ಬನ ಪತ್ನಿಯನ್ನು ಬಲಾತ್ಕರಿಸಿದ್ದರೆ, ಓಡಿಸಿಕೊಂಡು ಹೋಗಿದ್ದರೆ ಅವನನ್ನು ಕುಲದಿಂದ ಹೊರಹಾಕಲಾಗುತ್ತದೆ. ಮಾನಭಂಗ ಮಾಡಿದವನು ಸಮುದಾಯ ದೊಳಗೆ ಪುನಃ ಪ್ರವೇಶ ಪಡೆಯಬೇಕಾದರೆ ನಾಲ್ವತ್ತೆಂಟು ರೂಪಾಯಿಗಳ ದಂಡ ಕಟ್ಟಬೇಕು. ಇದರಲ್ಲಿನ ಅರ್ಧ ಅನ್ಯಾಯಕ್ಕೆ ಒಳಗಾದ ಪತಿಗೆ, ಇನ್ನರ್ಧ ಕುಲಸ್ಥನಿಗೂ ಉಳಿದ ಹಣ ಗುರುವಿಗೂ ತಲುಪುತ್ತದೆ.

ಓಡಿ ಹೋದವರು ಮದುವೆಯಾಗಲು ಇಷ್ಟಪಟ್ಟರೆ ಈಗ ಪತಿಯಾಗುವವನು ಆಕೆಯ ಮೊದಲಿನ ಪತಿಗೆ ಕುಲಸ್ಥರ ಕ್ಷಮೆ ಕೇಳಿ ಮದುವೆಯ ಖರ್ಚು ಕೊಡಬೇಕು. ಅಲ್ಲದೆ ಕುಲಸ್ಥರ ದಂಡ ಕೊಡಬೇಕು. ಇದಕ್ಕೆ ಒಪ್ಪಿದರೆ ಸಮುದಾಯದೊಳಗೆ ಪ್ರವೇಶ ಸಿಗುತ್ತದೆ. ಇಲ್ಲದಿದ್ದರೆ ಸಮುದಾಯದಿಂದ ಬಹಿಷ್ಕಾರ ಹಾಕಲಾಗುತ್ತದೆ.

ಕುಲಸಭೆಯ ತೀರ್ಮಾನವನ್ನು ತಪ್ಪಿತಸ್ಥರು ಒಪ್ಪದೇ ಇದ್ದಾಗ, ನ್ಯಾಯ ಪಂಚಾಯ್ತಿಯ ತೀರ್ಮಾನದಲ್ಲಿ ಅನುಮಾನ, ಗೊಂದಲಗಳಿದ್ದಾಗ ವಿಶೇಷ ಕುಲಸಭೆಯನ್ನು ನಡೆಸ ಲಾಗುತ್ತದೆ. ಕುಲಸಭೆಯ ಪದ್ಧತಿಯಂತೆ ಪಂಚರು ಸಭೆಯನ್ನು ಊರ ಹೊರಗಿನ ದೂರದ ಪ್ರಶಾಂತ ಜಾಗ, ಇಲ್ಲವೆ ಊರ ಹೊರಗಿರುವ ದೇವಾಲಯದಲ್ಲಿ ಕರೆಯಲು ನಿರ್ಣಯಿಸುತ್ತಾರೆ. ಈ ಸಭೆಗೆ ಬೇರೆ ಬೇರೆ ಊರುಗಳ ಸಮುದಾಯದ ಹಿರಿಯರನ್ನು ಕರೆದು ನ್ಯಾಯ ತೀರ್ಮಾನ ಮಾಡುತ್ತಾರೆ. ಈ ನ್ಯಾಯ ನಿರ್ಣಯಕ್ಕೆ ಕಾಲಮಿತಿ ಯಿರುವುದಿಲ್ಲ. ಅದು ಎಷ್ಟು ದಿನ ನಡೆಯುತ್ತದೆಯೋ ಅಷ್ಟು ದಿನದ ಖರ್ಚನ್ನು ದೋಷಾರೋಪಿತರು ಶಿಕ್ಷೆಯ ದಂಡವಲ್ಲದೆ ಬೇರೆಯಾಗಿ ಕೊಡಬೇಕು. ದಂಡದ ಅರ್ಧ ಭಾಗ ಅನ್ಯಾಯಕ್ಕೊಳಗಾದವರಿಗೆ ಮತ್ತು ಉಳಿದರ್ಧದಲ್ಲಿ ಒಂದು ಪಾಲು ಕುಲಸ್ಥರಿಗೆ, ಉಳಿದದ್ದು ಗುರುಗಳಿಗೆ ಇಲ್ಲವೆ ದೇವಕಾರ್ಯಕ್ಕೆ ಕೊಡುತ್ತಾರೆ.

ಸಮುದಾಯದ ಹೆಂಗಸು ಬೇರೆ ಸಮುದಾಯದವನೊಂದಿಗೆ ಓಡಿ ಹೋಗಿದ್ದರೆ, ಬೇರೆ ಸಮುದಾಯದ ಹೆಂಗಸನ್ನು ಮದುವೆಯಾಗಿ ಕರೆದುಕೊಂಡು ಬಂದರೆ ಅಂಥವ ರನ್ನು ಸಮುದಾಯದಿಂದ ಬಹಿಷ್ಕಾರ ಹಾಕಲಾಗುತ್ತದೆ. ಅಂಥವರು ಪುನಃ ಸಮುದಾಯ ದೊಳಗೆ ಬರಲು ಇಚ್ಛಿಸಿದರೆ, ಕುಲಸಭೆಯ ತೀರ್ಮಾನದಂತೆ ದಂಡ ಕಟ್ಟಲಾಗುತ್ತದೆ ಮತ್ತು ಅಂಥವರಿಗೆ ಕಾಯಿಸಿದ ಬಂಗಾರದ ಉಂಗುರ ಅಥವಾ ತಾಮ್ರದ ದುಡ್ಡಿನಿಂದ ನಾಲಿಗೆ ಸುಡಿಸಿ ಬಳಿಕ ಕುಲದೊಳಗೆ ಸೇರಿಸಿಕೊಳ್ಳಲಾಗುತ್ತದೆ.

ಹೀಗೆ ಈ ಸಮುದಾಯದ ಜನ ಕೋರ್ಟು ಕಚೇರಿಗಳಿಗೆ ಹೋಗುವುದು ಕಡಿಮೆ. ಕುಲಸಭೆಯ ಮುಖ್ಯಸ್ಥನೇ ಅಂತಿಮ ತೀರ್ಪುಗಾರ, ಅಲ್ಲದೆ ಸಮುದಾಯದ ಗುಡೇಕಾರ ಅಥವಾ ಅಧ್ಯಕ್ಷ ನ್ಯಾಯಿ ಪಂಚಾಯತಿ ಸಂದರ್ಭದಲ್ಲಿ ಕಡ್ಡಿ ಮುರಿದು ಆದೇಶ ಮಾಡಿದರೆ ಅದನ್ನು ಯಾರೂ ಮೀರುವಂತಿಲ್ಲ. ಮೀರಿದರೆ ದಂಡವನ್ನು ತೆರಬೇಕು ಇಲ್ಲವೆ ಬಹಿಷ್ಕಾರಕ್ಕೆ ಒಳಗಾಗಬೇಕು.

## ಮೂಲ ನ್ಯಾಯಸ್ಥಾನದೊಡನೆ ಸಂಬಂಧ

ಸಮುದಾಯದ ಕುಲಸಭೆಯ ಮೂಲಕ ನ್ಯಾಯ ನಿರ್ಣಯ ಆಗದೇ ಇದ್ದ ಸಂದರ್ಭದಲ್ಲಿ ನ್ಯಾಯ ಪಂಚಾಯತಿಯನ್ನು ಸಮುದಾಯದ ನ್ಯಾಯ ಕೇಂದ್ರವಾದ ತಮ್ಮ ಪವಿತ್ರ ಸ್ಥಳಗಳಿಗೆ ವರ್ಗಾಯಿಸುತ್ತಾರೆ. ಅಲ್ಲಿ ಗುರು ಅಥವಾ ಆ ದೇವರ ಪೂಜಾರಿ ಕಠಿಣ ಆದೇಶ ಮತ್ತು ಆಜ್ಞೆಗಳ ಮೂಲಕ ನ್ಯಾಯ ನಿರ್ಣಯಿಸುತ್ತಾನೆ. ಅನಂತ ಕೃಷ್ಣ ಅಯ್ಯರ್ ಅವರು ಈ ಸಮುದಾಯಕ್ಕೆ ಈ ಮೊದಲು ಇದ್ದ ಕುಲಸಭೆಯ ಕಟ್ಟೆಮನೆಗಳ ಕೆಲವು ನ್ಯಾಯ ಸ್ಥಾನಗಳನ್ನು ಉಲ್ಲೇಖಿಸಿರುವರು. ಅವೆಂದರೆ; ವೆಂಕಸೊಪ್ಪ, ಕುಣಿಗಲ್, ಹಿಂದುಪುರ ಬಳಿಯ ಸಿಂಗಾರೆಡ್ಡಿಪಳ್ಳಿ ಹಾಗೂ ಹೆಸರುವಾಸಿಯಾದ ಮೈಲಿಗಾನಿವಾಣಿಘಟ್ಟ, ಅಲ್ಲಿರುವ ಗುರುವು ಕಟ್ಟೆಮನೆಯವರನ್ನು ವಿಚಾರಿಸಿ ನ್ಯಾಯ ನಿರ್ಣಯ ಮಾಡುತ್ತಾನೆ. ಇಂಥ ಸ್ಥಳಗಳು ಈ ಸಮುದಾಯದ ನ್ಯಾಯ ಕೇಳುವ ಕೊನೆಯ ಕೋರ್ಟ ಆಗಿರುತ್ತವೆ. ಅಲ್ಲಿಯೇ ಕೊನೆಯ ತೀರ್ಮಾನ. ಇದರ ಮುಂದೆ ಯಾವ ಪಂಚಾಯತಿಯೂ ಇರುವುದಿಲ್ಲ. ರಾಯಚೂರು ಜಿಲ್ಲೆಯ ಕುದುರೆಮೋತಿ, ಮಹಾರಾಷ್ಟ್ರದ ವಿಶಾಳಗಡ ಅಂಥ ಕೇಂದ್ರಗಳಾಗಿವೆ. ಅಲ್ಲಿಗೆ ಹೋದಾಗ ಯಾವುದಾದರೂ ಒಂದು ತೀರ್ಮಾನ ಆಗಲೇಬೇಕು. ಅಲ್ಲಿನ ದೇವರ ಮೇಲೆ ಪ್ರಮಾಣ ಮಾಡುವುದು, ಗುಡಿ ಅಥವಾ ದೇವರನ್ನು ಸುತ್ತು ಹಾಕುವುದು. ಅಲ್ಲಿನ ಪವಿತ್ರ ವಸ್ತುವನ್ನು ಮುಟ್ಟುವುದರ ಮೂಲಕ ತಪ್ಪಿತಸ್ಥರಿಗೆ ನ್ಯಾಯವಂತರಿಗೆ ನ್ಯಾಯ ನಿರ್ಣಯ ಮಾಡಲಾಗುತ್ತದೆ.

# ೭

# ಆರ್ಥಿಕ ಜೀವನ

## ಮೂಲ ಕಸಬು

ಈ ಸಮುದಾಯದ ಮೂಲ ಕಸಬು ಭಿಕ್ಷೆ ಬೇಡುವುದಾಗಿದೆ. ಈ ಸಮುದಾಯದ ಕುರಿತು ಮೊದಲು ಅಧ್ಯಯನ ಮಾಡಿದ ಅನೇಕ ವಿದ್ವಾಂಸರು ಕೂಡ ಅದನ್ನೇ ಉಲ್ಲೇಖಿಸಿದ್ದಾರೆ. ಇವರನ್ನು ವೈಷ್ಣವ ಭಿಕ್ಷುಕರೆಂದೂ ಎಲ್ಲ ದಾಸರಿಗಳು ಭಿಕ್ಷುಕರೆಂದೂ ಹೇಳಿರುವರು. ಭಿಕ್ಷೆಗಾಗಿಯೇ ಇವರು ವಿವಿಧ ಉಪನಾಮಗಳಿಂದ ಗುರುತಿಸಿ ಕೊಂಡಿದ್ದಾರೆ. ವಿಷ್ಣುವಿನ ಹೆಸರಿನಲ್ಲಿ ಭಿಕ್ಷೆ ಬೇಡುವ ವೃತ್ತಿಯನ್ನು ಈ ಸಮುದಾಯ ಈವರೆಗೂ ಪಾಲಿಸಿಕೊಂಡು ಬಂದಿದೆ.

ಥರ್ಸ್ಟನ್ ಅವರು 'ವಿಷ್ಣುವಿನ ಹಾಡುಗಳನ್ನು ಹೇಳುತ್ತ ಭಿಕ್ಷೆ ಬೇಡಿ ಬದುಕುವ ಸಮುದಾಯ ಎಂದೂ ಕೆಲವರು ಕಳ್ಳತನ ವೃತ್ತಿಯದಾಸರು ಇರುವರೆಂದೂ' ಹೇಳಿರು ವರು. ಸಯ್ಯದ ಸಿರಾಜ್ ಉಲ್ ಹಸನ್ ಅವರು 'ಈ ಸಮುದಾಯ ಭಿಕ್ಷೆಯನ್ನು ಸಂಗ್ರಹಿಸುವುದರೊಂದಿಗೆ ಮೀನು, ಪಾರಿವಾಳ ಇತ್ಯಾದಿ ಹಕ್ಕಿಗಳನ್ನು ಹಿಡಿದು ಮಾರುವರು. ಮತ್ತು ಕೆಲವು ಜನ ಕೃಷಿ ಹಾಗೂ ಪತ್ತೇದಾರಿ ಮಾಡುವರು'– ಎಂದಿರುವರು. ಅನಂತ ಕೃಷ್ಣ ಅಯ್ಯರ್ ಅವರು 'ಇವರ ವೃತ್ತಿಯ ಲಕ್ಷಣವೇನೆಂದರೆ ಭಿಕ್ಷೆ ಬೇಡುವುದು ಮತ್ತು ಕೆಲವು ನಿರ್ದಿಷ್ಟ ಸಮಾರಂಭಗಳಲ್ಲಿ ದೇವತಾರಾಧನೆಯನ್ನು ನಡೆಸುವುದು ಮತ್ತು ವೈಷ್ಣವ ನಂಬಿಕೆಯುಳ್ಳ ವಿವಿಧ ಜಾತಿಗಳಿಗೆ ಸೇರಿದ ಅನೇಕ ವ್ಯಕ್ತಿಗಳ ಅನುಕೂಲಕ್ಕಾಗಿ ನರ್ತನ ಮಾಡುವುದು. ಕುಟುಂಬದ ಹಿರಿಯಮಗ ಈ ವೃತ್ತಿಯನ್ನು ಕೈಗೆತ್ತಿಕೊಳ್ಳುತ್ತಾನೆ. ಉಳಿದ ಮಕ್ಕಳು ಶೂದ್ರ ವರ್ಗದವರಂತೆ ಕೃಷಿಯನ್ನು ಮಾಡುತ್ತಾರೆ' ಎಂದಿರುವರು. ಬಿ ವಿ ಗುಂಜೆಟ್ಟಿ ಅವರು ಸಮುದಾಯದ ಕಸುಬು ಕುರಿತು ಹೇಳುತ್ತಾ "ದಾಸರ ಮುಖ್ಯವಾದ ಕಸುಬು ಶಂಖ, ಗಂಟೆ, ಜಾಗಟೆ ಮೊದಲಾದ ವನ್ನು ನುಡಿಸಿ ಮನೆಮನೆಗೆ ಹೋಗಿ ಭಿಕ್ಷೆಯನ್ನು ಬೇಡುವುದಾಗಿದೆ. ದಾಸರಲ್ಲಿ ಕೆಲವರು ದನಗಳ ವ್ಯಾಪಾರವನ್ನು ಮಾಡುವರು. ಕೆಲವರು ಗಿಡಮೂಲಿಕೆ ಔಷಧಗಳನ್ನೂ ಕೊಡುವರು. ಹುಲ್ಲಿನಿಂದ ಚಾಪೆ, ಕೋಡುಗಳಿಂದ ಹಣಿಗೆ ಮೊದಲಾದವುಗಳನ್ನು ಮಾಡಿ ಮಾರುವದುಂಟು. ಕೆಲವರು ಇತ್ತೀಚಿಗೆ ಒಕ್ಕಲುತನಕ್ಕೂ ತೊಡಗಿರುವದು ಕಂಡು ಬರುತ್ತದೆ. ದಾಸರಾಟವನ್ನು ಮಾಡುವದು, ಬಗರೀ ಆಟ, ಜಾದೂ ಆಟಗಳನ್ನೂ

ಮಾಡುವರು. ತುಟಿಯ ಮೇಲೆ ಮೂಗಿನ ಮೇಲೆ ಬಗರೀ ಆಡಿಸುವ ಅವರ ಹವ್ಯಾಸ ಸೋಜಿಗವನ್ನುಂಟು ಮಾಡುತ್ತದೆ. ದಾಸರ ಹೆಣ್ಣು ಮಕ್ಕಳು ಕೂಲಿ ಮಾಡುವರು. ಕೆಲವರು ಕೌದಿ ಮೊದಲಾದವನ್ನು ಹೊಲಿಯುವರು. ಕೆಲವರು ಆಗಾಗ ಬರುವ ಆಮಂತ್ರಣಗಳನ್ನು ಸ್ವೀಕರಿಸಿ ಆಟಗಳಲ್ಲಿ ಪಾತ್ರವಹಿಸಿ ಬರುವರು" ಎಂದಿರುವರು.

ಈ ಮೇಲಿನ ಬರಹಗಳು ಮತ್ತು ಸಮುದಾಯದ ಈಗಿನ ಪರಿಸ್ಥಿತಿಯನ್ನು ಗಮನಿಸಿ ಹೇಳುವುದಾದರೆ ಭಿಕ್ಷಾಟನೆ ಇವರ ಮೂಲ ಕಸುಬಾಗಿದೆ. ಗಂಡಸರು ಏಕತಾರಿ-ತಂಬೂರಿ ಹಿಡಿದು, ಗರುಡಗಂಬ ಗೋಪಾಳ ಬುಟ್ಟಿಯೊಂದಿಗೆ ಭಿಕ್ಷೆಗೆ ಹೋದರೆ, ಹೆಂಗಸರು ಭಿಕ್ಷೆಬೇಡುವುದರ ಜೊತೆಗೆ ಅಲಂಕಾರದ ವಸ್ತುಗಳು ಸೂಜಿ-ಪಿನ್ನು ಇತ್ಯಾದಿ ಮಾರಾಟ ಮಾಡುತ್ತ ಹೋಗತ್ತಿದ್ದರು. ಕೆಲವು ಕಡೆ ಮುಖ್ಯವಾಗಿ ಮೈಸೂರು ಭಾಗದಲ್ಲಿ ಹೆಂಗಸರು ಜೋಳಿಗೆಯನ್ನು ಹಾಕಿಕೊಂಡು ದಮ್ಮಡಿ ಬಾರಿಸುತ್ತ ಗಂಗೆ-ಗೌರಿ, ಗೌರಮ್ಮನ ಹಾಡು-ಇತ್ಯಾದಿ ಪದಗಳನ್ನು ಹಾಡುತ್ತ ಭಿಕ್ಷೆ ಬೇಡುತ್ತಿದ್ದರು. ರಾಯಚೂರು, ಕೊಪ್ಪಳ, ಬಳ್ಳಾರಿ, ದಾವಣಗೆರೆ ಕಡೆಗಳಲ್ಲಿ 'ಹೆಣ್ಣುವೇಷದವರು' ಎಂದು ಕರೆಸಿಕೊಳ್ಳುವ ಈ ಸಮುದಾಯದವರು ಪೌರಾಣಿಕ, ಸಾಮಾಜಿಕ ಬಯಲಾಟ ಗಳನ್ನು ಆಡಿ ಹೊಟ್ಟೆ ಹೊರೆಯುತ್ತಿದ್ದರೆ, ಬಿಜಾಪುರ ಭಾಗದಲ್ಲಿ ಪ್ರಸಿದ್ಧ 'ದಾಸರಾಟ' ಗಳ ಮತ್ತು 'ಪಾರಿಜಾತ' ಆಟಗಳ ಪ್ರದರ್ಶನಗಳ ಮೂಲಕ ವೃತ್ತಿಜೀವನ ಸಾಗಿಸುತ್ತಿದ್ದರು.

ಕೆಲವು ಕಡೆ ಗಂಡಸರು ಬೇಟೆಗೆ ಹೋಗಿ ಮಾಂಸ ಸಂಗ್ರಹಿಸಿ ತರುವುದರೊಂದಿಗೆ ಮೊಲ, ಕವುಜುಗ, ಪಾರಿವಾಳ, ಮೀನು ಹಿಡಿದು ತಂದು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದರು. ಬೆಳಗಾವಿ ಭಾಗದಲ್ಲಿ ಬೇಟೆಯಾಡುವುದಲ್ಲದೆ ಕೇದಗೆ ಎಡೆ ಮತ್ತು ಇತರ ಪೂಜಾ ಹೂವುಗಳನ್ನು ದೂರದ ಕಾಡಿನಿಂದ ಹಾಗೂ ಕೊಂಡು ತಂದು ಮಾರಾಟ ಮಾಡಿ ಉಪಜೀವನ ನಡೆಸುತ್ತಾರೆ. ಕೆಲವು ಕಡೆ ಗಂಡಸು-ಹೆಂಗಸರು ಸೇರಿ ಕೌದಿಗಳನ್ನು ಹೊಲಿದು ಉಪಜೀವನ ಸಾಗಿಸುತ್ತಾರೆ. ಜೊತೆ ಜೊತೆಗೆ ಸಾಕುಪ್ರಾಣಿ-ಪಕ್ಷಿಗಳಾದ ಆಡು, ಕುರಿ, ಎಮ್ಮೆ, ಆಕಳು, ಕೋಳಿ, ಹಂದಿ-ಗಳನ್ನು ಸಾಕಿ ಅವನ್ನು ಮಾರಾಟಮಾಡಿ ಆದಾಯ ಹೆಚ್ಚಿಸಿಕೊಳ್ಳುತ್ತಾರೆ.

ಬರುಬರುತ್ತ ಅಲೆಮಾರಿತನ ಬಿಟ್ಟು ಅರೆ ಅಲೆಮಾರಿಗಳಾಗುತ್ತಿದ್ದಂತೆಯೇ ಕೂಲಿ ಕೆಲಸಗಳಿಗೆ, ಕೃಷಿ-ಒಕ್ಕಲುತನಕ್ಕೆ ಮುಂದಾಗತೊಡಗಿದರು. ಈ ಸಮುದಾಯದಲ್ಲಿ ನೀರಾವರಿ ಬೇಸಾಯ ಮತ್ತು ಒಣಬೇಸಾಯ ಮಾಡುವ ಜನರಿದ್ದಾರೆ. ಬೆಂಗಳೂರಿನಂಥ ನಗರಗಳಲ್ಲಿ ಹೊಟೇಲ್ ಉದ್ದಿಮೆಗೆ ಇಳಿದಿರುವವರೂ ಇದ್ದಾರೆ. ಚಿಕ್ಕ-ಪುಟ್ಟ ಅಂಗಡಿ ಗಳನ್ನಿಟ್ಟುಕೊಂಡು ಕಿರಾಣಿ ವ್ಯಾಪಾರ ಮಾಡುವವರೂ ಇದ್ದಾರೆ. ಶಿಕ್ಷಣದ ಸವಲತ್ತು ಮೀಸಲಾತಿಯ ಲಾಭದಿಂದಾಗಿ ಸರಕಾರದ ಬೇರೆ ಬೇರೆ ಇಲಾಖೆಗಳಲ್ಲಿ, ಖಾಸಗಿ ಉದ್ದಿಮೆಗಳಲ್ಲಿ, ಶಿಕ್ಷಣ-ಸಂಸ್ಥೆಗಳಲ್ಲಿ ಅನೇಕ ನೌಕರರು ಇಂದು ವೃತ್ತಿಜೀವನಕ್ಕೆ ಇಳಿದಿದ್ದಾರೆ. ಭಿಕ್ಷಾಟನೆ ಪೂರ್ತಿ ಮರೆಯಾಗಿಲ್ಲದಿದ್ದರೂ ಬಹುತೇಕರು ಅದರಿಂದ ವಿಮುಖ ರಾಗಿದ್ದಾರೆ. ಕೂಲಿ, ಕೃಷಿ ಮತ್ತು ಶಿಕ್ಷಣ, ಉದ್ಯೋಗ ಇಂದು ಈ ಸಮುದಾಯದ ಕಸುಬಿನ ಬದಲಾವಣೆಯಾಗಿದೆ.

**ಬಳಸುವ ಉಪಕರಣಗಳು, ಕುಟುಂಬ ನಿರ್ವಹಣೆ**

ಸಮೂದಾಯದ ಮೂಲ ಕಸುಬನ್ನು ಅನುಸರಿಸಿ, ಅವಕ್ಕೆ ಬಳಸುವ ಉಪಕರಣಗಳನ್ನು ಐದು ಬಗೆಯಲ್ಲಿ ವಿಂಗಡಸಿ ಹೇಳಬಹುದು. ಭಿಕ್ಷೆ, ವ್ಯಾಪಾರ, ಬೇಟೆ, ಕೂಲಿ ಮತ್ತು ಕೃಷಿ. ಕೂಲಿ ಮತ್ತು ಕೃಷಿಯು ಇತ್ತಿತ್ತಲಾಗಿ ಈ ಸಮುದಾಯ ನೆಲೆ ನಿಂತ ನಂತರದ ವೃತ್ತಿಗಳಾಗಿವೆ. ಕೃಷಿ ಇತ್ತೀಚಿನದಾದರೆ ಕೂಲಿಯು ಭಿಕ್ಷೆ ಮತ್ತು ಕೃಷಿಯ ನಡುವಿನ ವೃತ್ತಿಯಾಗಿದೆ,

ಸಮುದಾಯದ ಮೂಲ ಕಸುಬು ಭಿಕ್ಷೆ. ಬಿಕ್ಷೆಯಲ್ಲಿ ಎರಡು ವಿಧ ಉಂಟು ಒಂದು– ಕಲಾ ಮಾಧ್ಯಮದ ಪ್ರದರ್ಶನಗಳ ಮೂಲಕ ಬೇಡುವುದು. ಏಕತಾರಿ, ತಂಬೂರಿಗಳನ್ನು ಬಳಸಿ ತತ್ವ ಪದಗಳನ್ನು ಹಾಡುತ್ತ ; ಬಯಲಾಟಗಳನ್ನು ಪ್ರದರ್ಶಿಸುತ್ತ; ದಮ್ಮಡಿ ಬಳಸಿ ಗಂಗೆ– ಗೌರಿ ಪದಗಳನ್ನು ಹಾಡುತ್ತಾ ಬೇಡುವುದು. ಎರಡನೆಯದು– ಬರೀ ವಾದ್ಯಗಳನ್ನು ಬಾರಿಸುತ್ತ ಗೋಪಾಳ ಬುಟ್ಟಿಯೊಂದಿಗೆ ಬೇಡುವುದು. ಗಂಟೆ, ಜಾಗಟೆ ಮತ್ತು ಶಂಖಗಳನ್ನು ಬಳಸುವ ಇವರು ಹಾಡು ಹೇಳುವದಿಲ್ಲ. ಬದಲಿಗೆ, 'ಶ್ರೀಮದ್ ವೆಂಕಟರಮಣ ಗೋವಿಂದಾ ಗೂವಿಂದ,' ಎಂದು ಉಗ್ಘಡಿಸುವರು.

ಈ ರೀತಿಯ ಭಿಕ್ಷೆ ಬೇಡುವವರು ಪ್ರಮುಖವಾಗಿ ಗೋಪಾಳ ಬುಟ್ಟಿಯನ್ನು, ಅದನ್ನು ಒಯ್ಯದವರು ವಿಶೇಷವಾಗಿ ಗಂಗೆ– ಗೌರಿ ಹಾಡು ಹೇಳುವ ಸ್ತ್ರೀ ಗುಂಪಿನವರು, ಜೋಳಿಗೆಯನ್ನು ಧಾನ್ಯ ಸಂಗ್ರಹಕ್ಕಾಗಿ ಒಯ್ಯುತ್ತಾರೆ. ಇವರು ಬಳಸುವ ಪ್ರಮುಖ ವಾದ್ಯ ಪರಿಕರಗಳಲ್ಲಿ ಏಕತಾರಿ, ತಂಬೂರಿ, ಜಾಗಟೆ ಮತ್ತು ಶಂಖ ಪ್ರಮುಖ ವಾದುವುಗಳು. ಜೊತೆಯಲ್ಲಿ ಗರುಡುಗಂಬ ಅಥವಾ ದೀಪಸ್ತಂಬ ಒಯ್ಯುತ್ತಾರೆ.

ಈ ಸಮುದಾಯದ ಬಯಲಾಟದವರು ಊರವರಿಂದ ಒಪ್ಪಂದದ ಮೇಲೆ ಮುಂಗಡ ಹಣ ಪಡೆದು ನಿಶ್ಚಿತ ದಿನಂದು ಹೋಗಿ ಬಯಲಾಟ ಆಡಿ ಬರುವವರಲ್ಲ. ತಾವಾಗಿಯೇ ಊರುರು, ಓಣಿ–ಓಣಿ ತಿರುಗಿ ಬಯಲಾಟ ಪ್ರದರ್ಶಿಸಿ ಕೊಟ್ಟಷ್ಟು ಕಾಳು–ಕಡಿ ಇಲ್ಲವೇ ಹಣ–ವಸ್ತ್ರ ಪಡೆದು ಬರುವವರು. ಇವರು ಹೆಚ್ಚಾಗಿ ಹಣವನ್ನೇ ಪಡೆಯುವರು. ಕಾಳು ಕಡಿಗೆ ಗೋಣಿ ಚೀಲಗಳನ್ನು ಬಳಸುತ್ತಾರೆ. ಇವರ ವಾದ್ಯಗಳಲ್ಲಿ ಪೇಟಿ, ಮೃದಂಗ, ದಮ್ಮಡಿ,ವಯೋಲಿನ್ ಮತ್ತು ಕೈತಾಳ ಬಳಸುತ್ತಾರೆ.

ವ್ಯಾಪಾರ ಮಾಡುವ ಕಸುಬಿನವರು ಬಂಡವಾಳ ಹೂಡಿ ವ್ಯಾಪಾರ ಮಾಡುವ ಉದ್ದಿಮೆದಾರರಲ್ಲ. ಭಿಕ್ಷೆ ಬೇಡುವ ಉದ್ದೇಶದಿಂದಲೇ ಹೊರಡುವ ಇವರು ಗಾಜಿನ ಸರಗಳು, ಸೂಜಿ, ಪಿನ್ನು, ದಬ್ಬನ, ಕ್ಯಾರ(ಕೇರ), ದಾರ, ಹಾಗೂ ಉಡದ ಎಣ್ಣೆ ಇತರ ವನಸ್ಪತಿಗಳನ್ನು, ತೆಗೆದುಕೊಂಡು ಹೋಗಿ ಮಾರಾಟ ಮಾಡುವರು. ಇವರು ಕೂಡ ಧಾನ್ಯ ಮತ್ತು ಹಣ ಎರಡನ್ನೂ ಪಡೆಯುತ್ತಾರೆ.

**ಬೇಟೆ:** ಬೇಟೆಯು ಈ ಸಮುದಾಯದ ಪರಂಪರೆಯ ಕಸುಬಾಗಿದೆ. ದೊರೆತಿರುವ ಹೆಳವರ ದಾಖಲೆಯ ಪ್ರಕಾರ ೧೫,೧೬ ನೇ ಶತಮಾನದಲ್ಲಿ ಇವರು ಮೀನು, ಏಡಿ ಹಿಡಿದು ಮಾರುತ್ತಿದ್ದರೆಂದು ತಿಳಿದು ಬರುತ್ತದೆ. ಮೀನು ಹಿಡಿಯಲು ಮೂರು

ರೀತಿಯ ಬಲೆಗಳಿವೆ. ಚಕ್ರ ಬಲೆ, ಮೂಲೆಯ ಬಲೆ ಮತ್ತು ಅಡ್ಡ ಬಲೆ. ಏಡಿಗಳನ್ನು ಹಿಡಿಯಲು ವಿಶೇಷ ಬಲೆಗಳನ್ನು ಇವರು ಉಪಯೋಗಿಸುತ್ತಾರೆ. ಬಿದಿರಿನ ಇಲ್ಲವೆ ಈಚಲು ಮರದ ಗರಿಗಳಿಂದ ಎರಡು ಮೂರು ಘೂಟಿನ ಬುಟ್ಟಿಯಾಕಾರದ ಗುಂಡಾದ ಬಲೆಯನ್ನು ಹೆಣೆಯುತ್ತಾರೆ. ಎರಡು ಬದಿಗೆ ಏಡಿಗಳು ಬರಲು ರಂಧ್ರಗಳನ್ನು ಬಿಟ್ಟಿರುತ್ತಾರೆ. ಏಡಿಗಳು ಒಳಕ್ಕೆ ಬರುತ್ತವೆ. ಆದರೆ ಹೊರಕ್ಕೆ ಹೋಗಲು ಆಗದಂತೆ ರಂಧ್ರಗಳನ್ನು ಜೋಡಿಸಿರುತ್ತಾರೆ. ಒಳಗೆ ಕೋಳಿ, ಆಡು ಇವುಗಳ ಕರುಳಿನ ತುಂಡುಗಳನ್ನು ಇಟ್ಟು ನೀರಿನಲ್ಲಿ ಇಡುತ್ತಾರೆ. ಅವುಗಳ ವಾಸನೆಗೆ ಏಡಿಗಳು ಬಲೆಯೊಳಗೆ ಬಂದು ಬೀಳುತ್ತವೆ. ಬಲೆಯಿಲ್ಲದವರು ಏಡಿಗಳು ನೀರಿನಲ್ಲಿರುವ ಪೊಟರೆಗಳಲ್ಲಿರುವದರಿಂದ ಅವನ್ನು ಅಗೆಯಲು ಗುದ್ದಲಿ ಮತ್ತು ಉದ್ದ ಬಾಯಿಯ ಕುರುಪಿ ಬಳಸುತ್ತಾರೆ. ಮಂಸಾಹಾರಿಗಳಾದ ಇವರು ಕಾಡು ಪ್ರಾಣಿ ಮತ್ತು ಪಕ್ಷಿಗಳನ್ನು ಹಿಡಿದು ತಿನ್ನುವ್ರದರ ಜೊತೆಗೆ ಬೇರೆಜಾತಿಯವರು ತಿನ್ನುವ ಕೆಲವು ಪ್ರಾಣಿ ಪಕ್ಷಿಗಳನ್ನು ಹಿಡಿದು ತಂದು ಮಾರುತ್ತಾರೆ. ಮತ್ತು ಕೆಲವು ಸಾರಿ ಬೇರೆಯವರಿಂದ ನಿರೂಪ ಪಡೆದು ಅಂತಹ ಪ್ರಾಣಿ–ಪಕ್ಷಿಗಳನ್ನು ಬೇಟೆಯಾಡಿ ತಂದು ಒಪ್ಪಿಸುತ್ತಾರೆ. ಪ್ರಾಣಿಗಳನ್ನು ಹಿಡಿಯಲು ಉದಾಹರಣೆಗೆ ಕಾಡು ಹಂದಿ, ಮೊಲ, ಬೆಕ್ಕು ಹಿಡಿಯಲು ಬಲೆಗಳನ್ನು, ಬರ್ಚಿ–ಬಲ್ಲೆಯನ್ನು ಬಳಸುತ್ತಾರೆ. ಮುಖ್ಯವಾಗಿ ಕಾಡು ಮತ್ತು ಬಯಲ ಪೊದೆಗಳಲ್ಲಿ ಪ್ರಾಣಿಗಳನ್ನು ಹಿಡಿಯಲು ಸಾಕಿರುವ ಬೇಟೆಯ ನಾಯಿಗಳಿರುತ್ತವೆ. ಪಕ್ಷಿಗಳಾದ ಕವುಜುಗಗಳನ್ನು ಹಿಡಿಯಲು ಕಟ್ಟಿಗೆಯ ಕಡ್ಡಿಗಳಿಂದ ಮಾಡಿದ ೨ ಪೂಟು ಎತ್ತರದ ಸುಮಾರು ೨೫ ರಿಂದ ೩೦ ಪೂಟ ಉದ್ದದ ಬಲೆ ಇರುತ್ತದೆ. ಪಾರಿವಾಳಗಳು ವಿಶೇಷತಃ ಭಾವಿ ಮತ್ತು ಪಾಳುಬಾವಿ, ಹಾಳು ಮನೆಗಳಲ್ಲಿ ಇರುತ್ತವೆ. ಬಾವಿಯ ಬಾಯಿ ಮುಚ್ಚುವಷ್ಟು ಅಗಲವಾದ ಬಲೆಗಳನ್ನು ಅವರೆ ನೇಯ್ದಿರುತ್ತಾರೆ. ಇಲ್ಲವೆ ಮೀನು ಹಿಡಿಯಲು ಬಳಸುವ ಚಕ್ರ ಬಲೆಯನ್ನು ಬಳಸುತ್ತಾರೆ. ಇದರ ಜೊತೆಗೆ ಕಾಡು ಹಂದಿಯ ಹಾಗು ಉಡದ ಎಣ್ಣೆಯನ್ನು ಸಂಧಿ ನೋವಿಗೆ, ಧನಗಳಿಗೆ ತಗಲುವ ಗಾಯಗಳ ನೋವಿಗೆ ಉಪಯೋಗಿಸಲು ಮಾರುತ್ತಾರೆ. ಪಾರಿವಾಳ ಪಾರ್ಶ್ವ ವಾಯು ರೋಗಕ್ಕೆ ಅತ್ಯುತ್ತಮ ಪರಿಣಾಮದ ಔಷಧ ಗುಣವಿರುವ ಪಕ್ಷಿ, ಅಳಿಲಿನ ರಕ್ತ ನಾಯಿಕೆಮ್ಮಿಗೆ ಅತ್ಯುತ್ತಮ ಔಷಧವಾಗಿದೆ. ಹೀಗೆ ಇಂತಹ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಮಾಂಸ ಮತ್ತು ಔಷಧಕ್ಕಾಗಿ ಮಾರಾಟ ಮಾಡಿ ಉಪಜೀವನ ನಡೆಸುತ್ತಾರೆ.

**ಕುಟುಂಬ ನಿರ್ವಹಣೆ :** ಸ್ವಾತಂತ್ರ್ಯ ನಂತರದಲ್ಲಿನ ಹಲವು ಕಾನೂನುಗಳು ಇವರ ಭಿಕ್ಷೆ ಮತ್ತು ಬೇಟೆಗೆ ಅಡಚಣೆಯಾಗಿವೆ. ಚೆನ್ನದಾಸರನ್ನು ಹಲವೆಡೆ ದೊಂಗದಾಸರೆಂದು ಅಪರಾಧಿ ಬುಡಕಟ್ಟು ಎಂದು ಗುರುತಿಸಿರುವುದರಿಂದ ಇಂತಹ ಸಮುದಾಯವನ್ನು ಪೋಲಿಸರು ಮತ್ತು ಊರವರು ಅನುಮಾನಿಸುತ್ತಿರುವುದರಿಂದ ಹಾಗೂ ನೆಲೆನಿಂತು ಕೂಲಿ–ಕೃಷಿ ಮಾಡುತ್ತಿರುವುದರಿಂದ, ಭಿಕ್ಷೆ ಬೇಡುವವರ ಸಂಖ್ಯೆ ತೀರಾ ಕಡಿಮೆ

ಯಾಯಿತು. ಶಿಕ್ಷಣ ಪಡೆದ ಯುವಪೀಳಿಗೆ ಇದನ್ನು ಅವಮಾನವೆಂದು ಭಾವಿಸಿದ್ದರಿಂದ ವೃತ್ತಿ ಬದಲಾವಣೆಯಾಗತೊಡಗಿತು. ಬೇಟೆಯು ಕೂಡ ಕಾನೂನಿನಲ್ಲಿ ಅಪರಾಧವಾಗಿದೆ. ಮತ್ತು ಬೇಟೆಗೆ ಹೋದಲ್ಲಿ ಜನ ಇವರು ಕಳ್ಳರೆಂದು ಅನುಮಾನಿಸುವುದು ಈ ವೃತ್ತಿಯ ಇಳಿಮುಖಕ್ಕೆ ಕಾರಣವಾಯಿತು. ಆದರೆ ಈ ಸಮುದಾಯದಲ್ಲಿ ಬೇಟೆಯು ಇನ್ನೂ ಉಳಿದಿದ್ದು ಮಾಂಸವನ್ನು ಬೇಟೆಯಾಡಿಯೇ ಸಂಪಾದಿಸುತ್ತಾರೆ. ಹವ್ಯಾಸವಾಗಿ ಬೇಟೆ ಇನ್ನು ಮುಂದುವರೆದಿದ್ದರೂ ಉಪಜೀವನಕ್ಕೆ ಅದನ್ನು ಅವಲಂಬಿಸಿಲ್ಲ.

ವ್ಯಾಪಾರದಲ್ಲಿ ದೊಡ್ಡ ಬಂಡವಾಳ ಹೂಡದಿದರೂ ಚಿಕ್ಕ-ಪುಟ್ಟ ಸಾಮಾನುಗಳನ್ನು ಈ ಮೇಲೆ ತಿಳಿಸಿದಂತೆ ಮಾರುತ್ತಿದ್ದವರು ಅಂತಹ ವಸ್ತುಗಳ ಅಂಗಡಿಯನ್ನಿಟ್ಟುಕೊಂಡು ಮತ್ತು ಸಂತೆ ಜಾತ್ರೆಗಳಿಗೆ ಹೋಗಿ ಟೆಂಟು ಹಾಕಿ ಮಾರಿಕೊಂಡು ಜೀವನ ಸಾಗಿಸು ತ್ತಿರುವರು. ಬಿಜಾಪೂರ, ಬೆಳಗಾವಿ, ಧಾರವಾಡ, ಕೋಲಾರ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳಲ್ಲಿ ಇಂತಹ ಸಣ್ಣ ವ್ಯಾಪಾರ ಮಾಡುವ ಸಮುದಾಯದವರಿದ್ದಾರೆ. ಇದರಿಂದ ಬರುವ ಆದಾಯದಿಂದ ಕೆಲವರು ಕೃಷಿ ಜಮೀನು ಕೊಂಡು ಒಕ್ಕಲುತನಕ್ಕೂ ಇಳಿದಿರುವರು. ಕೆಲವು ಪ್ರಾಣಿ ಪಕ್ಷಿಗಳ ಬೇಟೆಗೆ ನಿಷೇಧ ಇರುವುದರಿಂದ, ಅರಣ್ಯ ಪ್ರವೇಶ ನಿಷೇಧದಿಂದಾಗಿ ವನಸ್ಪತಿ-ಆಯುರ್ವೇದ ಔಷಧ ವ್ಯಾಪಾರ ಈಗ ನಿಂತು ಹೋಗಿದೆ.

ಈಗ ಏನಿದ್ದರೂ ಕುಟುಂಬ ನಿರ್ವಹಣೆಗೆ, ಸಾಕು ಪ್ರಾಣಿಗಳ ಪಶುಪಾಲನೆಗೆ, ಕೂಲಿ ಮತ್ತು ಕೃಷಿಯೇ ಜೀವನಾಧಾರವಾಗಿರುವುದರಿಂದ ಮೂಲ ಕಸಬು ಇಂದು ಪೂರ್ತಿ ಕಾಣೆಯಾಗುತ್ತಿದೆ. ಶಿಕ್ಷಣ ಮತ್ತು ಉದ್ಯೋಗದಲ್ಲಿನ ಮೀಸಲಾತಿಯಿಂದಾಗಿ ಸಮುದಾಯದ ಅನೇಕರು ವಿವಿಧ ಹುದ್ದೆಗಳಲ್ಲಿ ಮುಂದುವರೆದಿದ್ದು ಬಹುಸಂಖ್ಯಾತರು ಶಿಕ್ಷಣದ ಕಡೆಗೆ ವಾಲುತಿದ್ದಾರೆ.

ಈ ಸಮುದಾಯದ ಹಲವಾರು ಪಂಗಡಗಳಾದ ದೊಂಬಿದಾಸರು, ದೊಂಗ ದಾಸರು, ದಾಸರು, ದಾಸರಿ ಇತ್ಯಾದಿ ಹೆಸರಿನವರಿಗೆ ಪರಿಶಿಷ್ಟ ಜಾತಿಯ ಲಾಭವಿಲ್ಲದೆ ಕೂಲಿಗಳಾಗಿಯೇ, ಕೆಲವು ಕಡೆ ಭಿಕ್ಷುಕರಾಗಿಯೇ ಮುಂದುವರೆದಿರುವ ದುರಂತಕ್ಕೆ ಒಳಗಾಗಿದ್ದಾರೆ.

ಒಟ್ಟಿನಲ್ಲಿ ಮೂಲ ಕಸಬು ಈ ಸಮುದಾಯಕ್ಕೆ ಈಗ ಜೀವನಾಧಾರವಾಗಿಲ್ಲ, ಇದರಿಂದಾಗಿ ಮೂಲ ಕಸುಬಿನಲ್ಲಿ ಭದ್ರತೆಯಿಲ್ಲ, ಕುಟುಂಬ ನಿರ್ವಹಣೆ ಅಸಾಧ್ಯ ವಾಗುತ್ತಿದೆ. ಕೆಲಸಕ್ಕಾಗಿ ಗುಳೆ ಹೋಗುವುದು, ಕೂಲಿ ಮಾಡುವುದು, ಅಲ್ಪ ಪ್ರಮಾಣದಲ್ಲಿ ಕೃಷಿ ಮಾಡುವುದು, ಕೆಲವು ಜನ ವ್ಯಾಪಾರಕ್ಕಿಳಿಯುವುದು, ಇವರಲ್ಲಿ ಕೆಲವರು ಶಿಕ್ಷಣ ಪಡೆದು ನೌಕರಿ ಮಾಡುತ್ತಿರುವುದು ಸಾಮಾನ್ಯವಾಗಿದೆ. ನಿಶ್ಚಿತ ಕಸುಬೆಂಬುದು ಈಗ ಇಲ್ಲವಾಗಿದೆ. ನೆಲೆಯೂರಲು ಜಾಗವಿಲ್ಲದೆ ಅಲೆಮಾರಿಗಳಾಗಿರುವ, ಜಾಗವಿದ್ದು ಕೃಷಿ ಭೂಮಿಯಿಲ್ಲದೆ ಕೂಲಿ ಹುಡುಕುತ್ತ ಹೋಗುವ ಅರೆ ಅಲೆಮಾರಿಗಳಾಗಿ ಅರ್ಧಕ್ಕಿಂತ ಹೆಚ್ಚಿನ ಜನ ಉಪ ಜೀವನದ ಅಭದ್ರತೆಯಲ್ಲಿದ್ದಾರೆ.

**ಕೃಷಿ, ಭೂಒಡೆತನ**

ಅಲೆಮಾರಿತನ ತೊರೆದು ನೆಲೆನಿಂತವರು ಈ ಸಮುದಾಯದ ಕೆಲವರು ಕೃಷಿ ವ್ಯವಸಾಯದಲ್ಲಿ ತೊಡಗಿಸಿಕೊಂಡವರು ಇದ್ದಾರೆ. ಪ್ರಾರಂಭದಲ್ಲಿ ಸಾಕುಪ್ರಾಣಿಗಳ ಆದಾಯದಿಂದ ಹಣ ಸಂಗ್ರಹಿಸಿ ಸ್ವಲ್ಪ ಕೃಷಿಭೂಮಿ ಕೊಂಡು ಒಕ್ಕಲುತನ ಮಾಡುತ್ತಿದ್ದರೆ ಮತ್ತು ಕೆಲವರು ಬೇರೆಯವರ ಹೊಲ-ಗದ್ದೆಗಳನ್ನು ಸಮಪಾಲು ಆಧಾರದಲ್ಲಿ ವ್ಯವಸಾಯ ಮಾಡಿ ಹಣಗಳಿಸಿ ಕೃಷಿಭೂಮಿಕೊಂಡು ಒಕ್ಕಲುತನ ಮಾಡುವವರು ಇದ್ದಾರೆ. ಇನ್ನೂ ಕೆಲವೆಡೆ ಚಿಕ್ಕಪುಟ್ಟ ನೌಕರಿಗಳನ್ನು ಮಾಡಿ ಬಂದ ಆದಾಯದಿಂದ ಕೃಷಿ ಜಮೀನುಕೊಂಡು ಭೂಒಡೆಯರಾದವರು ಇದ್ದಾರೆ. ಆದರೆ ಇಂಥ ಕೃಷಿ ಮತ್ತು ಭೂಒಡೆತನದವರ ಸಂಖ್ಯೆ ಕಡಿಮೆಯಿದೆ. ಇಂಥ ಜನ ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ, ದಾವಣೆಗೆರೆ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

**ಪಶುಪಾಲನೆ**

ಮೂಲತಃ ಅಲೆಮಾರಿಗಳಾಗಿದ್ದ ಈ ಸಮುದಾಯ ತನ್ನ ಅಲೆಮಾರಿ ಜೀವನಕ್ಕೆ ಪಶುಗಳನ್ನು ಬಳಸಿಕೊಳ್ಳುತ್ತಿತ್ತು. ತಮ್ಮ ದಿನನಿತ್ಯದ ಅಗತ್ಯದ ವಸ್ತುಗಳನ್ನು ತಾವು ಸಾಕಿದ ಪ್ರಾಣಿಗಳ ಮೇಲೆ ಹೇರಿಕೊಂಡು, ಚಿಕ್ಕಮಕ್ಕಳನ್ನು, ವಯಸ್ಸಾದವರನ್ನು ಅವುಗಳ ಮೇಲೆ ಕೂಡ್ರಿಸಿಕೊಂಡು ಸಾಗುತ್ತಿದ್ದರು. ಆ ಪ್ರಾಣಿಗಳು ತಮ್ಮ ಸಾರಿಗೆಗೂ ಬೇಕು, ಹೈನಕ್ಕೂ ಬೇಕು. ಅಂಥ ಪ್ರಾಣಿಗಳಲ್ಲಿ ಹಸು, ಎಮ್ಮೆ, ಆಡು ಪ್ರಮುಖವಾದವುಗಳು. ಕೆಲವರು ಸಾರಿಗೆಗಾಗಿ ಕತ್ತೆ, ಕುದುರೆಗಳನ್ನು ಬಳಸುತಿದ್ದುದೂ ಉಂಟು. ಆದರೆ ಸರ್ವೇಸಾಮಾನ್ಯವಾಗಿ ಹಸು, ಎಮ್ಮೆ, ಆಡು ಜೊತೆಯಲ್ಲಿ ಕೋಳಿಗಳನ್ನು ಸಾಕುವರು. ನಗರವಾಸಿಗಳನ್ನು ಹೊರತುಪಡಿಸಿದರೆ ಸಮುದಾಯದ ಬಹುತೇಕರ ವೃತ್ತಿ ಪಶುಪಾಲನೆಯಾಗಿದೆ. ಕೃಷಿಕರಾಗಿರುವುದರಿಂದ ಎತ್ತುಗಳನ್ನು ಮತ್ತು ಬೇಟೆಗಾರಿಕೆಯ ಹಿನ್ನೆಲೆಯನ್ನು ಹೊಂದಿರುವುದರಿಂದ ಕೌಜುಗಗಳನ್ನು ಸಾಕಿರುವುದನ್ನು ಕಾಣುತ್ತೇವೆ. ಎತ್ತು, ಹೋರಿ, ಆಕಳು, ಕರು, ಎಮ್ಮೆ, ಕೋಣ, ಕುರಿ, ಮೇಕೆ, ಕೋಳಿ ಇತ್ಯಾದಿ ಪಶುಪಾಲನೆಯತ್ತ ಒಲವು ತೋರುತ್ತಿರುವುದನ್ನು ಕಾಣಬಹುದಾಗಿದೆ. ಇವರಲ್ಲಿ ಇರುವ ಪಶುಸಂಪತ್ತು ಈ ಕೆಳಗಿನಂತಿದೆ (ಕೋಷ್ಟಕ: ೬.೧).

**ಕೋಷ್ಟಕ: ೬.೧ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಪಶು ಸಂಪತ್ತು (೨೦೦೬)**

| ಕ್ರಸಂ. | ಹೆಸರು | ಸಂಖ್ಯೆ |
|---|---|---|
| ೧ | ಎತ್ತು, ಹೋರಿ | ೫೬೫ |
| ೨ | ಆಕಳು, ಕರು | ೬೦೨ |
| ೩ | ಎಮ್ಮೆ, ಕೋಣ | ೧೫೮೪ |
| ೪ | ಕುರಿ | ೮೧೫ |
| ೫ | ಮೇಕೆ | ೨೫೫೬ |

| | | |
|---|---|---|
| ೬ | ಕೋಳಿ | ೭೨೨೬ |
| ೭ | ಹಂದಿ | ೧೮೨೫ |
| ೮ | ಕೌಜುಗ | ೯೫ |
| ೯ | ವನ್ಯಜೀವಿ | ೩೬ |

**ಸಾಕು ಪ್ರಾಣಿಗಳು** : ಎಮ್ಮೆ, ಹಸು, ಆಡು, ಕುರಿ, ನಾಯಿ, ಕೋಳಿ ಮತ್ತೆ ಕೆಲವು ಕಡೆ ಹಂದಿಗಳನ್ನು ಸಾಕುತ್ತಾರೆ. ಸಾಮಾನ್ಯವಾಗಿ ಎಲ್ಲೆಡೆ ಕಂಡು ಬರುವ ಪ್ರಾಣಿಗಳೆಂದರೆ ಎಮ್ಮೆ, ಆಡು, ಕುರಿ ಮತ್ತು ಕೋಳಿ.

**ವೃತ್ತಚಿತ್ರ: ೭.೧ ಚೆನ್ನ ದಾಸರ ಪಶು ಸಂಪತ್ತು (೨೦೦೭)**




**ಸಾಕುವ ವಿಧಾನ** : ಸಮುದಾಯದ ಕೆಲವರಿಗೆ ವಾಸಕ್ಕೆ ಸ್ವಂತ ಸ್ಥಳವಿದ್ದರೆ ಮತ್ತೆ ಕೆಲವರು ಬೇರೊಬ್ಬರ ಅನುಮತಿ ಪಡೆದು ಅವರ ಜಾಗದಲ್ಲಿ ಒಪ್ಪಂದದ ಮೇಲೆ ವಾಸವಾಗಿರುತ್ತಾರೆ. ವಾಸಕ್ಕೆ ಸ್ವಂತ ಸ್ಥಳವಿದ್ದವರು ಮನೆ ಅಥವಾ ಗುಡಿಸಲು ಕಟ್ಟಿಕೊಂಡು, ಅದರ ಮುಂದಿನ ಅಂಗಳದಲ್ಲಿ ತಾವು ಸಾಕುವ ಪ್ರಾಣಿಗಳನ್ನು ಕಟ್ಟಲು ಜಾಗ ಬಿಟ್ಟು ಕೊಂಡಿರುತ್ತಾರೆ. ಅದರಾಚೆ ಒಂದು ತಿಪ್ಪೆಯ ಗುಂಡಿ ತೋಡಿರುತ್ತಾರೆ. ವ್ಯವಸಾಯಕ್ಕೆ ಜಮೀನು ಇದ್ದವರು ತಮ್ಮಲ್ಲಿಯೇ ಕೆಲಸ ಮಾಡಿದರೆ, ಇಲ್ಲದವರು ಗುತ್ತಿಗೆಯ ಆಧಾರದಲ್ಲಿ ಬೇರೆಯವರ ಜಮೀನನ್ನು ಉಳುಮೆ ಮಾಡುತ್ತಾರೆ. ಅದೂ ಇಲ್ಲದವರು ಕೂಲಿಗೆ ಹೋಗುತ್ತಾರೆ. ಸ್ವಂತ ಜಮೀನು ಇದ್ದವರು ಎತ್ತು, ಆಕಳು, ಎಮ್ಮೆ, ಆಡು, ಕುರಿ, ಕೋಳಿ ಸಾಕುತ್ತಾರೆ. ಎತ್ತುಗಳನ್ನು ಉಳುಮೆಗಾಗಿ ಸಾಕಿದ್ದರೆ, ಎಮ್ಮೆ ಹಸುಗಳನ್ನು

ಹೈನು ಮತ್ತು ಮಾರಾಟಕ್ಕಾಗಿ ಸಾಕುತ್ತಾರೆ. ಆಡು, ಕುರಿ ಮತ್ತು ಕೋಳಿಗಳನ್ನು ಮಾರಾಟಕ್ಕಾಗಿಯೇ ಸಾಕುತ್ತಾರೆ. ಎಮ್ಮೆ, ಹಸು, ಆಡು, ಕುರಿ ಇವುಗಳನ್ನು ಕರು ಅಥವಾ ಮರಿಗಳಾಗಿದ್ದಾಗ ಕೊಂಡು ತಂದು ಮೇಯಿಸಿ, ಗರ್ಭ ಧರಿಸಿದ ಮೇಲೆ ಹೆಚ್ಚಿನ ಬೆಲೆಗೆ ಮಾರುತ್ತಾರೆ. ಊಟಕ್ಕೆ, ಚಿಕ್ಕಮಕ್ಕಳಿಗೆ ಕುಡಿಯಲು, ಚಹಾಕ್ಕಾಗಿ ಅವರ ಹಾಲು ಉಪಯೋಗಿಸುತ್ತಾರೆ. ವಿಶೇಷವಾಗಿ ಎರಡು ಮರಿಗಳನ್ನು ಒಟ್ಟಿಗೆ-ಈಯುವ ಆಡನ್ನು ಆಯ್ಕೆ ಮಾಡುತ್ತಾರೆ. ಆಕಸ್ಮಾತ್ ಹೋತು ಮರಿಗಳಾಗಿದ್ದರೆ ಅವನ್ನು ಕಾಳು–ಕಡಿ, ಮುಸುರಿಹಾಕಿ ಕೊಬ್ಬಿಸುತ್ತಾರೆ. ಮುಸ್ಲಿಮ್‌ರ ಹಬ್ಬಗಳು ಬಂದಾಗ ಪೇಟೆಗೆ ಹೋಗಿ ಹೆಚ್ಚಿನ ಬೆಲೆಗೆ ಮಾರುತ್ತಾರೆ. ಈದ್‌ಮಿಲಾದ್ ಮತ್ತು ರಮಜಾನ್ ಹಬ್ಬಗಳಲ್ಲಿ ಹೋತಿನ ಆಕಾರದ ಮೇಲಿಂದ ಕನಿಷ್ಠ ಐದು ಸಾವಿರದಿಂದ ಹಿಡಿದು ಇಪ್ಪತ್ತು ಸಾವಿರದವರೆಗೂ ಮಾರುತ್ತಾರೆ. ಆಡುಗಳನ್ನು ಸಾಕುವುದೂ ಸುಲಭ, ಅವರ ಖರ್ಚುವೆಚ್ಚವೂ ಅಷ್ಟಕ್ಕಷ್ಟೇ, ಹೀಗಾಗಿ 'ಆಡು'ಸಾಕುವುದು ಈ ಸಮುದಾಯದಲ್ಲಿ ಲಾಭದಾಯಕವೆನಿಸಿದೆ. ದನ ಮತ್ತು ಆಡುಗಳ ಸೆಗಣಿ ಹಾಗೂ ಹಿಕ್ಕೆಯಿಂದ ತಿಪ್ಪೆಯ ಗೊಬ್ಬರ ತಯಾರಿಸಿ ತಮ್ಮ ಹೊಲಗಳಿಗೆ ಹಾಗೂ ಮಾರಾಟಕ್ಕೆ ಬಳಸುತ್ತಾರೆ. ತಿಪ್ಪೆಯ ಸಾವಯವ ಗೊಬ್ಬರಕ್ಕೆ ಅಧಿಕ ಬೆಲೆಯಿದೆ. ಹೀಗಾಗಿ ಪ್ರಾಣಿಗಳ ಈ ಗೊಬ್ಬರವೂ ದೊಡ್ಡ ಲಾಭದಾಯಕ ಉಪವೃತ್ತಿಯಾಗಿದೆ.

ಇನ್ನು ಸ್ವಂತ ಜಾಗ ಇಲ್ಲದವರು, ಇದ್ದವರಿಗೆ 'ಇರಲು ಜಾಗ ಕೊಟ್ಟರೆ ನಮ್ಮ ತಿಪ್ಪೆಯ ಗೊಬ್ಬರ ನಿಮಗೇ ಕೊಡುತ್ತೇವೆ' ಎಂದು ಒಪ್ಪಂದ ಮಾಡಿಕೊಂಡು ಎಮ್ಮೆ, ಆಡು ಮತ್ತು ಕೋಳಿಗಳನ್ನು ಸಾಕುತ್ತಾರೆ. ಎಮ್ಮೆ ಮತ್ತು ಆಡುಗಳ ಸಾಕುವ ಮಾರುವ ವಿಧಾನ ಮೇಲಿನಂತೆಯೇ, ಕೋಳಿ ಇವರ ಕಾಮಧೇನು ಇದ್ದಂತೆ. ಮೊಟ್ಟೆಯಿಡುವ ಕೋಳಿಯನ್ನು ಕೊಂಡುತಂದು, ಹತ್ತು ಹದಿನೈದರಿಂದ ಇಪ್ಪತ್ತರವರೆಗೆ ಮೊಟ್ಟೆಗಳನ್ನು ಕಲೆ ಹಾಕಿ, ಹೆಣಿಕೆಯ ಬುಟ್ಟಿಯಲ್ಲಿ ಬತ್ತದ ಹುಲ್ಲನ್ನು ಹಾಸಿ ಮೆತ್ತಗೆ ಮಾಡಿ ಅದರೊಳಗೆ ಆ ಮೊಟ್ಟೆಗಳನ್ನಿಟ್ಟು ಕೋಳಿಯನ್ನು ಕೂಡ್ರಿಸಿ, ಕಾವು ಕೊಟ್ಟು ಮರಿ ಮಾಡಿ, ಸಾಕಿ ಮಾರುತ್ತಾರೆ. ಕೋಳಿಗಳು ಹೆಚ್ಚಿಗಿದ್ದರೆ ಮೊಟ್ಟೆಗಳನ್ನಿಡುತ್ತವೆ. ಅವನ್ನು ನಡುವೆ ಯಾವಾಗ ಬೇಕಾದರೂ ಮಾರಾಟ ಮಾಡಿ ದಿನನಿತ್ಯದ ಖರ್ಚನ್ನು ಸರಿದೂಗಿಸುತ್ತಾರೆ. ಮಕ್ಕಳಿಗೂ–ಮನೆ ಮಂದಿಗೂ ಆಹಾರವನ್ನಾಗಿ ಬಳಸಿಕೊಳ್ಳುತ್ತಾರೆ. ನೆಂಟರಿಷ್ಟರು ಬಂದಾಗ ಕೋಳಿ ಅಥವಾ ಮೊಟ್ಟೆಗಳನ್ನು ಕೊಂಡು ತರುವ ತಾಪತ್ರಯವೇ ಇರುವುದಿಲ್ಲ. ಇನ್ನು ಕೆಲ ಬಡವರು ಎಮ್ಮೆ ಅಥವಾ ಆಡುಗಳನ್ನು ಕೊಂಡು ತಂದು ಸಾಕುವಷ್ಟು ಸ್ಥಿತಿವಂತರಿರುವುದಿಲ್ಲ, ಆಗ ಅವರು ಇದ್ದವರಲ್ಲಿಗೆ ಹೋಗಿ ಸರಿಪಾಲಿನ ಒಪ್ಪಂದದಂತೆ ತಂದು ಜೋಪಾನ ಮಾಡಿ, ಗರ್ಭಧರಿಸಿದ ಮೇಲೆ ಈಯುವ ಸಂದರ್ಭದಲ್ಲಿ ಮಾರಾಟ ಮಾಡಿ ಹಣವನ್ನು ಅರ್ಧ ಅರ್ಧ ಪಾಲು ಮಾಡಿ ಹಂಚಿಕೊಳ್ಳುತ್ತಾರೆ. ಅದೇ ಹಣದಿಂದ ಸ್ವಂತ ಪಶುಗಳನ್ನು ಕೊಂಡು ಸಾಕಿ, ಮಾರಾಟ ಮಾಡುತ್ತ ಆದಾಯ ಮಾಡಿಕೊಳ್ಳುತ್ತಾರೆ. ಇನ್ನು ಕೆಲವರು ಎಮ್ಮೆ ಇಲ್ಲವೆ ಆಡುಗಳನ್ನು ಚಿಕ್ಕವು

ಇರುವಾಗ ಮಾಲೀಕರಿಂದ ಬಳುವಳಿಯಾಗಿ ಪಡೆದು ಎರಡು ಅಥವಾ ಮೂರು ಸೂಲು ಹೈನ ಉಂಡು ಮೂರು ಅಥವಾ ನಾಲ್ಕನೇ ಸೂಲಿಗೆ ಮಾಲೀಕರಿಗೆ ಮರಳಿ ಸುತ್ತಾರೆ. ನಂತರ ತಮ್ಮಲ್ಲಿ ಉಳಿದ ಅದರ ಮರಿಗಳನ್ನು ಸಾಕಿ ಆದಾಯ ಹೆಚ್ಚಿಸಿಕೊಳ್ಳುತ್ತಾರೆ. ಇರಲು ಸ್ವಂತ ಜಾಗ ಇದ್ದವರು ಅವುಗಳ ಗೊಬ್ಬರವನ್ನೂ ಮಾಡಿ, ಮಾರಾಟ ಮಾಡಿ ಆದಾಯ ಮಾಡಿಕೊಳ್ಳುತ್ತಾರೆ.

ಗೊಬ್ಬರ ಮಾಡುವ ವಿಧಾನ : ಮನೆಯ ಅಥವಾ ಗುಡಿಸಿಲಿನ ಅಂಗಳದಲ್ಲಿ ಪಶುಗಳನ್ನು ಕಟ್ಟಿದರೆ ಅವುಗಳನ್ನು ದಾಟಿ ಆಚೆ ಐದು-ಹತ್ತು ಅಡಿಯ ಉದ್ದ-ಅಗಲದ; ಎರಡು, ಮೂರು ಅಡಿಯ ಆಳದ ಗುಂಡಿಯನ್ನು ತೋಡುತ್ತಾರೆ. ದನಗಳ, ಆಡು-ಕುರಿಗಳ, ಸೆಗಣಿ-ಹಿಕ್ಕೆಗಳನ್ನು ಪ್ರತಿ ಮುಂಜಾನೆ ಬಳಿದು ಆ ಗುಂಡಿಯಲ್ಲಿ ಹಾಕುತ್ತಾರೆ. ಜೊತೆಯಲ್ಲಿ ಅವು ತಿಂದು ಉಳಿಸಿದ, ತುಳಿದಾಡಿದ ಮೇವಿನ ಗಲೀಜನ್ನು ಅದರಲ್ಲಿಯೇ ಎತ್ತಿ ಹಾಕುತ್ತಾರೆ. ಮನೆಯ ಒಲೆಯ ಬೂದಿಯನ್ನು ಸುರಿಯುತ್ತಾರೆ. ಸುತ್ತ-ಮುತ್ತಲ ಇತರ ಗಿಡಗಂಟಿಗಳ ತೊಪ್ಪಲನ್ನೂ, ಬೀದಿಯಲ್ಲಿ ಬಿದ್ದಿರುವ ಸೆಗಣಿಯನ್ನೂ ಆಯ್ದು ತಂದು ಹಾಕುತ್ತಾರೆ. ಮಳೆಗಾಲದಲ್ಲಿ ಮಳೆಯ ನೀರು ಬಂದು ಸೇರುವುದರಿಂದ ಅದು ಚೆನ್ನಾಗಿ ಕೊಳೆತು ನಂತರದಲ್ಲಿ ಅದು ಒಳ್ಳೆಯ ಗೊಬ್ಬರವಾಗುತ್ತದೆ. ಒಂದು ಎತ್ತಿನಬಂಡಿಯ ಗೊಬ್ಬರಕ್ಕೆ ಎರಡು ನೂರರಿಂದ ಮೂರು ನೂರರವರೆಗೆ ಬೆಲೆ ಕಟ್ಟುತ್ತಾರೆ. ಈ ತಿಪ್ಪೆಯ ಗೊಬ್ಬರವೂ ಅವರ ಆದಾಯದ ಒಂದು ಮೂಲವೂ ಆಗಿದೆ.

ನಾಯಿ: ಈ ಸಮುದಾಯದಲ್ಲಿ ನಾಯಿ ಸಾಕುವುದು ಸರ್ವೇಸಾಮಾನ್ಯ. ಕೆಲಸಕ್ಕಾಗಿ ಹೊರಗೆ ತಿರುಗುವ ಇವರು ಮನೆಯ ಕಾವಲಿಗಾಗಿ, ಬೇಟೆಗಾಗಿ ನಾಯಿ ಸಾಕುವುದು ವಾಡಿಕೆ. ನಾಯಿ ಇರುವುದರಿಂದ ಗುಡಿಸಿಲಿನ, ಮನೆಯಲ್ಲಿನ ವಸ್ತು-ವಡವೆ, ಕಾಳು-ಕಡಿಗಳು ಕಳುವಾಗುವ ಭಯವಿರುವುದಿಲ್ಲ. ಇನ್ನು ಕೆಲವರು ಉತ್ತಮ ತಳಿಯ ಹೆಣ್ಣು ನಾಯಿಗಳನ್ನು ತಂದು, ಅದಕ್ಕೆ ಉತ್ತಮ ತಳಿಯ ಗಂಡು ನಾಯಿಯಿಂದ ಗರ್ಭಧಾರಣೆ ಮಾಡಿಸಿ ಈದ ಮರಿಗಳನ್ನು ವಿಶೇಷವಾಗಿ ಗಂಡು ಮರಿಗಳನ್ನು ಮಾರುತ್ತಾರೆ. ಉತ್ತಮ ತಳಿಯ ಬೇಟೆಯ ನಾಯಿಗಳಿಗೆ ಬಹಳ ಬೆಲೆ ಇರುವುದರಿಂದ ಈ ರೀತಿಯ ವ್ಯಾಪಾರ ಮಾಡುವ ಜನಗಳು ಈ ಸಮುದಾಯದಲ್ಲಿದ್ದಾರೆ. ಇದೂ ಅಲ್ಲದೆ ಬೆಳಗಾವಿ, ಕೋಲಾರ, ಬಳ್ಳಾರಿ, ದಾವಣಗೆರೆ, ಬಿಜಾಪೂರ ಕಡೆಗೆ ಕೆಲವರು ಹಂದಿ, ಬಾತುಕೋಳಿ, ಕವುಜಗಗಳನ್ನು ಸಾಕಿ ಮಾರಾಟ ಮಾಡುವವರಿದ್ದಾರೆ. ಇದು ಪ್ರಧಾನ ವೃತ್ತಿಯಾಗಿರದೆ ಉಪವೃತ್ತಿಯಾಗಿದೆ.

**ಆಹಾರ ಸಂಗ್ರಹಣೆ**

ಮೊದಲು ಅಲೆಮಾರಿಗಳಾಗಿದ್ದ ಸಂದರ್ಭದಲ್ಲಿ ಭಿಕ್ಷೆ ಬೇಡುತ್ತಿದ್ದಾಗ ಆಹಾರ ಪದಾರ್ಥಗಳ ಸಂಗ್ರಹವೇ ಆಗುತ್ತಿರಲಿಲ್ಲ. ಅಂದಂದಿನ ಗಳಿಕೆ ಅಂದಂದಿಗೆ ಸಾಕಾಗುತ್ತಿತ್ತು. ಹೆಚ್ಚೆಂದರೆ ವಡವೆ-ವಸ್ತ್ರಗಳನ್ನು ಜೋಪಾನವಾಗಿ ಇಟ್ಟುಕೊಳ್ಳುತ್ತಿದ್ದರು. ಅದಕ್ಕೆ ಅರಿವೆಯ

ಗಂಟು ಇಲ್ಲವೆ ಒಂದು ಕಟ್ಟಿಗೆ ಸಂದುಕ (ಪೆಟ್ಟಿಗೆ) ಇರುತ್ತಿತ್ತು. ಅದರಲ್ಲಿಯೇ ಆಹಾರಕ್ಕೆ ಬೇಕಾಗುವ ಹೆಚ್ಚಾಗಿ ಬೇಳೆಯ ಕಾಳು ಮತ್ತು ಪದಾರ್ಥಗಳನ್ನು ಇಟ್ಟಿರುತಿದ್ದರು. ಸ್ಥಿರವಾಗಿ ಮತ್ತು ಅರೆ ಅಲೆಮಾರಿಗಳಾಗಿ ನಿಂತ ಸಂದರ್ಭದಲ್ಲಿ ಸಂಗ್ರಹಕ್ಕೆ ಮಹತ್ವ ನೀಡತೊಡಗಿದರು.

**ಸಂಗ್ರಹ ವಿಧಾನ:** ಅಲೆಮಾರಿಗಳಾಗಿದ್ದ ಸಂದರ್ಭದಲ್ಲಿ ಒಂದೆಡೆ ಕುಟುಂಬ ಸಮೇತ ಗುಡಾರ ಹಾಕಿ, ಹೆಂಗಸರು ಭಿಕ್ಷೆಗೆ ಹೋಗುತ್ತಿದ್ದರೆ ಗಂಡಸರು ಬೇಟೆಗೆ ಹೋಗುತ್ತಿದ್ದರು. ಹೆಂಗಸರು ಕಾಳು-ಕಡಿ, ಹಿಟ್ಟು-ರೊಟ್ಟಿ ಬೇಡಿ ತಂದರೆ, ಗಂಡಸರು ತಮಗೆ ಬೇಟೆಯಲ್ಲಿ ಸಿಗುವ ಮೊಲ, ಮುಂಗುಸಿ, ಉಡ, ಕವುಜಗ, ಪಾರಿವಾಳ ಇತ್ಯಾದಿಗಳನ್ನು ಹಿಡಿದು ತರುತ್ತಿದ್ದರು. ಜೊತೆಯಲ್ಲಿ ಬೇಯಿಸುವ ಕಟ್ಟಿಗೆಯ ಉರುವಲು ತರುತ್ತಿದ್ದರು. ಹೆಂಗಸರು ತಂದ ಕಾಳು-ಹಿಟ್ಟು ಉಳಿದರೆ ಮಡಿಕೆ-ಬಿಂದಿಗೆಗಳಲ್ಲಿ, ಅಲ್ಯುಮಿನಿಯಂ ಬೋಗಾಣಿ ಗಳಲ್ಲಿ ಸಂಗ್ರಹಿಸಿ ಇಡುತ್ತಿದ್ದರು. ಆಹಾರವನ್ನರಸಿ ಅಲೆದಾಡುವ ಜೀವನ ಇವರದಾಗಿ ತ್ತಾದ್ದರಿಂದ ಸಂಗ್ರಹಣಾ ಪದಾರ್ಥಗಳು ಕಡಿಮೆಯಾಗಿರುತ್ತಿದ್ದವು.

ಸ್ಥಿರವಾಗಿ ಮತ್ತು ಅರೆಅಲೆಮಾರಿಗಳಾಗಿ ಪರಿವರ್ತಿತವಾದ ನಂತರ, ಕೆಲವು ಮಣ್ಣಿನ ಗಡಿಗೆ, ಹರವಿ, ಬಿಂದಿಗೆ, ಚಟಗಿ, ಹರಿವಾಣ-ಗಳನ್ನು ಸಂಗ್ರಹಿಸಿ, ಕೆಲವನ್ನು ಕಾಳು-ಕಡಿ ಕೂಡಿಡಲು, ಕೆಲವನ್ನು ಅಡುಗೆ ಮಾಡಲು, ಮತ್ತೆ ಕೆಲವನ್ನು ನೀರಿಗಾಗಿ ಬಳಸಿಕೊಳ್ಳ ತೊಡಗಿದರು. ಕಾಳು-ಕಡಿ ಕೂಡಿಡಲು ಗಡಿಗೆ ಮತ್ತು ಅಡಕಲು ಗಡಿಗೆ ಬಳಸುತ್ತಾರೆ. ಅಡಕಲು ಗಡಿಗೆಯ ತಳ ಮತ್ತು ಬಾಯಿ ಅಗಲವಾಗಿರುತ್ತಿದ್ದವು. ವಾಸಕ್ಕೆ ಸ್ಥಳ ಕಡಿಮೆ ಇರುವುದರಿಂದ ಇವನ್ನು ಒಂದರ ಮೇಲೆ ಒಂದರಂತೆ ಏಳೆಂಟರವರೆಗೆ ತಳದಲ್ಲಿ ದೊಡ್ಡದು ಮೇಲೆ ಮೇಲೆ ಸಣ್ಣ ಗಡಿಗೆಗಳನ್ನು ಇಡುತ್ತಿದ್ದರು. ಅಡುಗೆಗಾಗಿ ಅನ್ನಬೇಯಿಸಲು-ಸಾರು ಮಾಡಲು ಅಗಲಬಾಯಿಯ ಗಡಿಗೆಗಳಿರುತ್ತಿದ್ದವು. ಅವುಗಳ ಬಾಯಿ ಮುಚ್ಚಲು ಹರಿವಾಣ (ಪರ್ಯಾಣ) ಬಳಸುತ್ತಿದ್ದರು. ನೀರು ಸಂಗ್ರಹಿಸಲು ಹರವಿ ಬಳಸಿದರೆ, ನೀರು ತರಲು ಕೊಡ, ಬಿಂದಿಗೆ ಬಳಸುತ್ತಿದ್ದರು. ನೀರು ಕುಡಿಯಲು ಚಟಗಿ (ಕುಡಿಕೆ) ಬಳಸುತ್ತಿದ್ದರು. ಆರ್ಥಿಕ ಅನಾನುಕೂಲ ಇರುವ ಇವರು ಈ ಮಣ್ಣಿನ ಪದಾರ್ಥಗಳನ್ನು ಕುಂಬಾರರಲ್ಲಿ ಅಥವಾ ಶ್ರೀಮಂತರಲ್ಲಿ ಬಳಸಿ ಬಿಟ್ಟಿದ್ದವುಗಳನ್ನು ಕೇಳಿ ಪಡೆದು ತರುತ್ತಿದ್ದರು. ಆದರೆ ಇವರು ಹೆಚ್ಚು ತರುತ್ತಿದ್ದುದು ತಾವಿರುವ ಜಾಗದ ನೆರೆಯ ಜಾತ್ರೆಗಳಲ್ಲಿ. ಯಾತ್ರಿಕರು ಅಡುಗೆ ಮಾಡುವ ಪಾತ್ರೆ-ಪಗಡೆಗಳನ್ನು ಮನೆಯಿಂದ ತರುವ ಬದಲಿಗೆ ಅಡುಗೆಯ ಪದಾರ್ಥಗಳನ್ನು ತಂದು ಅಲ್ಲಿನ ಮಣ್ಣಿನ ಗಡಿಗೆ-ಮಡಿಕೆಗಳನ್ನು ಕೊಂಡು, ಅಡುಗೆ ಮಾಡಿ ಉಂಡು ಬಿಟ್ಟುಹೋಗುತ್ತಿದ್ದರು. ಇವರು ಅವುಗಳನ್ನು ತಮಗೆ ಬೇಕಾದಷ್ಟು ಬೇಗ ಆಯ್ದು ತರುತ್ತಿದ್ದರು. ಅವುಗಳಲ್ಲಿ ಬೇರೆ,ಬೇರೆ ವಿಧಕ್ಕೆ ಬಳಸಿಕೊಳ್ಳುತ್ತಿದ್ದರು.

ಆಹಾರ ಸಂಗ್ರಹಣೆ ಕುರಿತು ಹೇಳುವುದಾದರೆ ಭಿಕ್ಷೆ ಬೇಡಿ ಕಾಳು-ಕಡಿ, ಹಿಟ್ಟು-ನುಚ್ಚು ತರುತ್ತಿದ್ದರು. ಅಲ್ಲದೆ, ರೈತರು ತಾವು ಬಿತ್ತಿದ ಬೆಳೆಗಳನ್ನು ರಾಶಿಮಾಡಿ ಮನೆಗೆ

ತಂದನಂತರ, ರಾಶಿಯ ಕಣಗಳಿಗೆ ಹೋಗಿ, ಅಲ್ಲಿ ಉಳಿದಿರುವ ಕಾಳುಗಳನ್ನು ಆರಿಸಿ ಕೊಂಡು ಮತ್ತು ಹೊಲದಲ್ಲಿ ಬಿದ್ದಿರುವ ಭತ್ತ, ಗೋಧಿ, ಸದುಕಿನ ತೆನೆಗಳನ್ನು, ನೆಲದಲ್ಲಿನ ಶೇಂಗಾ ಕಾಯಿಗಳನ್ನು, ಈರುಳ್ಳಿ-ಬೆಳ್ಳುಳ್ಳಿಗಳನ್ನು ಆಯ್ದು, ಕೆದರಿ ತೆಗೆದುಕೊಂಡು ಬರುತ್ತಿದ್ದರು. ಮತ್ತೆ ಕೆಲವರು ರೈತರು ರಾಶಿ ಮಾಡುವಾಗ ಅವರಿಗೆ ಸುತಳಿ-ದಬ್ಬಣ, ಸೂಜಿ-ದಾರ ಕೊಡುವುದಲ್ಲದೆ ಅವರ ಕೈಕೆಳಗೆ ಕೆಲಸಮಾಡಿ, ದಾನ ಪಡೆದು ತರುತ್ತಿದ್ದರು. ಹೀಗೆ ತಂದವುಗಳನ್ನು ಬೇರೆ,ಬೇರೆ ಗಡಿಗೆಗಳಲ್ಲಿ ಹಾಕಿ ಇಡುತ್ತಿದ್ದರು. ಶನಿವಾರ ದಿನವನ್ನು ಹೊರತುಪಡಿಸಿ (ಅಂದು ಹನುಮಪ್ಪನ ವಾರ ವಾದ್ದರಿಂದ ಮಾಂಸಾಹಾರ ನಿಷೇಧ) ಗಂಡಸರು ಉಳಿದ ದಿನಗಳಲ್ಲಿ ಬೇಟೆಗೆ ಹೋಗಿ ಪ್ರಾಣಿ-ಪಕ್ಷಿಗಳನ್ನು ಇಲ್ಲವೆ ಅಡವಿಯಲ್ಲಿ ಸಿಗುವ ಗೆಡ್ಡೆ ಗೆಣಸುಗಳನ್ನು, ಕಾಡುಹುರಳಿ ಇತರ ಪಲ್ಯ-ಕಾಯಿಗಳನ್ನು ತರುತ್ತಿದ್ದರು. ಇದು ಈ ಸಮುದಾಯದ ದಿನನಿತ್ಯದ ಆಹಾರ ಸಂಗ್ರಹಣೆಯ ದಿನಚರಿ. ಗೋಪಾಳ ಬುಟ್ಟಿ ದಾಸರಿಗೆ ವಿಶೇಷವಾಗಿ ರೈತರು ತಾವು ರಾಶಿ ಮಾಡುವಂಥ ಸಂದರ್ಭದಲ್ಲಿ ದವಸ-ಧಾನ್ಯ ತೆಗೆದಿಡುತ್ತಿದ್ದರು. ಇಲ್ಲವೆ ಅವರು ರಾಶಿ ಮಾಡುವಾಗ ಉಪಸ್ಥಿತರಿದ್ದರೆ ಅವರ ಗೋಪಾಳ ಬುಟ್ಟಿಗೆ ಕಾಳು ಹಾಕಿ ಕಳುಹಿಸಿಕೊಡುತ್ತಿದ್ದರು. ಅದೇ ರೀತಿ ತಂಬೂರಿ ದಾಸರೂ ಹಾಡಿ-ಬೇಡಿ ತರುತ್ತಿದ್ದರು.

**ಸಂರಕ್ಷಣ ವಿಧಾನ:** ಆಹಾರ ಸಂಗ್ರಹಣೆಯಷ್ಟೇ ಸಂರಕ್ಷಣೆಯೂ ಅಗತ್ಯವಾದುದಾಗಿದೆ. ಸುರಕ್ಷಿತ ಮನೆ, ಅಗತ್ಯವಾದ ಸಲಕರಣೆಗಳು ಇಲ್ಲದ ಇವರಿಗೆ ತಮ್ಮದೇ ರೀತಿಯಲ್ಲಿ ಆಹಾರ ಪದಾರ್ಥಗಳನ್ನು ಸಂರಕ್ಷಿಸಿಡುವ ಕೆಲವು ವಿಧಾನಗಳಿವೆ.

ಭತ್ತ, ಗೋಧಿ ಮತ್ತು ಸದುಕನ್ನು ಕುಟ್ಟಿ ಅಕ್ಕಿ ತೆಗೆಯದೇ ಕಾಳುಗಳ ಸಹಿತ ಹಾಗೇ ಗಡಿಗೆ, ಬಿಸ್ಕೀಟ್‌ಡಬ್ಬಿ ಇಲ್ಲವೆ ಗೋಣಿಚೀಲಗಳಲ್ಲಿ ಹಾಕಿ ಇಡುತ್ತಿದ್ದರು. ಕುಟ್ಟಿ ಕಾಳು ಮಾಡಿ ಇಟ್ಟರೆ ಅವು ನುಸಿ ಇಲ್ಲವೆ ಬಾಲಹುಳ ತಿಂದು ಹಾಳಾಗುತ್ತಿದ್ದವು. ಅದಕ್ಕಾಗಿ ಕುಟ್ಟದೇ ಇಡುತ್ತಿದ್ದರು. ತಮಗೆ ಬೇಕೆನಿಸಿದಾಗ ಅಗತ್ಯವಾದಷ್ಟನ್ನು ಮಾತ್ರ ಕುಟ್ಟಿ ಅಕ್ಕಿ ಮಾಡಿ ಬಳಸುತ್ತಿದ್ದರು.

ಜೋಳ, ಗೋನೆಜೋಳ, ರಾಗಿ ಮತ್ತು ನವಣಿಯ ಕಾಳುಗಳನ್ನು ಅಡಕಲು ಗಡಿಗೆ ಗಳಲ್ಲಿ ಹಾಕಿ ಅವುಗಳಲ್ಲಿ ಒಣಗಿದ ಬೇವಿನ ಎಲೆಗಳನ್ನು ಬೆರಸಿ ಇಡುತ್ತಿದ್ದರು. ಹೀಗೆ ಮಾಡುವುದರಿಂದ ನುಸಿ ಹತ್ತುವುದಿಲ್ಲ.

ಗೋಧಿಯ ಅಥವಾ ಸದುಕಿನ ಹಿಟ್ಟು ಹೆಚ್ಚಿಗೆ ಉಳಿದರೆ ಹಾಗೆಯೇ ಇಟ್ಟರೆ ಕೆಡುತ್ತದೆಂದು ಶಾವಿಗೆ ಮಾಡಿ ಒಣಗಿಸಿ, ತೆಳುವಾದ ಅರಿವೆಯಲಿ ಗಾಳಿ ಆಡುವಂತೆ ಗಂಟು ಕಟ್ಟಿ ಗುಡಿಸಲು ಇಲ್ಲವೆ ಮನೆಯ ಒಳಗಡೆ ತೂಗು ಹಾಕುವರು. ಬೇಕೆನಿಸಿದಾಗ ಅಗತ್ಯವಿದ್ದಷ್ಟನ್ನು ಕುದಿಯುವ ನೀರಿಗೆ ಹಾಕಿ ಬಸಿದು, ಬೆಲ್ಲದೊಂದಿಗೆ ಬೆರಸಿ ತಿನ್ನುತ್ತಾರೆ.

ಪಲ್ಯ ಮತ್ತು ಸಾರನ್ನು ಪದೇ ಪದೇ ಮಾಡುವುದರ ಬದಲಿಗೆ, ಹರಿದು ತಂದ ಪುಂಡಿಯ ಪಲ್ಯವನ್ನು ಕುದಿವ ನೀರಿಗೆ ಹಾಕಿ ಕುದಿಸಿ, ನೀರು ಚೆಲ್ಲಿ ಪಲ್ಯವನ್ನು

ಹಿಂಡಿ ಮತ್ತೇ ಆ ಗಡಿಗೆಯಲ್ಲಿ ನೀರನ್ನು ಹೆಸರಿಟ್ಟು ಕುದಿವ ನೀರಿಗೆ ಜೋಳ ಇಲ್ಲವೆ ಗೊನೆಜೋಳ(ಮೆಕ್ಕೆ)ದ ನುಚ್ಚನ್ನು ಹಾಕಿ, ಅದರೊಂದಿಗೆ ಹಿಂಡಿ ಇಟ್ಟಿರುವ ಮುಂಡಿಯ ಪಲ್ಯವನ್ನು ಹಾಕಿ ತಿರುವಿ ಗಟ್ಟಿಮಾಡಿ ತೆಗೆದು ಇಡುತ್ತಾರೆ. ಕೆಲವು ಸಲ ಅದಕ್ಕೆ ಎಣ್ಣೆಯಲ್ಲಿ ಹಾಕಿ ಹುರಿದ ಹಸಿ ಮೆಣಸಿನ ಚಟ್ನಿಯನ್ನು ಮಿಶ್ರಣ ಮಾಡಿ ಕುಡಿಕೆ ಅಥವಾ ಹರಿವಾಣದಲ್ಲಿ ತೆಗೆದಿಡುತ್ತಾರೆ. ಇದನ್ನು ಒಂದುವಾರದಿಂದ ಎರಡು ವಾರಗಳವರೆಗೆ ಕೆಡದಂತೆ ಇಡಬಹುದು. ಬಿಸಿ ಇಲ್ಲವೆ ಯಾವುದೇ ತಂಗುಳರೊಟ್ಟಿಯ ಜೊತೆಗೆ ಯಾವಾಗಬೇಕೋ ಆಗ ಹಚ್ಚಿಕೊಂಡು ತಿನ್ನಬಹುದು.

ಮದುವೆ ಮತ್ತು ಜಾತ್ರೆಗಳಲ್ಲಿ ಉತ್ತರ ಕರ್ನಾಟಕ ಭಾಗದಲ್ಲಿ ಹುಗ್ಗಿ ಮಾಡುವುದು ಸರ್ವೇಸಾಮಾನ್ಯ. ಅಲ್ಲಿ ಈ ಸಮುದಾಯದವರು ಮುದುಕರು ಮಕ್ಕಳೆನ್ನದೇ ಎಲ್ಲರೂ ಪಾತ್ರೆ, ಬೋಗಾಣಿಗಳನ್ನು ತೆಗೆದುಕೊಂಡು ಊಟಕ್ಕೆ ಹೋಗುತ್ತಿದ್ದರು. ಈ ರೀತಿಯ ಸಮುದಾಯದವರೆಗೆ ಪ್ರತ್ಯೇಕ ಪಂಕ್ತಿಯನ್ನು ಕಡೆಯಲ್ಲಿ ವ್ಯವಸ್ಥೆ ಮಾಡಿರುತ್ತಾರೆ. ಆಗ ತಾಟುಗಳನ್ನು ತಮ್ಮ ಮುಂದೆ ಇಟ್ಟು, (ಒಬ್ಬೊಬ್ಬರು ಎರಡೆರಡು ತಾಟುಗಳನ್ನು ತಮ್ಮ ಮುಂದೆ ಇಟ್ಟುಕೊಂಡಿತ್ತಾರೆ.) ಹಾಕಿದ ಹುಗ್ಗಿಯನ್ನು ತಮ್ಮ ಹಿಂದೆ ಮರೆಯಲ್ಲಿ ಇಟ್ಟುಕೊಂಡ ಬೋಗಾಣಿಗೆ ಸುರಿದುಕೊಂಡೋ, ಬೇಡಿ ಹಾಕಿಸಿಕೊಂಡೋ ತರುತ್ತಾರೆ. ಇಲ್ಲವೆ ಮರುದಿನ ಅಲ್ಲಿಗೆ ಹೋಗಿ ಅವರ ಅಲ್ಲಿನ ಪಾತ್ರೆಗಳನ್ನೆಲ್ಲಾ ತೊಳೆದು ಕೊಟ್ಟು ಉಳಿದಿರುವ ತಂಗುಳ ಹುಗ್ಗಿಯನ್ನೆಲ್ಲಾ ಬೇಡಿ ಹಾಕಿಸಿಕೊಂಡು ತರುತ್ತಾರೆ. ಹೀಗೆ ತಂದ ಹುಗ್ಗಿಯನ್ನು ತಮಗೆ ಅಂದಿಗೆ ಎಷ್ಟುಬೇಕೊ ಅಷ್ಟನ್ನು ತೆಗೆದಿಟ್ಟುಕೊಂಡು ಉಳಿದದ್ದನ್ನು ಒಂದು ಹಸನಾದ ದೋತರ ಇಲ್ಲವೆ ಸೀರೆಯನ್ನು ಕುಡಿಯುವ ನೀರಿನಲ್ಲಿ ತೋಯಿಸಿ ಕಲ್ಲು ಇಲ್ಲವೆ ಗುಡಿಸಿಲಿನ ಮೇಲೆ ಹಾಸಿ, ಅದರ ಮೇಲೆ ಒಂದೊಂದು ತುತ್ತಿನಷ್ಟು ಹುಗ್ಗಿಯನ್ನು ಆ ಬಟ್ಟೆಯ ತುಂಬ ಸಾಲಾಗಿ ಹಾಕುತ್ತಾರೆ. ಒಂದೆರಡು ಮೂರು ದಿನಗಳವರಗೆ ಹಾಗೇ ಒಣಗಿಸಿ, ಬಟ್ಟೆಯಿಂದ ಬಿಡಿಸಿ, ಸ್ವಚ್ಛವಾದ ಬಟ್ಟೆಯಲ್ಲಿ ಗಂಟು ಕಟ್ಟಿ ಗಾಳಿಯಾಡುವ ಜಾಗಕ್ಕೆ ಗುಡಸಿಲಿನ ಒಳಗಡೆ ತೂಗುಹಾಕುತ್ತಾರೆ. ಅದನ್ನು ಮಳೆಗಾಲದಲ್ಲಿ ಇಲ್ಲವೆ ತಿನ್ನಬೇಕೆನಿಸಿದಾಗ ನೀರಿಗೆ ಹೆಸರಿಟ್ಟು ಕುದಿಯುವಾಗ ತಮಗೆ ಎಷ್ಟು ಬೇಕೊ ಅಷ್ಟನ್ನು ಹಾಕಿ, ಮತ್ತೊಂದಿಷ್ಟು ಬೆಲ್ಲವನ್ನು ಸೇರಿಸಿ ಊಟ ಮಾಡುತ್ತಾರೆ. ಇದಕ್ಕೆ ಹುಗ್ಗಿಯ ಶಾಂಡಿಗೆ ಎನ್ನುತ್ತಾರೆ. ಐದಾರು ತಿಂಗಳವರೆಗೂ ಇದನ್ನು ಸಂರಕ್ಷಿಸಿ ಇಡುತ್ತಾರೆ.

ಈ ಸಮುದಾಯದವರು ವರ್ಷಕೊಮ್ಮೆ ಮತ್ತು ಮೂರು ವರುಷಕೊಮ್ಮೆ ತಮ್ಮ ಮನೆ ದೇವರುಗಳಾದ ದುರುಗಮ್ಮ, ಮರುಗಮ್ಮ, ಹುಲಿಗೆಮ್ಮ, ಉದ್ದಮ್ಮ, ತಾಯಮ್ಮ, ದೇವತೆಗಳಿಗೆ ಮೇಕೆ(ಹೋತು)ಗಳನ್ನು ಬಲಿಕೊಡುವ ದೊಡ್ಡ ಜಾತ್ರೆ ಮಾಡುತ್ತಾರೆ. ಒಂದೊಂದು ಮನೆಯವರು ಎರಡು ಮೂರು ಬೇಟೆಗಳನ್ನು ಬಲಿಕೊಡುತ್ತಾರೆ. ಆ ಸಂದರ್ಭದಲ್ಲಿ ಉಳಿದ ಮಾಂಸವನ್ನು ಚಿಕ್ಕಚಿಕ್ಕ ತುಂಡುಗಳನ್ನಾಗಿ ಮಾಡಿ ಅದರ ಚರ್ಬಿ(ಸೊಕ್ಕು ಅಥವಾ ನೆಣ)ಯಲ್ಲಿ ಕುದಿಸುತ್ತಾರೆ. ನೀರು ಹಾಕದೆ ಕುದಿಸಿ ಅದರಲ್ಲಿರುವ

ನೀರಿನ ಅಂಶ ಹೊರಬರುವಂತೆ ಮಾಡಿ, ಆ ಮಾಂಸದ ತುಂಡುಗಳನ್ನು ಗಾಳಿಯಲ್ಲಿ ಒಣಗಿಸಿ ತೆಳುವಾದ ಬಟ್ಟೆಯಲ್ಲಿ ಹಾಕಿ ಗಂಟುಕಟ್ಟಿ ಗಾಳಿಯಾಡುವ ಜಾಗದಲ್ಲಿ ತೂಗು ಹಾಕುತ್ತಾರೆ. ತಮಗೆ ಬೇಕೆನಿಸಿದಾಗ ಬೇಕಾದಷ್ಟನ್ನು ಕುದಿಯುವ ನೀರಿನಲ್ಲಿ ಕುದಿಸಿ ಒಗ್ಗರಣೆ ಹಾಕಿ ಅಡುಗೆ ಮಾಡಿಕೊಳ್ಳುತ್ತಾರೆ. ಹೆಚ್ಚಾಗಿ ಮಳೆಗಾಲದಲ್ಲಿ ಉಪಯೋಗಿಸುತ್ತಾರೆ. ಇದನ್ನು ಕೂಡ ಎರಡು ಮೂರು ತಿಂಗಳದವರೆಗೆ ಸಂರಕ್ಷಿಸಿ ಇಡುತ್ತಾರೆ.

ಅದೇ ರೀತಿ ಹೀಗೆ ಮಾಂಸದಿಂದ ಬೇರ್ಪಡಿಸಿ ತೆಗೆದ ಎಣ್ಣೆ(ತುಪ್ಪ)ಯನ್ನು ಒಂದು ಕುಡಿಗೆ ಇಲ್ಲವೆ ಅಲ್ಯುಮಿನಿಯಂ ಬೋಗಾಣಿಯಲ್ಲಿ ಸಂಗ್ರಹಿಸಿ ಇಡುತ್ತಾರೆ. ಅದು ತುಪ್ಪದಂತಿರುತ್ತದೆ. ತಣ್ಣಗಾದ ಬಳಿಕ ಡಾಲಡಾದಂತೆ ಬೆಳ್ಳಗೆ ಗಟ್ಟಿಯಾಗಿರುತ್ತದೆ. ಇದನ್ನು ಆಡಿನ ತುಪ್ಪ ಎಂದು ಕರೆಯುವರು. ಇದನ್ನು ಪಲ್ಯ ಅಥವಾ ಸಾರಿಗೆ ಎಣ್ಣೆಯ ಬದಲಿಗೆ ಒಗ್ಗರಣೆ ಹಾಕಲು ಬಳಸುತ್ತಾರೆ. ಬಿಸಿರೊಟ್ಟಿ ಅಥವಾ ಚಪಾತಿಯೊಂದಿಗೆ ತುಪ್ಪದಂತೆ ಕಾರ ಅಥವಾ ಸಕ್ಕರೆ ಬೆರಸಿ ತಿನ್ನುತ್ತಾರೆ. ಇದನ್ನು ಕೂಡ ಎರಡು, ಮೂರು ತಿಂಗಳವರೆಗೆ ಸಂರಕ್ಷಿಸಿಡುತ್ತಾರೆ.

ಇವರಲ್ಲಿ ಇನ್ನೊಂದು ತೆರನಾದ ಸಂಗ್ರಹಣೆಯ ವಿಧಾನವಿದೆ. ಇದು ಸಂಗ್ರಹಣೆ ಅಲ್ಲದಿದ್ದರೂ ಸಂರಕ್ಷಣೆಯ ವಿಧಾನವಾಗಿದೆ. ತಮ್ಮಲ್ಲಿರುವ ಕಾಳು-ಕಡಿ, ಹಿಟ್ಟು-ನುಚ್ಚು ಇತ್ಯಾದಿಗಳನ್ನು ತಮ್ಮ ನೆರೆಯವರು ಬೇಡಿದಾಗ ಕೊಡುವುದು, ಮುಂದೆ ತಮಗೆ ಬೇಕಾದಾಗ ಪಡೆಯುವುದು. ಈ ರೀತಿ ಒಂದು, ಮೂರು, ಇಲ್ಲವೆ ಆರು ತಿಂಗಳಾದರು ನಡೆಯುತ್ತದೆ. ಅದಲ್ಲದೆ ತಮಗೆ ಜೋಳದ ಹಿಟ್ಟುಬೇಕೆನಿಸಿದರೆ, ಅದರಷ್ಟು ಬೇರೆ ಹಿಟ್ಟನ್ನು ಅವರಿಗೆ ಕೊಟ್ಟು ಪಡೆಯುವುದು. ಅಲ್ಲದೇ ತಮ್ಮಲಿಲ್ಲದ ಬೇಳೆ ಬೇಕಾದರೆ ತಮ್ಮಲ್ಲಿರುವ ಬೇಳೆಯನ್ನು ಕೊಟ್ಟು ಅದನ್ನು ಪಡೆಯುವುದು. ಇದೇ ರೀತಿ ಅಕ್ಕಿ, ಬೇಳೆಕಾಳುಗಳನ್ನು ಕೊಟ್ಟು ಪಡೆಯುತ್ತಾರೆ. ತಮ್ಮಲ್ಲಿರುವುದನ್ನು ಎಲ್ಲರೂ ಹಂಚಿಕೊಂಡು ತಿಂದಂತೆ ಆಗುತ್ತದೆ.

**ಕೋಷ್ಟಕ: ೬.೨ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಆರ್ಥಿಕ ಸ್ಥಾನಮಾನ (೨೦೦೬)**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೧೦೯೪೬ | ೧೦೧೦೬ | ೨೧೦೫೨ |
| ಆಶ್ರಿತ ಗುಂಪು | ೪೮೯೫ | ೪೩೫೯ | ೯೨೫೪ |
| (-೧೬ ಮತ್ತು ೬೦+ ವಯೋ ಗುಂಪಿನವರು) | | | |
| ಕಾಯಕರ್ತ ಗುಂಪು | ೬೦೫೧ | ೫೭೪೭ | ೧೧೭೯೮ |
| ಕೆಲಸಗಾರರು | ೫೬೨೦ | ೩೬೯೦ | ೯೩೦೦ |

| | | | |
|---|---|---|---|
| ಕೃಷಿ | ೨೬೯ | ೭೧ | ೩೪೦ |
| ಕೃಷಿ ಕಾರ್ಮಿಕ | ೫೯ | ೩೬ | ೯೫ |
| ಸರ್ಕಾರಿ ಸೇವೆ | ೨೫ | ೫ | ೩೦ |
| ಮೀನುಗಾರರು | ೫೩೦ | ೪೦೬ | ೯೩೬ |
| ವ್ಯಾಪಾರ | ೧೨ | ೨ | ೧೪ |
| ಧಾರ್ಮಿಕ ಭಿಕ್ಷಾಟನೆ | ೩೮ | ೪೨ | ೮೦ |
| ಇತರೆ | ೪೬೮೭ | ೩೧೨೮ | ೭೮೧೫ |
| ನಿರುದ್ಯೋಗಿಗಳು | ೪೩೧ | ೨೦೫೭ | ೨೪೯೮ |

ಇವರಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರೇ ಹೆಚ್ಚಿರುವರು. ಹೀಗಾಗಿ ತಮ್ಮ ಕೃಷಿ ಪದ್ಧತಿಯಲ್ಲಿ ಅಭಿವೃದ್ಧಿ ಕಾಣಲು ಸಾಧ್ಯವಾಗುವುದಿಲ್ಲ. ಜೊತೆಗೆ ನೀರಾವರಿ ಸೌಲಭ್ಯವನ್ನ ಕಲ್ಪಿಸಲು ಸಾಧ್ಯವಿಲ್ಲ. ಇದಲ್ಲದೆ ತಾಂತ್ರಿಕ ಕಾರಣ ನೀಡಿ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಸಾಲ ನೀಡುವುದಿಲ್ಲ. ಇತ್ತೀಚೆಗೆ ವರುಣನ ಅವಕೃಪೆಯಿಂದಾಗಿ ಕೃಷಿಯಲ್ಲಿ ಉತ್ಪಾದನೆ ಸ್ಥಗಿತವಾಗುತ್ತಿದೆ. ಇವರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೪೩.೯೫ರಷ್ಟು ಆಶ್ರಿತರು, ೫೬.೦೪ರಷ್ಟು ಕಾಯಕರ್ತರಿರುವರು. ಕಾಯಕರ್ತರಲ್ಲಿ ೨೧.೧೭ ರಷ್ಟು ಜನ ನಿರುದ್ಯೋಗಿಗಳಿರುವರು. ಉದ್ಯೋಗಸ್ಥರಲ್ಲಿ ಶೇಕಡ ೮೪.೦೩ರಷ್ಟು ವಿವಿಧ ಉದ್ಯೋಗಗಳಲ್ಲಿ ಉಳಿದವರು ಕೃಷಿ, ಕೃಷಿಕೂಲಿ, ಮೀನುಗಾರಿಕೆ, ಧಾರ್ಮಿಕ ಭಿಕ್ಷಾಟನೆ, ಸಣ್ಣಪುಟ್ಟ ವ್ಯಾಪಾರ ಇತ್ಯಾದಿ ಅನಿಶ್ಚಿತ ಕಾಯಕಗಳಲ್ಲಿ ತೊಡಗಿರುವರು(ಕೋಷ್ಟಕ: ೭.೨).

**ವೃತ್ತಚಿತ್ರ: ೭.೨ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಕಸುಬುಗಳ ಶೇಕಡವಾರು (೨೦೦೭)**



## ಇತರ ಕಸುಬುಗಳು

ಈ ಮೊದಲು ತಿಳಿಸಿದಂತೆ ಮೂಲ ಕಸುಬುಗಳ ಜೊತೆಗೆ ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳಲು ಹಾಗೂ ಮೂಲ ಕಸುಬು ಉಪಜೀವನಕ್ಕೆ ಭದ್ರತೆ ಒದಗಿಸದ ಸಂದರ್ಭ ದಲ್ಲಿ ಇನ್ನಿತರ ಕಸುಬುಗಳನ್ನು ಹುಡುಕಿಕೊಂಡಿರುವುದಿದೆ. ಅವುಗಳಲ್ಲಿ ಕೆಲವನ್ನು ಹೆಸರಿಸಲಾಗಿದೆ.

**ಕೌದಿ ಹೊಲೆಯುವುದು:** ಇದ್ದುಳ್ಳುವರು ಬಳಸಿ ಬೀಸಾಕಿದ ಇನ್ನೂ ಗಟ್ಟಿಯಾಗಿರುವ ಬಟ್ಟೆಗಳೆಲ್ಲವನ್ನು ಈ ಸಮುದಾಯದ ಕೌದಿ ಹೊಲಿಯುವವರಿಗೆ ಗಂಟು ಮೂಟೆಕಟ್ಟಿ ಕೊಡುತ್ತಾರೆ. ಅವುಗಳನ್ನು ನೀರಿನಲ್ಲಿ ತೊಳೆದು ಒಣಗಿಸಿ ಕೌದಿಯನ್ನು ಹೊಲಿದು ಕೊಟ್ಟು ಅವರಿಂದ ಕಾಳು-ಕಡಿ ಇಲ್ಲವೆ ನೂರರಿಂದ ನೂರೈವತ್ತು ರೂಪಾಯಿಗಳನ್ನು ಕೌದಿಯೊಂದಕ್ಕೆ ಪಡೆಯುತ್ತಾರೆ. ಅಲ್ಲದೆ ಅವರ ಹಬ್ಬ-ಜಾತ್ರೆ, ಮದುವೆಗಳ ಸಂದರ್ಭದಲ್ಲಿ ಹೋಗಿ ಸಿಹಿ ಅಡುಗೆ- ಇತ್ಯಾದಿಗಳನ್ನು ತರುತ್ತಾರೆ.

**ಕೌದಿ ಹೊಲೆಯುವ ರೀತಿ:** ಐದು-ಮೂರು ಇಲ್ಲವೆ ಹತ್ತು-ಐದು ಅಡಿಗಳ ಉದ್ದ-ಅಗಲದ ಅಳತೆಯಲ್ಲಿ ಮೊದಲು ಲ್ಯಾವಿ ಅಥವಾ ಗುಡಾರನ್ನು ಸಿದ್ಧಮಾಡಿಕೊಳ್ಳುತ್ತಾರೆ. ಲ್ಯಾವಿ ಎಂದರೆ, ಈ ಮೇಲಿನ ಅಳತೆಯಾಕಾರದಲ್ಲಿ ಗಟ್ಟಿಯಿರುವ ದೋತರ ಅಥವಾ ಸೀರೆಯನ್ನು ಒಂದು ಪದರಿನಂತೆ ಸ್ವಚ್ಛ ಜಾಗದಲ್ಲಿ ಹಾಸುತ್ತಾರೆ. ಅದರ ಮೇಲೆ ಮತ್ತೊಂದು ಪದರು ಅಗಲವಾದ ದೊಡ್ಡ ಬಟ್ಟೆಯ ತುಂಡುಗಳನ್ನು ಹಾಕಿ ದೊಡ್ಡ ಸೂಜಿಗಳಿಂದ ತಾವು ಕೊಂಡುತಂದ ದಾರದ ಉಂಡೆಯಿಂದ ದೊಡ್ಡ ಎಳೆಗಳನ್ನು ದೂರ ದೂರ ಅಂತರದಲ್ಲಿ ಚೌಕಾಕಾರದಲ್ಲಿ ಕೆಳಗಿನ ಪದರಿಗೂ ಮೇಲಿನ ಪದರಿನ ಅರಿವೆಯ ತುಂಡುಗಳಿಗೂ ಜೊತೆಯಾಗುವಂತೆ ಹೊಲಿದು ಲ್ಯಾವಿ ತಯಾರಿಸುತ್ತಾರೆ. ತದನಂತರ ಅದನ್ನು ಬಿಸಿಲಿಗೆ ಹಾಕಿ ಚೆನ್ನಾಗಿ ಒಣಗಿಸುತ್ತಾರೆ. ಬಳಿಕ ಸೀರೆಯ ಅಂದ ವಾದ ದಡಿಗಳನ್ನು ಹರಿದು ಇಲ್ಲವೆ ಕತ್ತರಿಸಿ ಲ್ಯಾವಿಯ ದಂಡೆಗೆ ಮಡಚಿ ಸುತ್ತಲೂ ಸಣ್ಣ ಸಣ್ಣ ಹೊಲಿಗೆ ಹಾಕಿ ಹೊಲಿಯುತ್ತಾರೆ. ಅದು ಮುಗಿದ ನಂತರ ಬಣ್ಣ ಬಣ್ಣದ ಬಟ್ಟೆಗಳನ್ನು ಸುತ್ತಲೂ ಮಡಚಿ ಹಾಕಿರುವ ದಡಿಯ ಚಿತ್ರವನ್ನು ಬಿಟ್ಟು ಒಳಭಾಗಕ್ಕೆ ಒಂದೇ ಮೈಯಿಗೆ ಇಟ್ಟು ಹೊಲಿಯುತ್ತ ಒಳಭಾಗದವರೆಗೆ ತರುತ್ತಾರೆ. ಈ ನಡುವೆ ಅವರಿಂದ ತಂದ ಬೇರೆ-ಬೇರೆ ಬಣ್ಣದ ಬಟ್ಟೆಗಳ ತುಂಡುಗಳನ್ನಿಟ್ಟು ಚಿಕ್ಕ-ಚಿಕ್ಕ ಹೊಲಿಗೆಗಳನ್ನಾಕುತ್ತ ನಟ್ಟನಡುವೆ ಒಂದು ಚೌಕಾಕಾರದ ಸುಂದರ ಬಣ್ಣದ ಒಪ್ಪುವ ಬಟ್ಟೆಯನ್ನಿಟ್ಟು ಹೊಲಿಗೆ ಹಾಕಿ ಕೌದಿಯನ್ನು ತಯಾರಿಸುತ್ತಾರೆ. ಈಗ ಕೌದಿ ಚಿತ್ತಾಕರ್ಷಕ ವಾಗಿ ಕಾಣಿಸುತ್ತದೆ. ಇದು ಸುಮಾರು ಆರೇಳು ವರ್ಷಗಳವರೆಗೆ ಗಟ್ಟಿಮುಟ್ಟಾಗಿರುತ್ತದೆ. ನೋಡಲು ತುಂಬಾ ಸುಂದರವಾಗಿ ಕಾಣುವ ಈ ಕೌದಿಗಳನ್ನು ಹೊಲಿಯುವ ಈ ಸಮುದಾಯದವರೆಗೆ ಕೌದಿಯ ದಾಸರೆಂತಲೂ ಕರೆಯುತ್ತಾರೆ. ಇತ್ತಿತ್ತಲಾಗಿ ಕೌದಿಗಳನ್ನು ಹೊಲಿದು ಕೊಡಲು ಒಬ್ಬರು ಗುತ್ತಿಗೆ ಹಿಡಿದು ಅವರಿಂದ ಬಟ್ಟೆಗಳನ್ನು ಪಡೆದು ಬೇರೆ ಬೇರೆಯವರಿಗೆ ತಾವು ಮಾಡಿಕೊಂಡಿರುವ ದರದ(ರೇಟು)ಮೇಲೆ ಹೊಲಿದು ಕೊಡಲು

ಹೇಳುತ್ತಾರೆ. ಒಬ್ಬರು ಎರಡು ಅಥವಾ ಮೂರು ದಿನಕ್ಕೆ ಒಂದು ಕೌದಿಯನ್ನು ತಯಾರಿಸಿ ಕೊಡುತ್ತಾರೆ. ಈಗ ಕೌದಿಯೊಂದಕ್ಕೆ ಹೊಲಿದು ಕೊಡಲು ನೂರಾ ಐವತ್ತರಿಂದ ಎರಡು ನೂರು ರೂಪಾಯಿ ದರವಿದೆ. ಬೆಳಗಾವಿ, ಬಾಗಲಕೋಟೆ, ವಿಜಾಪೂರ ಜಿಲ್ಲೆಗಳಲ್ಲಿನ ಈ ಸಮುದಾಯದ ಕೆಲವರು ಇದನ್ನೊಂದು ವೃತ್ತಿ ಕಸುಬನ್ನಾಗಿ ಪರಿಗಣಿಸಿದ್ದಾರೆ.

ಈ ಸಮುದಾಯದ ಇನ್ನಿತರ ಕಸುಬುಗಳೆಂದರೆ, ದನಗಳ ಸಂತೆಯಲ್ಲಿ ಅಥವಾ ವ್ಯಾಪಾರದಲ್ಲಿ ದಲ್ಲಾಳಿಗಳಾಗಿ ಕಾರ್ಯನಿರ್ವಹಿಸುತ್ತಾರೆ. ಒಂದು ಎಮ್ಮೆ, ಎತ್ತು, ಹೋರಿಗೆ ಮಾರಾಟ ಮಾಡಲು ನೂರರಿಂದ ಎರಡುಸಾವಿರದವರೆಗೆ ಕಮೀಶನ್ ಪಡೆಯುತ್ತಾರೆ. ಇನ್ನು ಕೆಲವರು ಭಟ್ಟಿ ಸರಾಯಿ ತಯಾರಿಸುವ ದಂಧೆಯಲ್ಲಿ ತೊಡಗಿದವರೂ ಇದ್ದಾರೆ. ಕಬ್ಬಿನ ಗಾಣಗಳು ಹೆಚ್ಚಿಗಿರುವ ಕಡೆಗೆ ಈ ದಂಧೆ ನಡೆಯುತ್ತದೆ. ಇನ್ನೂ ಕೆಲವು ಕಡೆ ಕಬ್ಬನ್ನು ಫ್ಯಾಕ್ಟರಿಗೆ ಇಲ್ಲವೆ ಗಾಣಕ್ಕಾಗಿ ಕಟಾವು ಮಾಡುವ ತಂಡಗಳಾಗಿ(ಗ್ಯಾಂಗ್) ಹಾಗೂ ಬೇರೆ ಬೇರೆ ಜಿಲ್ಲೆಗಳಲ್ಲಿ ನಿಶ್ಚಿತ ಕೆಲಸಗಳನ್ನು ಗೊತ್ತುಮಾಡಿ ಕೂಲಿಯವರನ್ನು ಪೂರೈಸುವ ಕೂಲಿ ತಂಡಗಳಾಗಿಯೂ ದುಡಿಯುತ್ತಾರೆ. ಇಂಥವರು ತಮ್ಮ ಊರು, ಜಿಲ್ಲೆಬಿಟ್ಟು ಹೊರಗಡೆಗೆ ತಂಡ ತಂಡವಾಗಿ ಹೋಗಿ ದುಡಿಯುತ್ತಾರೆ. ತಮ್ಮೂರಿನ ಜಾತ್ರೆ, ಮದುವೆ, ಹಬ್ಬಗಳಿಗೆ ಮರಳಿಬಂದು ಅದನ್ನು ಪೂರೈಸಿ ವಾರ, ಎರಡುವಾರವಿದ್ದು ಮತ್ತೆ ಕೆಲಸಕ್ಕೆ ಹೊರಡುತ್ತಾರೆ. ಇಷ್ಟೆಲ್ಲವೂ ಈ ಸಮುದಾಯದ ಆರ್ಥಿಕ ಜೀವನವಾಗಿದೆ.

೮

# ಸಾಹಿತ್ಯ ಮತ್ತು ಭಾಷೆ

**ಚೆ**ನ್ನದಾಸರು ತಾವೇ ಸ್ವತಃ ಸಾಹಿತ್ಯ ಸೃಷ್ಟಿ ಮಾಡದಿದ್ದರೂ ಮಾನವೀಯ ಮೌಲ್ಯದ ತತ್ವಪದಗಳನ್ನು ಚಾರಿತ್ರಿಕ ಮತ್ತು ಸಾಮಾಜಿಕ ಮೌಲ್ಯದ ಲಾವಣಿಗಳನ್ನು ಉಳಿಸಿ, ಬೆಳೆಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಇದರಲ್ಲಿ ತಮ್ಮದೇ ಸಮುದಾಯದ ಚಾರಿತ್ರಿಕ, ಪೌರಾಣಿಕ, ಸಂಗತಿಗಳನ್ನೊಳಗೊಂಡ ಸಾಹಿತ್ಯ ಮಾತ್ರ ಕಡಿಮೆ ಎಂದು ಹೇಳಬಹುದು. ಇವರು ಪ್ರಚುರ ಪಡಿಸುವ ಸಾಹಿತ್ಯದಲ್ಲಿ ಕಥೆ ಮತ್ತು ಕಾವ್ಯ ಹೆಚ್ಚೆಂದು ಹೇಳಬೇಕು. ಥರ್ಸ್ಟನ್ ಅವರು 'ಬಹುಜನಪ್ರಿಯ ಲಾವಣಿಗಾಯಕರೆಂದು' ಈ ಸಮುದಾಯದವರನ್ನು ಕೊಂಡಾಡಿದ್ದಾರೆ. ೧೮ನೇ ಶತಮಾನದ ಬೊಬ್ಬಿಲಿ, ಪಾಲ್ಯೊಂಡಾದ ಅಮ್ಮಿನಾಯಿಡು, ವೇಲಮಾ ಮಹಿಳೆ ಲಕ್ಷ್ಮಮ್ಮ, ಸ್ಥಳೀಯ ದೇವತೆ ಯೆರಕಮ್ಮ – ಇವು ಅವರ ಪ್ರಸಿದ್ಧ ಗೀತೆಗಳೆಂದು ಉಲ್ಲೇಖಿಸಿದ್ದಾರೆ (ಥರ್ಸ್ಟನ್ ಇ: ೧೯೭೫: ೧೧೮).

ಪುರಾಣ

ಪುರಾಣದ ಹಲವಾರು ಪ್ರಸಂಗಗಳು ಈ ಸಮುದಾಯದ ಬಯಲಾಟ ಮತ್ತು ಹಾಡುಗಳಲ್ಲಿವೆ. ಬಯಲು ಪ್ರದೇಶದಲ್ಲಿ ಆಟ ಪ್ರದರ್ಶನ ಮಾಡುತ್ತ ಊರಿನ ಜನ ಕೊಟ್ಟದ್ದನ್ನು ಪಡೆಯುತ್ತ ತಿರುಗುವ ಇವರು, ಪುರಾಣ ಸಾಹಿತ್ಯದ ಅರಿವೇ ಇಲ್ಲದ ಜನಗಳಿಗೆ ಈ ಮೂಲಕ ಪುರಾಣವನ್ನು ರಂಜನೀಯವಾಗಿ ತಲುಪಿಸುತ್ತಾರೆ. ಈ ಸಮುದಾಯದಲ್ಲಿನ ಆಟದ ದಾಸರು, ಹೆಣ್ಣುವೇಷದವರು, ದೊಂಬಿದಾಸರು, ಭಾಗವತ ದಾಸರೆಂದು ಹೆಸರಾದವರು ಹೆಚ್ಚಾಗಿ ಬಯಲಾಟ ಆಡುತ್ತಾರೆ. 'ದಾಸರಾಟ'ದ ದಾಸರೆಂದು ಪ್ರಸಿದ್ಧರಾದ ಬಯಲು ಆಟದವರಲ್ಲಿ ಅಂಥ ಪುರಾಣದ ಅಂಶಗಳು ಇರುವುದಿಲ್ಲ.

ಈ ಸಮುದಾಯದವರು ಪುರಾಣದ ವಸ್ತುವನ್ನಿಟ್ಟುಕೊಂಡು ತಮ್ಮವೇ ತಂಡಗಳನ್ನು ಕಟ್ಟಿಕೊಂಡು ಬಯಲಾಟ ಮತ್ತು ನಾಟಕಗಳನ್ನು ಆಡುತ್ತಾರೆ. ಅವುಗಳಲ್ಲಿ ಪ್ರಮುಖ ವಾದವುಗಳೆಂದರೆ, ಸತ್ಯಹರಿಶ್ಚಂದ್ರ, ಶ್ರವಣಕುಮಾರ, ನಳದಮಯಂತಿ, ಸತ್ಯವ್ರತ, ಗಂಗೇ–ಗೌರಿ, ರಾಜಾವಿಕ್ರಮ, ಶನಿಕಥೆ, ಭಕ್ತಪ್ರಹ್ಲಾದ, ಕುರುಕ್ಷೇತ್ರ, ರೇಣುಕಾ ಯಲ್ಲಮ್ಮ, ಮಾರುತಿ–ಕರ್ಣ, ರಕ್ತ ಮುಕುಟ (ಮಹಾಭಾರತ ಕಥೆ) ಮುಂತಾದವುಗಳು.

ಇವರು ಹಾಡುವ ತತ್ವಪದ ಮತ್ತು ಲಾವಣಿಗಳಲ್ಲಿ ಹಲವಾರು ಪುರಾಣ ಪ್ರಸಂಗಗಳು ಬರುತ್ತವೆ. ಅಜಮಿಳ, ಅಹಲ್ಯ, ಐರಾವತ, ಪ್ರಲ್ಹಾದ ಮುಂತಾದ ಪ್ರಸಂಗಗಳಲ್ಲದೆ, ಗಂಗೆ-ಗೌರಿ, ಕೃಷ್ಣಕೊರವಂಜಿ, ಶ್ರೀಕೃಷ್ಣ ಪಾರಿಜಾತ ಮುಂತಾದ ಪುರಾಣ ವಸ್ತುವುಳ್ಳ ಹಾಡುಗಳನ್ನು ಹಾಡುತ್ತಾರೆ. ಕನ್ನಡ ಕೀರ್ತನ ಸಾಹಿತ್ಯಗಳಲ್ಲಿ ಬರುವ ಪುರಾಣ ಪ್ರಸಂಗಗಳ ತತ್ವಪದಗಳನ್ನೂ ಇವರು ಹಾಡುತ್ತಾರೆ.

**ಕಥೆ ಕಾವ್ಯ**

ಬೆಳಗಾವಿ ಜಿಲ್ಲೆಯ ಈ ಸಮುದಾಯದವರ ಕುರಿತು ಬಿ ಬಿ ಮಹೀಶವಾಡಿಯವರು "ದಾಸರೂ ಕಥೆ ಹೇಳಿ ಹೊಟ್ಟೆ ತುಂಬಿಕೊಳ್ಳುವ, ಇಲ್ಲವೆ ಹಾಡನ್ನು ಹೇಳಿ ಭಿಕ್ಷೆ ಬೇಡುವ ಒಂದು ದಲಿತ ವರ್ಗಕ್ಕೆ ಸೇರಿದವರು"(ಮಹೀಶವಾಡಿ, ಬಿ ಬಿ: ೧೯೬೨: ೨೪೪) ಎಂದು ಹೇಳಿರುವರು. ಮುಂದುವರಿದು "ದಮ್ಮಡಿ ಬಾರಿಸುತ್ತ ಏಕತಾರಿ ಮಿಡಿಯುತ್ತ ಅಭಿಮನ್ಯುವಿನ ಕತೆ. ರಾಮಲಕ್ಷ್ಮಣರ ಕತೆ, ಪಾಂಡವರ ಕತೆ ಹೇಳುವುದರ ಜೊತೆಗೆ ಬಂಟರ ಕತೆಗಳನ್ನು ಹೇಳುತ್ತಾರೆ. ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣ, ಕಟ್ಟೀಚೆನ್ನ, ಪವುಣಂಚೆಯ ಮುಂತಾದ ಕನ್ನಡ ನಾಡಿನ ಸಾಮಾನ್ಯ ಜನತೆಯ ಮುಂದೆ ಅಸಾಮಾನ್ಯ ಸಾಹಸ ಮಾಡಿ, ಮೆರೆದ ಬಂಟರ ಹಾಡುಗಳನ್ನು ಹೇಳುತ್ತಾರೆ. ಕಿತ್ತೂರ ಚೆನ್ನಮ್ಮ, ಮುಂಡರಗಿ ಭೀಮರಾಯ, ನರಗುಂದ ಬಂಡಾಯ, ಹಲಗಲಿ ಜಡಗಾಬಾಲರ ಕಥೆಗಳನ್ನು ಸುಂದರವಾಗಿ ವೀರರಸ ಉಕ್ಕುವಂತೆ, ಮೈರೋಮಾಂಚನ ಗೊಳ್ಳುವಂತೆ ಹಾಡಿ ಹೇಳಿ ತೋರಿಸುತ್ತಾರೆ" ಎಂದಿರುವರು. ಈಗಲೂ ಈ ರೀತಿಯ ಕಥೆ ಹೇಳುವ, ಹಾಡು ಹಾಡುವ ಜನ ಅಲ್ಲಲ್ಲಿ ಇದ್ದಾರೆ. ಮಹೀಶವಾಡಿಯವರು ಇವರನ್ನು ವೃತ್ತಿ ಗಾಯಕರು ಎಂದಿರುವರು. "ಕಳೆದ ಶತಮಾನದಲ್ಲಿ ಗೋವರ್‌ವರು ಬಣ್ಣಿಸಿರುವ ದಾಸರು, ಪ್ಲೀಟ್ ಅವರು ಲಾವಣಿಗಳನ್ನು ಸಂಗ್ರಹಿಸಿದ ದಾಸರೂ ಇವರೇ ಎಂಬುದರಲ್ಲಿ ಸಂಶಯವಿಲ್ಲ"(ಪರಮಶಿವಯ್ಯ, ಜೀ ಶಂ:೧೯೮೧:೨೬೨) ಎಂದು ಜೀ ಶಂ ಪರಮಶಿವಯ್ಯನವರು ಹೇಳಿರುವರು.

ಈ ಕಲಾವಿದರ ಹೆಗ್ಗಳಿಕೆ ಎಂಥದ್ದೆಂದರೆ, "ಗುರು ಕೃಪೆಯಿಂದ ನಡೆಯುವ ಜೀವನ, ತುಂಬಿದ ಕೊಡದಂತಹ ಕಾಯ, ಸದ್ದಿಲ್ಲದಂತೆ ಬರುವ ಸಾವು ಈ ಮುಂತಾದ ವಿಷಯಗಳನ್ನು ಕುರಿತ 'ತೂಗತದ ನೋಡ ಜೋಕಾಲಿ ಸದ್ಗುರುವಿನ ದಯದಿಂದ', 'ಏನ್ ಕೊಡ ಏನ್ ಕೊಡವಾ ಹುಬ್ಬಳ್ಳಿ ಮಠ ಏನ್ ಚೆಂದುಳ್ಳ ಕೊಡವಾ.' 'ತನುವಿ ನೊಳಗನುದಿನವಿದ್ದು ಎನ್ನಮನಕೊಂದು ಮಾತ ಹೇಳದೆ ಹೋದೆ ಹಂಸ', ಎಂಬಿತ್ಯಾದಿ ತತ್ವಪದಗಳು ತಂಬೂರಿ ಕಲಾವಿದರ ಅನುಭಾವದ ನೆಲೆ ಹಾಗೂ ಕಲಾಸಿದ್ಧಿಗೆ ಸಾಕ್ಷಿ ಯಾಗಿವೆ. ವರಕವಿಯೆಂದೇ ಪ್ರಖ್ಯಾತರಾದ ದ ರಾ ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಸುಪ್ರಸಿದ್ಧ ಪದ್ಯದ ಮೂಲ ಉದಗಟ್ಟಿ ದಾಸಯ್ಯನ ಕಾಲವನ್ನು ಕುರಿತ ತತ್ವಪದ ಎಂಬುದನ್ನು ವಿಮರ್ಶಕರು ಈಗಾಗಲೇ ಗುರುತಿಸಿ ಹೇಳಿದ್ದಾರೆ. ಇಂಥ ಶ್ರೇಷ್ಠ ಕವಿಯನ್ನೂ ಪ್ರಭಾವಿಸಬಲ್ಲ ಪ್ರತಿಭಾಸಂಪನ್ನತೆ ಈ ಕಲಾವಿದರದು!"

(ಕುಪ್ಪೆ, ನಾಗರಾಜ: ೨೦೦೩: ೨೫). ಈ ಸಮುದಾಯದ ಪ್ರಖ್ಯಾತ ಗಾಯಕರಲ್ಲಿ ಈ ಮೇಲೆ ತಿಳಿಸಿದ ಉದಗಟ್ಟಿಯ ದಾಸಯ್ಯನ ಹೆಸರು ಉದ್ದಪ್ಪ ಚಿಂತಾಮಣಿ ದಾಸರ. (ಈತ ಸುಮಾರು ಮೂವತ್ತು ವರ್ಷಗಳ ಹಿಂದೆ ತೀರಿಕೊಂಡಿರುವನು. ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಒಂದು ಹಳ್ಳಿಯೇ ಉದಗಟ್ಟಿ) ಮತ್ತು ರಾಯರ ಹೆಬ್ಬಳ್ಳಿಯ ಕೃಷ್ಣಪ್ಪ ದಾಸರ ಎನ್ನುವ ಪ್ರಸಿದ್ಧ ತಂಬೂರಿ ಕಲಾವಿದ ಬೇಂದ್ರೆಯವರ ಕಾವ್ಯರಚನೆಗೆ ಸ್ಫೂರ್ತಿಯಾಗಿದ್ದನೆಂಬ ಸಂಗತಿ ಇದೆ. ಬೆಳಗಾವಿ ಜಿಲ್ಲೆಯ ಕನ್ನಯ್ಯದಾಸರ, ಮತ್ತು ಸಿದ್ದಾಪೂರದ ಸಣ್ಣದುರಗಪ್ಪ ಗಾಣಿಗೇರ, ತುಳಸಿಗೇರಿಯ ವೆಂಕಪ್ಪ ದಾಸರ, ತುಮ್ಮರಗುದ್ದಿಯ ಮಾರೆಪ್ಪ ದಾಸರ, ಗುಳೇದಗುಡ್ಡದ ಕೃಷ್ಣಪ್ಪ ವಾರದ, ಅರ್ಜುನವಾಡದ ತಾಯಪ್ಪ, ಯಂಕಪ್ಪ, ನರಸಿಂಗಪ್ಪ, ಹಿಡಕಲ್ಲದ ತಂಬೂರಿ ದುರ್ಗಪ್ಪ, ಗುಲ್ಬರ್ಗಾದ ಬಾಲಕೃಷ್ಣಪ್ಪ ರಾಂಪುರಿ ಇನ್ನೂ ಹಲವಾರು ಕಲಾವಿದರನ್ನು ಹೆಸರಿಸಬಹುದು. ಇವರೆಲ್ಲ ಗಾಯನವನ್ನು ವೃತ್ತಿಯನ್ನಾಗಿ ಮಾಡಿಕೊಂಡವರು. ವೃತ್ತಿಗಾಯಕರಲ್ಲದ ಅನೇಕ ಹಾಡುಗಾರರು ಇನ್ನೂ ಈ ಸಮುದಾಯದಲ್ಲಿದ್ದಾರೆ. ಇವರು ಹಬ್ಬ, ಜಾತ್ರೆ, ಮದುವೆ, ಮರಣದ ಕಾರ್ಯದ ದಿನ ಸ್ವಯಂಸ್ಫೂರ್ತಿಯಿಂದ ಹಾಡುತ್ತಿರುತ್ತಾರೆ. ವೃತ್ತಿ ಕತೆಗಾರರಲ್ಲದ ಅಸಂಖ್ಯಾತ ಜನ ದಿನನಿತ್ಯದ ಕೆಲಸದ ವೇಳೆಯಲ್ಲಿ, ಮದುವೆ, ಜಾತ್ರೆಗಳಲ್ಲಿ, ರಾತ್ರಿ ಗುಂಪಾಗಿ ಕೂಡಿದಲ್ಲಿ ಅರ್ಧ ಗಂಟೆಯಿಂದ ಎರಡೆರಡು ಗಂಟೆಯವರೆಗಿನ ಕಥೆಗಳನ್ನು ಹೇಳುವ ಸಾಮರ್ಥ್ಯವುಳ್ಳವರಾಗಿದ್ದಾರೆ. ಇಲ್ಲಿನ ಬಹುಪಾಲು ಕಥೆಗಳು ನೀತಿ, ರಮ್ಯ, ಹಾಸ್ಯ ಮತ್ತು ಪ್ರಾಣಿಕಥೆಗಳಾಗಿವೆ. ಈ ಕತೆಗಳಲ್ಲಿ ಪರೋಪಕಾರ, ದಾನ, ಒಳ್ಳೆಯ ನಡತೆ, ಜಿಪುಣ ಹಾಗೂ ಜಾರತನ ಮಾಡುವವರ ಪಜೀತಿಗಳ ವಿಷಯವನ್ನೊಳಗೊಂಡಿರುತ್ತವೆ. ಅಲ್ಲದೆ ಕೋಲಾರದ ಕಡೆಗೆ ಬಾಲನಾಗಮ್ಮ, ಚಿನ್ನಮ್ಮ ಕತೆ, ದೇಸಿಂಗ ರಾಜನ ಕತೆ, ಬುರ್ರಕತೆಗಳನ್ನು ರಾತ್ರಿವೇಳೆಯಲ್ಲಿ ಹೇಳುವುದು ರೂಢಿಯಲ್ಲಿದೆ.

ಈ ಸಮುದಾಯದ ಉಪಪಂಗಡವಾದ ದೊಂಬಿದಾಸರಂತೂ ಕತೆ ಹಾಡುಗಳ ಕಣಜವೇ ಆಗಿರುವರು. ಅವರ ಲಾವಣಿ ಪದಗಳಲ್ಲಿ ಕೆಲವು ಮುಖ್ಯವಾದವುಗಳನ್ನು ಜೀ ಶಂ ಪರಮಶಿವಯ್ಯನವರು ಹೀಗೆ ಪಟ್ಟಿಮಾಡಿರುವರು.

ಐತಿಹಾಸಿಕ : ಮಾಗಡಿ ಕೆಂಪೇಗೌಡ, ಪೌರಾಣಿಕ : ಹುಟ್ಟಿದಳಿಗೌರಮ್ಮ ಭೂಲೋಕದಲ್ಲಿ, ಗಂಗೆ–ಗೌರಿ ಜಗಳ, ಗಂಗೆ–ಗೌರಿವಾದ, ಗಂಗೇ–ಗೌರಿ ಸವಾಲು, ಕೃಷ್ಣಕೊರವಂಜಿ, ದೇವಗನ್ನೆಯರು ಮತ್ತು ಶ್ರೀಕೃಷ್ಣ ಪಾರಿಜಾತ, ವಾಸ್ತವಿಕ: ಕಲಿಯುಗದ ಬಾಲೆ, ಅತ್ತೆಸೊಸೆ, ಕೋಣವೇಗೌಡ ರಮ್ಯ: ಬಾಲನಾಗಮ್ಮ, ಬಂಜೆ ಹೊನ್ನಮ್ಮ, ಅಣ್ಣ–ತಂಗಿ, ರಾಜಸತ್ಯಭೋಜ ಮತ್ತು ಬಸವಕುಮಾರ ಲೋಹಿತಕುಮಾರ.

ಹೀಗೆ ಈ ಸಮುದಾಯದ ಕತೆ ಮತ್ತು ಕಾವ್ಯದ ಸಾಹಿತ್ಯ, ಮೌಖಿಕ ಪರಂಪರೆಯಲ್ಲಿ ಮೇಲ್ಪಂಕ್ತಿಯಲ್ಲಿದೆ. ಊರು ಮತ್ತು ಪಟ್ಟಣ ಪ್ರದೇಶಗಳ ಎಲ್ಲ ಭಾಗಗಳಲ್ಲಿ ಸಂಚರಿಸುವ ಇವರು ಮೇಲ್ಕಾಣಿಸಿದ ಸಾಹಿತ್ಯವನ್ನು ಮನೆ ಮನೆಗೂ ತಲುಪಿಸುವಲ್ಲಿ ಹೆಚ್ಚು ಯಶಸ್ವಿಯಾದ ವೃತ್ತಿಗಾಯಕರಾಗಿದ್ದಾರೆ. ಇವರ ಕತೆ ಹೇಳುವ ಶೈಲಿ ಮತ್ತು ಸರಳವಾದ

ಹಾಡಿನ ದಾಟಿ ಬಹುಸಂಖ್ಯಾತರ ಮನಸ್ಸನ್ನು ಬಹುಬೇಗ ಆಕರ್ಷಿಸಿ ಬಹುಕಾಲ ನೆಲೆ ನಿಲ್ಲುತ್ತದೆ. ಈ ಸಮುದಾಯದ ವೃತ್ತಿಗಾಯನ ಕಡಿಮೆಯಾಗಿರುವ ಇಂದಿನ ದಿನಮಾನ ದಲ್ಲೂ ಅವರ ಸಾಹಿತ್ಯದ ವಸ್ತು ಮತ್ತು ದಾಟಿ ಇಂದಿಗೂ ಹಳೆಯ ತಲೆಮಾರಿನ ಜನಪದರ ನಾಲಗೆಯ ಮೇಲಿರುವುದೇ ಅದರ ಜನಪರ ಮತ್ತು ಜನಪ್ರಿಯತೆಗೆ ಸಾಕ್ಷಿ.

**ಗಾದೆ, ಬೈಗುಳ**

ಗಾದೆ ಎಲ್ಲ ಜನಪದ ಸಮುದಾಯಗಳಲ್ಲಿ ಪ್ರಪಂಚದಾದ್ಯಂತ ಕಂಡು ಬರುವ ಜನಪ್ರಿಯ ಸಾಹಿತ್ಯ ಪ್ರಕಾರ, ಈ ಸಮುದಾಯದಲ್ಲಿನ ಅನೇಕ ಗಾದೆಗಳು ಇತರ ಸಮುದಾಯಗಳಲ್ಲೂ ಕಂಡು ಬರುತ್ತವೆ. ಗಾದೆಗಳು ನೀತಿಯ ಜ್ಯೋತಿಗಳಾಗಿ ಈ ಸಮುದಾಯದಲ್ಲಿ ಬಳಕೆಯಾಗಿವೆ. ಅಲ್ಲದೆ ಈ ಸಮುದಾಯವನ್ನು ಕುರಿತು ಕೆಲವು ಗಾದೆಗಳಿವೆ. ಅವು ಜನಪ್ರಿಯ ವಾಕ್ಯಗಳೂ ಆಗಿವೆ. ಕೆಲವು ಹೀಗಿವೆ.

**ದಾಸ ಕೂಡಿಕೆಟ್ಟ ಡೊಂಬ ಅಗಲಿಕೆಟ್ಟ :** ಅಸಂಘಟಿತರಾದ ಇವರಲ್ಲಿ ಸಂಘಟನೆ ಸಾಧ್ಯವಿಲ್ಲ, ಇವರು ಕೂಡಿದರೆ ಜಗಳಾಡುವುದು ನಿಶ್ಚಿತ ಎಂದೆ ಅರ್ಥ. ಈ ಮಾತು ಸತ್ಯವೂ ಇದೆ. ಇನ್ನು ನಾಲ್ಕಾರು ಜನ ಕೂಡಿಯೇ ತಮ್ಮ ಕೌಶಲ್ಯಗಳನ್ನು ಪ್ರದರ್ಶಿಸುವ ಡೊಂಬರು ಜಗಳವಾಡಿ ಅಗಲಿದರೆ ಅವರ ಆಟಕ್ಕೆ ಸಂಚಕಾರ. ಆದಾಯ ಅಥವಾ ಭಿಕ್ಷೆ ಇಲ್ಲದೆ ಉಪವಾಸ ಬೀಳಬೇಕಾಗುತ್ತದೆ ಎಂದರ್ಥ.

**ಅಲ್ಲೋ ದಾಸ ಅಂದ್ರೆ ಅದೇ ಪದಾರೀ ಗೌಡ್ರ ಅಂತಿದ್ನಂತ :** ಇವರು ಮೊಂಡು ಜನ, ಹೇಳಿದ್ದನ್ನೇ ತಿರುಗಿ ಹೇಳುವ, ಮಾಡಿದ್ದನ್ನೇ ತಿರುಗಿ ಮಾಡುವ ಇವರು ಹೊಸದಕ್ಕೆ ಮನಸ್ಸು ಮಾಡುವವರಲ್ಲ. ತಮ್ಮದನ್ನೇ ಸಮರ್ಥಿಸಿಕೊಳ್ಳುವವರು ಎಂದರ್ಥ. ಅವರು ಹಾಡುವ ಹಾಡಿಗೆ ಸಂಬಂಧಿಸಿ ಈ ಗಾದೆ ಹುಟ್ಟಿಕೊಂಡಿದೆ.

**ಹಾಡಿದ್ದೇ ಹಾಡೋ ಕಿಸಬಾಯಿ ದಾಸ :** ಈ ಗಾದೆ ಕೂಡ ಈ ಮೇಲಿನ ಅರ್ಥವನ್ನೇ ಧ್ವನಿಸುತ್ತದೆ. ಹಾಡಿಗೆ ಸಂಬಂಧಿಸಿ, ಇವರು ಹಾಡಿದ್ದನ್ನೇ ಎತ್ತರದ ಧ್ವನಿಯಲ್ಲಿ ಹಾಡುತ್ತಿರುವುದರಿಂದ ಈ ಗಾದೆ ಹುಟ್ಟಿಕೊಂಡಿದೆ. ಒಂದೊಂದು ಸಾರಿ ಈ ಎರಡೂ ಗಾದೆಗಳು ಎದುರಿನವರಿಗೆ ಬೈಗುಳ ಪದವಾಗಿಯೂ ಬಳಕೆಯಾಗುತ್ತವೆ.

**ದಾಸರ ಆಟವಲ್ಲ ದೋಸೆಯ ಊಟವಲ್ಲ :** ಇದು ಸಮುದಾಯದವರು ಆಡುವ ಬಯಲುನಾಟಕ ಅಥವಾ ಬಯಲಾಟಕ್ಕೆ ಸಂಬಂಧಿಸಿದೆ. ದೋಸೆ ಎಷ್ಟು ತಿಂದರೂ ಊಟ ಮಾಡುವುದರಿಂದಾಗುವ ತೃಪ್ತಿ ಹೇಗೆ ಸಿಗುವುದಿಲ್ಲವೋ, ಉಳಿದ ಬಯಲಾಟ ನೋಡುವುದರಿಂದ ಸಿಗುವ ಆನಂದ ಆಗುವ ತೃಪ್ತಿ ದಾಸರ ಆಟದಿಂದ ಸಿಗುವುದಿಲ್ಲ ಎಂದರ್ಥ.

ಹೀಗೆ ಈ ಸಮುದಾಯವನ್ನೇ ಕುರಿತಿರುವ ಈ ಗಾದೆಗಳು ಈ ಸಮುದಾಯದ ಸಾಮಾಜಿಕ ಅಂತಸ್ತನ್ನು ಚೆನ್ನಾಗಿ ಬಿಂಬಿಸುತ್ತದೆ.

**ಬೈಗುಳ:** 'ಬೈಗುಳ'ವೂ ಒಂದು ಜನಪದ ಸಾಹಿತ್ಯ ಪ್ರಕಾರವಾಗಿರುವುದನ್ನು ಅನೇಕ

ವಿದ್ವಾಂಸರು ಪರಿಶೀಲಿಸಿದ್ದಾರೆ. 'ಬೈಗುಳ'ದ ಹಿಂದೆ ಒಂದು ಸಾಮಾಜಿಕ ಆಯಾಮವೇ ತೆರೆದುಕೊಳ್ಳುತ್ತದೆ.

ಈ ಸಮುದಾಯದ ಹೆಣ್ಣುಮಕ್ಕಳ ಕೆಲವು ಬಯ್ಗುಳಗಳನ್ನು ಅವಲೋಕಿಸಿದರೆ ತಿಳಿಯುತ್ತದೆ.

೧. ನಿನ್ನ ಮಾರಿ ಮಣ್ಣಾಗ ಅಡಗಲಿ

೨. ನಿನ್ನ ಮಣ್ಣಾಗ ಮುಚ್ಚಿ, ಮನ್ಯಾಗ ಹುಡಕ್ಯಾಡ್ಲಿ

೩. ನಿನ್ನ ಹಾದಿಗೆ ನವನಿ ಚೆಲ್ಲಲಿ

೪. ನಿನ್ನ ಹೆಂಡ್ತಿ ಗುಳದಾಳಿ ಹರೀಲಿ / ನಿನ್ನ ಹೆಂಡ್ತಿ ರಂಡಿ ಆಗಲಿ.

೫. ನಿನ್ನ ಹೆಜ್ಜಿ ಅಡಗಲಿ / ನಿನ್ನ ಸಲ್ಲ ಅಡಗಲಿ

ಇವು ಹೆಂಗಸರ ಬಯ್ಗುಳಗಳು. ಯಾರಿಗೆ ತಮ್ಮ ಎದುರಾಳಿಯ ಮೇಲೆ, ದೈಹಿಕವಾಗಿ ಸೇಡು ತೀರಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೋ ಅಂಥವರು ಬಯ್ಗುಳದ ಮೋರೆ ಹೋಗುತ್ತಾರೆ. ದಲಿತರು, ಬಡವರು ಮತ್ತು ಸ್ತ್ರೀಯರು ಈ ಗುಂಪಿಗೆ ಸೇರುತ್ತಾರೆ. ಈ ಮೇಲೆ ತನ್ನನ್ನು ಕಾಡಿಸುವ, ಪೀಡಿಸುವ, ತನ್ನ ನೋವಿಗೆ ಕಾರಣವಾಗಿರುವ ಗಂಡಸನ್ನು ಉದ್ದೇಶಿಸಿ ಆಡಿದ ಬಯ್ಗುಳಗಳಲ್ಲಿ ಅಂಥವನು ಸತ್ತು ಹೋಗಲಿ, ಅವನ ಹೆಜ್ಜೆ ಮತ್ತು ಮುಖ ದರ್ಶನ ಆಗದಿರಲಿ ಎಂಬ ಆಶಯವಿದೆ.

ಮೊದಲ ಬಯ್ಗುಳದಲ್ಲಿ ಅವನ ಮಾರಿ(ಮುಖ) ಮಣ್ಣಲ್ಲಿ ಅಡಗಬೇಕಾದರೆ ಅವನು ಸತ್ತ ಬಳಿಕವೇ; ಎರಡನೇ ಬಯ್ಗುಳದಲ್ಲಿ 'ಮಣ್ಣಲ್ಲಿ ಮುಚ್ಚಿ, ಮನೆಯಲ್ಲಿ ಹುಡುಕಾಡುವುದು' ಕೂಡ ಸತ್ತ ಬಳಿಕವೇ; ಹಾದಿಗೆ ನವನಿ (ರಾಗಿಯಂತಹ ಕಾಳು) ಯ ಕಾಳನ್ನು ಸ್ಮಶಾನದಿಂದ ಬರುವ ಭೂತ ಅಥವಾ ದೆವ್ವಗಳಿಗೆ ಬೆನ್ನತ್ತಿ ಬರದಂತೆ ಮಾಡಲು ಚೆಲ್ಲುತ್ತಾ ಬರುತ್ತಾರೆ. ಸತ್ತವರು ಭೂತವಾಗಿ ಬರುತ್ತಾರೆನ್ನುವ ನಂಬುಗೆಯಿಂದ, ಅದು ಬೆನ್ನತ್ತಿ ಬರುವುದಾದರೆ ಇದೊಂದು ಕರಾರು ಹಾಕುತ್ತಾರೆ. ಅದು ರಾತ್ರಿ ವೇಳೆಯಲ್ಲಿ ಮಾತ್ರ ಬರುತ್ತದಾದ್ದರಿಂದ ಬರುವುದಾದರೆ ನಾವು ದಾರಿಯುದ್ದಕ್ಕೂ ಚೆಲ್ಲಿದ ಈ ಕಾಳುಗಳನ್ನು ಒಂದೂ ಬಿಡದಂತೆ ಆಯ್ದುಕೊಂಡು ಬರಬೇಕು. ಅವು ಎಲ್ಲೆಲ್ಲಿಯೋ ಮರೆಯಾಗಿ ಬಿದ್ದಿರುತ್ತವೆ. ಅವನ್ನು ಹುಡುಕಿ ಆಯ್ದುಕೊಂಡು ಬರ ಬೇಕಾದರೆ ಬೆಳಕಾಗುವುದು ಖಂಡಿತ. ಹಾಗಾಗಿ ದೆವ್ವ ಅಥವಾ ಭೂತ ಬೆನ್ನತ್ತಿ ಬರುವುದು ಸಾಧ್ಯವಾಗುವುದಿಲ್ಲ. ಅದಕ್ಕಾಗಿಯೇ ಹೆಣ್ಣುಮಗಳು 'ನಿನ್ನ ಹಾದಿಗೆ ನವನಿ ಕಾಳು ಚೆಲ್ಲಲಿ' ಎನ್ನುತ್ತಾಳೆ. ಅವನು ಭೂತವಾಗಿ ಬರುವುದು ಸತ್ತಬಳಿಕವೇ; ನಾಲ್ಕನೆಯ ಬಯ್ಗುಳದಲ್ಲಿ ಅವನ ಹೆಂಡತಿಯನ್ನು ಗುರಿಯಾಗಿಟ್ಟು ಹೇಳಿರುವ ಮಾತುಗಳಲ್ಲಿ ಅವನು ಸಾಯಲಿ ಎಂಬ ಒತ್ತಾಸೆಯಿದೆ. ಹೆಂಡತಿಯ ಗುಳದಾಳಿ ಹರಿಯುವುದಾಗಲೀ ಅವನ ಹೆಂಡತಿ ವಿಧವೆ ಯಾಗುವುದಾಗಲೀ ಅವನು ಸತ್ತ ಬಳಿಕವೇ; ಐದನೆಯ ಬಯ್ಗುಳದಲ್ಲೂ ಕೂಡ ಅವನ ಹೆಜ್ಜೆ ನೆಲದ ಮೇಲೆ ಮೂಡದೇ ಇರುವುದು, ಅವನ ಸಲ್ಲ (ಮಾತು) ನಿಂತು ಹೋಗುವುದು ಆತ ಸತ್ತ ಬಳಿಕವೇ.

ಹೀಗೆ ಸಮುದಾಯದಲ್ಲಿನ ಅನೇಕ ಬಯ್ಗುಳಗಳು ಶ್ಲೇಷೆಯಿಂದ ಕೂಡಿವೆ. ಬಯ್ಗುಳಗಳು ಹೆಂಗಸರು, ಗಂಡಸರು ಮತ್ತು ಮಕ್ಕಳೆನ್ನದೆ ಬಳಕೆಗೊಳ್ಳುತ್ತವೆ. ಆದರೆ ಹೆಂಗಸರ ಬಯ್ಗುಳಗಳಲ್ಲಿ ಚಿತ್ತಾಕರ್ಷಕ ಸಾಹಿತ್ಯದ ಗುಣಗಳಿಗುರತ್ತವೆ. ಧ್ವನಿ ಮತ್ತು ಅಲಂಕಾರ ಈ ಬೈಯ್ಗುಳಗಳ ಸಾಮಾನ್ಯ ಲಕ್ಷಣವಾಗಿದೆ.

ಈ ಸಮುದಾಯ ಹೀಗೆ ತನ್ನ ವೃತ್ತಿ ಬದುಕಿನ ಅಂಗುಲ ಅಂಗುಲದಲ್ಲಿ ಸಾಹಿತ್ಯವನ್ನು ಧರಿಸಿಕೊಂಡಿದೆ. ಅದನ್ನು ತನ್ನ ಸುತ್ತಮುತ್ತಲ ಸಮಾಜದ ಸಮಸ್ತರಿಗೂ ನೀಡಿ ಧನ್ಯತೆಯನ್ನು ಹೊಂದಿದೆ. ಆದರೆ ತಾನು ಮಾತ್ರ ಇನ್ನೂ ದೈನೇಸಿಯಾಗಿ ಜೀವಿಸುತ್ತಿದೆ. ಇದನ್ನು ಸಾಹಿತಿ, ಚಲನಚಿತ್ರ ಸಾಹಿತಿ ಹಾಗೂ ಕಲಾವಿದರಾದ ಶ್ರೀ ಕಾಕೋಳು ರಾಮಯ್ಯ ಹೇಳುವುದು ಹೀಗೆ. (ಕುಪ್ಪೆ, ನಾಗರಾಜ: ೨೦೦೩: ೧೪) "ನಮ್ಮ ತಾತ ಮುತ್ತಾತಂದಿರ ಕಾಲದಿಂದ್ಲೂ ನಮ್ಮವರು ನಾಟ್ಕ ಆಡಿ ಅವರನ್ನು ರಂಜಿಸಿದರು. ಜನಗಳು ನಮ್ಮಿಂದ ನಾಟ್ಕ ಕಲಿತರು. ನಾಟಕದಲ್ಲಿನ ನೀತಿ ಕಲಿತರು. ಪೌರಾಣಿಕ ಪ್ರಸಂಗಗಳ ಪರಿಚಯ ಪಡೆದರು. ಅವಿದ್ಯಾವಂತರೂ ಸಹ ಪೌರಾಣಿಕ ಪಾತ್ರಗಳನ್ನು ಮಾಡಿ ಭಾಷೆ ಕಲಿತರು. ನಮ್ಮವರು ಕನ್ನಡದ ಭಾಷೆಯನ್ನು ಬೆಳೆಸಿದರು. ನಮ್ಮವರಿಂದಾಗಿ ಸಂಸ್ಕೃತಿ ಬೆಳೆಯಿತು. ಸಾಹಿತ್ಯ ಬೆಳೆಯಿತು. ಜಾನಪದ ಕಲೆ ಬೆಳೆಯಿತು. ಆದರೆ ನಾವು ಮಾತ್ರ ಬೆಳೆಯಲಿಲ್ಲ ಯಾಕೆ?"

**ಭಾಷೆ**

ಈ ಸಮುದಾಯ ಆಂಧ್ರ ಮೂಲದ್ದಾಗಿರುವುದರಿಂದ ಹೆಚ್ಚಿನ ಸಂಖ್ಯೆಯವರು ತೆಲುಗು ಮಾತನಾಡುವವರಿದ್ದಾರೆ. ಕನ್ನಡ ಮನೆ ಮಾತಾಗಿರುವವರೂ ಕೂಡ ಇತ್ತೀಚೆಗೆ ನಾವು ತೆಲಗು ಮರೆತಿದ್ದೇವೆ ಎಂದೆನ್ನುತ್ತಾರೆ. ಬಹುತೇಕರ ಮನೆ ಮಾತು ತೆಲುಗು ಆಗಿದ್ದರೂ ವ್ಯವಹಾರಿಕ ಭಾಷೆ ಮತ್ತು ಅವರ ಎಲ್ಲ ಸಾಹಿತ್ಯದ ಭಾಷೆ ಮಾತ್ರ ಕನ್ನಡವೇ ಆಗಿದೆ. ರಾಜ್ಯದ ವಿವಿಧ ಗಡಿಭಾಗಗಳಲ್ಲಿರುವ ಸಮುದಾಯದವರ ಭಾಷೆಯಲ್ಲಿ ಭಿನ್ನತೆ ಕಾಣಿಸುತ್ತದೆ. ಏಕೆಂದರೆ ಉತ್ತರ ಕರ್ನಾಟಕದವರು ಮರಾಠಿಯ ಪ್ರಭಾವದಲ್ಲಿ, ಹೈದ್ರಾಬಾದ್ ಕರ್ನಾಟಕದವರು ಮತ್ತು ಕೋಲಾರದವರು ಶಿಷ್ಟ ತೆಲುಗಿನ ಪ್ರಭಾವದಲ್ಲಿ ಇನ್ನುಳಿದವರು ಅಚ್ಚಗನ್ನಡ ಪ್ರಭಾವದಲ್ಲಿ ತಮ್ಮ ತೆಲುಗನ್ನು ಬಳಸುತ್ತಾರೆ. ಹೀಗಾಗಿ ಈ ಸಮುದಾಯದವರ ತೆಲುಗಿನಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಕಾಣುತ್ತೇವೆ. ಸಮುದಾಯದೊಂದಿಗೆ ತೆಲುಗಿನಲ್ಲಿ ಸಮಾಜದವರೊಂದಿಗೆ ಕನ್ನಡದಲ್ಲಿ ವ್ಯವಹರಿಸುವುದ ರಿಂದ, ಸಮಾಜದ ಇತರರೂ ಕೂಡ ತೆಲುಗನ್ನು ಅರ್ಥ ಮಾಡಿಕೊಂಡು ಅವರೊಂದಿಗೆ ತೆಲುಗಿನಲ್ಲಿ ಸಂಭಾಷಣೆಗಿಳಿಯುವ ಉದಾಹರಣೆಗಳೂ ಇವೆ. ಹೀಗಿರುವಾಗ ತಮ್ಮ ಕೆಲವು ಒಳಗುಟ್ಟು ಅಂಥವರಿಗೆ ತಿಳಿಯಬಾರದೆಂದು ಗುಪ್ತ ಅಥವಾ ಸಿಗೂಡ ಭಾಷೆಯಲ್ಲಿ ತಮ್ಮವರೊಂದಿಗೆ ಸಂಭಾಷಿಸುತ್ತಾರೆ. ಅದಕ್ಕೆ ಅವರು 'ಮರುಗ' ಭಾಷೆ ಎಂದು ಕರೆದುಕೊಳ್ಳುತ್ತಾರೆ. ಇದು ತೆಲುಗು ಮಾತನಾಡುವ ಸಮುದಾಯದ ಎಲ್ಲರಿಗೂ ಅನ್ವಯಿಸುತ್ತದೆ. ಕೆಲವನ್ನು ಹೀಗೆ ಹೇಳಬಹುದು.

**ಸಮುದಾಯಗಳಿಗೆ ಸಂಬಂಧಿಸಿ :** ಹೊಲೆಯ–ಮಾದಿಗ ಅನ್ನುವುದಕ್ಕೆ ಕೀನೆಗಾಡು

ಎಂದೂ; ಕೊರವ ಅನ್ನುವುದಕ್ಕೆ ಸೋಡೆಗಾಡು ಎಂದೂ; ನಾಪಿಂದ ಅನ್ನುವುದಕ್ಕೆ ಗೀಕೆತೋಡು ಇಲ್ಲವೆ ಮಂಗಳೋಡು ಎಂದೂ; ಜಂಗಮ ಅನ್ನುವುದಕ್ಕೆ ಪಿಂಡೋಡು ಎಂದೂ ಹೇಳುವರು. ಕ್ರಿಯಾ ಪದಗಳಿಗೆ ಸಂಬಂಧಿಸಿ: ಹೋಗು ಅನ್ನುವುದಕ್ಕೆ ಜುನುಗು ಎಂದೂ, ಸುಮ್ಮನಿರು ಅನ್ನುವುದಕ್ಕೆ ನಾಗನ ಎಂದೂ; ಬೇರೆ ಸಮುದಾಯದವನಿಗೆ ಮಂಕಾಡು ಎಂದೂ ಹೀಗೆ ಬೇರೆಯವರಿಗೆ ಅರ್ಥವಾಗದ ಹಾಗೆ 'ಮರುಗ' ಪದಗಳನ್ನು ಬಳಸುತ್ತಾರೆ.

ಭಾಷೆ ಎಂಬುದು ಒಂದು ಸಮಾಜದ ಒಟ್ಟು ಆಸ್ತಿಯೇ ಹೊರತು ಒಂದು ನಿರ್ದಿಷ್ಟ ಕುಟುಂಬದ ಆಸ್ತಿಯಂತೂ ಖಂಡಿತ ಅಲ್ಲ. ಪ್ರತಿಯೊಂದು ಸಮುದಾಯಕ್ಕೆ ತನ್ನದೇ ಆದ ಭಾಷೆ ಇರುತ್ತದೆ. ಹಾಗೇ ಚೆನ್ನ ದಾಸರಿಗೂ ಅವರದೇ ಆದ ಭಾಷೆಯೊಂದಿದೆ. ಅವರ ಮಾತೃಭಾಷೆ ತೆಲುಗು.

ಕರ್ನಾಟಕದಲ್ಲಿ ಬಂದು ನೆಲೆನಿಂತಮೇಲೆ ಕನ್ನಡ ಭಾಷೆಯನ್ನು ಕಲಿತು ಜನಪದ ಕಾವ್ಯಗಳನ್ನು ಹಾಡಿ ಸಾಂಸ್ಕೃತಿಕ ವೃತ್ತಿ ಗಾಯಕರಾಗಿ ಜನಪ್ರಿಯರಾಗಿದ್ದಾರೆ. ಇವರಾಡುವ ಮಾತೃಭಾಷೆ ತೆಲುಗಿನ ಜೊತೆಗೆ ಕನ್ನಡದ ಉಪಭಾಷೆಯಾಗಿ ತೆಲುಗು-ಕನ್ನಡ ಭಾಷಿಕರಿಗೆ ಅರ್ಥವಾಗದ ಮರುಗು ಭಾಷೆ(Code Language)ಯಾಗಿ ಮಾರ್ಪಾಡಾಗಿದೆ.

ಇದು ಹಳೆಯ ತಲೆಮಾರಿನವರ ನಡುವೆ ಈಗಲೂ ಚಾಲ್ತಿಯಲ್ಲಿದ್ದು ಲಿಪಿ ಇಲ್ಲದ ಭಾಷೆಯಾಗಿದೆ. ಆಧುನಿಕತೆಯ ದುಷ್ಪರಿಣಾಮ ಮತ್ತು ಯುವ ಜನಾಂಗ ಈ ಭಾಷಾ ಪ್ರಯೋಗದಿಂದ ದೂರ ಉಳಿದ ಕಾರಣ ಪ್ರೋತ್ಸಾಹವಿಲ್ಲದೆ ಇಂದು ಚೆನ್ನ ದಾಸರ ಮರಗು ಭಾಷೆ ಕ್ಷೀಣಿಸುತ್ತಾ ಬಂದಿದೆ. ಈ ಭಾಷೆ ಸಮುದಾಯದ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳಲ್ಲಿ ಮತ್ತು ತಮ್ಮ ಅಲೆಮಾರಿ ಬದುಕಿನಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ತಮ್ಮ ರಕ್ಷಣೆಗಾಗಿ ಅನ್ಯಭಾಷಿಕರಿಗೆ ಅರ್ಥವಾಗದಿರಲೆಂದು ತನ್ನೊಳಗೆ ರಹಸ್ಯವಾಗಿ ಸಂಭಾಷಿಸಿಕೊಳ್ಳಲು ರೂಪಿತಗೊಂಡಿತ್ತು.

ಈ ಮರುಗು ಭಾಷೆಯನ್ನು ಕನ್ನಡ, ತೆಲಗು, ಇತ್ಯಾದಿ ಭಾಷೆಗಳ ನಡುವೆ ಬಿಡಿ ಬಿಡಿ ಪದಗಳ ರೂಪದಲ್ಲಿ ಇಲ್ಲವೆ ಪೂರ್ಣ ವಾಕ್ಯಗಳ ರೂಪದಲ್ಲಿ ಬಳಸುತ್ತಿದ್ದರು. ಒಟ್ಟಿನಲ್ಲಿ ಈ ಭಾಷೆ ಬೇರೆಯವರಿಗೆ ಅರ್ಥವಾಗದ ರೀತಿಯಲ್ಲಿ ಪ್ರಯೋಗಿಸಲಾಗುತ್ತಿತ್ತು. ಈ ಭಾಷೆಯ ಕೆಲವು ಪದಮಂಜಗಳನ್ನು ಉದಾಹರಣೆಗಾಗಿ ಇಲ್ಲಿ ದಾಖಲಿಸಿದೆ.

**ಕೋಷ್ಟಕ: ೮.೧ ಚೆನ್ನ ದಾಸರ ಮರಗು ಭಾಷೆ**

| ಮರಗು ಭಾಷೆ | ಕನ್ನಡ |
|---|---|
| ನರಜೀವನಮು | ಅನ್ನ |
| ಕುಮಾಯಿ, ಸ್ಯಾವಡಿ | ಊಟ |
| ಪಚ್ಚಾಮು | ಸಾಂಬಾರು |
| ಜಿಗಟಾಲ್ಲು, ಮಿರುಮಳ್ಳು | ಅಕ್ಕಿ, ರಾಗಿ (ಧಾನ್ಯಗಳು) |

| | |
|---|---|
| ಮ್ಯಾಸಾಮು | ಮಾಂಸ |
| ಕಾಜಾಲು | ಮೀನು |
| ಕಂಚಗಾಲು, ಉಲ್ಲಾಮು | ಹಣ |
| ನಲ್ಲನೀಳ್ಳು | ಸಾರಾಯಿ |
| ರೀಕ್ಷಂ | ಹೆಂಡ |
| ಮೀಟಾಮು | ಉಪ್ಪು |
| ಯರಮಂಡ | ಈರುಳ್ಳಿ |
| ಸೇಗ್ತಾ ಉಂಡಾಡು | ಹೋಗುತ್ತಿದ್ದಾನೆ. |
| ಎಲ್ಕೋಡು, ಕಾಪೋಡು | ಗೌಡ |
| ಸುಲ್ಲ | ಹುಡುಗಿ |
| ಸಿರ್‌ಪ್‌ಗಾಡು, ವಂಕಾಡು | ಗಂಡಸು |
| ಸಿರ್‌ಫಾ, ಮಂಕಿ,– | |
| ಮಸಕೋಟಿ, ಸ್ಯಾರಾಮು | ಹೆಂಗಸು |
| ನಾಗನಸುಲ್ಲ | ಕೆಟ್ಟವಳು |
| ಸುಂಟಿಕಾಯಿ | ನಪುಂಸಕ |
| ಸಿಟ್ಲಿಂಗಾಡು, ತಾಹ್‌ರಾ ಸಗಾಡು | ಅಳಿಲು |
| ಮುಕ್ಕರಾಸಗಾಡು | ಹಂದಿ |
| ತಾಬೇಲು, ಮುರುಮುಗಾಡು | ಆಮೆ, ಮುರುಕಾಟಿ |
| ವಲಂಗಾಡು | ಉಡ |
| ಕೀರ್ಗಾಡು | ಕೀರ |
| ಸಪ್ಪಡದಿ, ಕಾಸಂಬಡ್ಡ | ಬೆಕ್ಕು |
| ಬಡಸ್ಯಾ(ಸೆ)ಮ | ದನದಮಾಂಸ |
| ಕೊಕ್ಕಡಾಯಿ | ಕೋಳಿ |
| ಕರಕೋಟ್ಲು | ಒಣಮಾಂಸ |
| ಕೈಕ | ನಾಯಿ |
| ಪಟುಕಲೋಡು | ವಿಶ್ವಕರ್ಮ |
| ಮಿಸ್ಸುಮ್‌ಗಾಡು | ಮುಸ್ಲಿಂ |
| ಜಿಡ್ಡಾಡು | ಕುರುಬ |
| ತೊರ್ರೋಡು | ನಾಯಕ |
| ತೆಣೆಂಗಾಳು | ಬ್ರಾಹ್ಮಣ |
| ಪೇರುಲೇನೋಡು | ಸವಿತ ಸಮಾಜ. |

| | |
|---|---|
| ಮಟ್ಕಾಡು, ಹೀಲ್ಕಾಡು | ಪೋಲಿಸ್. |
| ತ್ಯಾಮಾನ್ನು | ಬಲಶಾಲಿ |
| ಸೊಕ್ಕ, ಕೆಂದಲು | ಬಟ್ಟೆ |
| ಕರವ, ಸ್ಥಾವಡಿ | ಮನೆ |
| ನಾರವಾಣಮು | ತೆಂಗಿನಕಾಯಿ |
| ಸೇಗು | ಹೋಗು |
| ನಾಗನ, ನಚ್ಕೋ | ಸುಮ್ಮನಿರು |
| ನಾಪು | ಕೊಡು |
| ಕ್ಯಮ್ಕೋ | ತಿನ್ನು |
| ಕಾಸಿಗ್ಮು | ದೆವ್ವ |
| ಬರಾಮ | ಮುಚ್ಕೊ, ಸುಮ್ಮನಿರು |
| ಮಿಡುಸ್ಕಾಡು | ಕಳ್ಳ |

ನಾಗರೀಕತೆ ಬೆಳೆದಂತೆ ಟಿವಿ ಸಿನಿಮಾದಂಥ ಆಧುನಿಕ ತಂತ್ರಜ್ಞಾನ ತನ್ನ ಅದಿಪತ್ಯವನ್ನು ಸ್ಥಾಪಿಸಿದರ ಪರಿಣಾಮದಿಂದಾಗಿ ಪಾರಂಪರಿಕ ವೃತ್ತಿಯಾದ ಹಾಡುಗಾರಿಕೆ ಬಯಲಾಟಗಳು ಕ್ಷೀಣಿಸುತ್ತ ಬಂದಂತೆ, ಇವರ ಸಾಂಸ್ಕೃತಿಕ ಬದುಕಿನ ಅವಿಬಾಜ್ಯ ಅಂಗವಾಗಿ ಬೆಳೆಯುತ್ತಿದ್ದ "ಮರುಗು ಭಾಷೆ" ಬಳಕೆಯು ಹೊಸತಲೆಮಾರಿನವರಿಂದ ದೂರವೇ ಉಳಿಯುತ್ತಿದೆ. ಈ ತರಹದ (ಮರುಗು) ಗುಪ್ತ ಭಾಷೆಗಳನ್ನು ಉಳಿಸಲು ಅನುಕೂಲಕರವಾದ ವಾತಾವರಣ ನಿರ್ಮಾಣ ಮಾಡುವ ಅವಶ್ಯಕತೆ ಇಂದು ಇದೆ. ಇವುಗಳನ್ನು ಉಳಿಸಿ ಮುಂದಿನ ಪೀಳಿಗೆಗೂ ಬಳುವಳಿಯಾಗಿ ಕೊಡಲು ಹೆಚ್ಚು ಹೆಚ್ಚು ಸಂಶೋಧನೆ ನಡೆಸುವ ಅಗತ್ಯ ಇದೆ.

**ವ್ಯವಹಾರಿಕ ಮತ್ತು ಪ್ರಾದೇಶಿಕ ಭಾಷೆ**

ಕರ್ನಾಟಕದಲ್ಲಿ ವ್ಯವಹಾರಿಕ ಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ರಾಜ್ಯದ ಹಲವು ಪ್ರಾಂತ್ಯಗಳಲ್ಲಿ ಪ್ರಾಂತೀಯ ಮತ್ತು ಸ್ಥಳೀಯ ಭಾಷೆಗಳು ಬಳಕೆಯಲ್ಲಿದ್ದು ಸಹಜವಾಗಿ ವ್ಯವಹಾರಿಕ ದೃಷ್ಟಿಯಿಂದ ಈ ಸ್ಥಳೀಯ ಭಾಷೆಗಳನ್ನು ಕಲಿತು ವ್ಯವಹರಿಸುತ್ತಿದ್ದಾರೆ.

ಉದಾ: ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕನ್ನಡದೊಂದಿಗೆ ತುಳು ಮತ್ತು ಕೊಂಕಣಿ, ಮಹಾರಾಷ್ಟ್ರದ ಗಡಿಯಲ್ಲಿರುವವರು ಮರಾಠಿ, ಹೈದರಾಬಾದ್, ಕರ್ನಾಟಕ ಭಾಗದಲ್ಲಿರುವವರು ಉರ್ದು ಮತ್ತು ತೆಲುಗು ಭಾಷೆಯನ್ನು ವ್ಯವಹಾರಿಕ ಭಾಷೆಗಳಾಗಿ ಬಳಸುತ್ತಾರೆ.

### ಕೋಷ್ಟಕ: ೮.೨ ಚೆನ್ನ ದಾಸರ ವ್ಯವಹಾರಿಕ ಭಾಷೆ

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ಶರೀರದ ಅಂಗಗಳು | | | |
| ಬುದ್ಧಿಹಲ್ಲು | ಬುದ್ಧಿಪಲ್ಲು | ಕಾಲ್ಬೆರಳು | ಕಾಲುವೇಲು |
| ಕೈಬೆರಳು | ಚೆತವೆಳ್ಳು | ಹೆಬ್ಬೆರಳು | ಯಮಟೆಳ್ಳು |
| ಕಣ್ಣು | ಕನ್ನು, ಕಂಡ್ಲು | ಕರುಳು | ಪೇಗಲು |
| ತುಟಿ | ಪೆದುವುಲು | ಹಿಮ್ಮಡಿ | ಅರಿಕಾಲು |
| ಭುಜ | ಭುಜಮು | ಕಣತಲೆ | ಕಣವುಬುಲು |
| ಸೊಂಟ | ನಡಮು | ಕರ್ಣತಮ್ಮಟೆ | ಸೆವ್ವ ತಮಟ |
| ಮಣಿಕಟ್ಟು | ಮಾಕಲು | ಕಿವಿ | ಶೆವ್ವಲು |
| ಕಂಕಳು | ಸಂಕ | ಮೊಣಕೈ | ಮೊಶ್ಯೆಡಲು |
| ತಲೆಬುರುಡೆ | ತಲಬುರ್ | ಕತ್ತು–ಕುತ್ತಿಗೆ | ಗೊಂತು |
| ಗರ್ಭ | ಗರ್ಭಮೂ | ಗರ್ಭಾಶಯ | ಗರ್ಭಾತೀತ್ |
| ಗಂಟಲು | ಗೊಂತು | ಕೆನ್ನೆಗಳು | ಸೆಂಪುಲು |
| ಗುದ | ಗುದ್ದ | ಮುತ್ರಕೋಶ | ಮೂತ್ರಕೊಶಂ |
| ತೊಡೆ | ತೊಡ | ಮಂಡಿ | ಮಾಕಾಲಿ |
| ಚರ್ಮ | ತೋಲು | ಮೊಲೆ ತೊಟ್ಟು | ಎದೆತೊಟ್ಟು |
| ಮುಖ | ಮುಖಂ | ಎದೆ | ಎದ |
| ಹೊಟ್ಟೆ | ಪಟ್ಟ | ನಾಲಿಗೆ | ನಾಲಹ |
| ಕೀಲು | ಕೀಲು | ಗಲ್ಲ | ಗಲ್ಲಂ |
| ತೋರುಬೆರಳು | ತೋರವೇಳು | ಅಂಗಾಲು | ಅಂಗಾಲು |
| ಅಂಗಳು | ಅಂಗಳು | ಮುಸುಡಿ | ಮೂತಿ |
| ಹಲ್ಲು | ಪಂಡಲು | ಮೆದುಳು | ಮಿದುಳು |
| ಉಗುರು | ಗೋರಲು | ಹೊಳ್ಳೆ | ಹೊಳ್ಳ |
| ಶಿರ | ಶಿರಂ | ಮೂಗು | ಮುಕು |
| ನಾಡಿ | ನಾಡಿ | ಹೊಕ್ಕಳು | ಪಟ್ಟು |
| ಅನ್ನನಾಳ | ಅನ್ನಂನಾಳ | ರೆಪ್ಪೆ | ರೆಪ್ಪ |
| ಪಕ್ಕೆಲುಬು | ಪಕ್ಕೆಲುಬು | ಮೀನಕಂಡ | ಶ್ಯಾಪಖಂಡ |
| ಪಿತ್ತ | ಪಿತ್ತ | ಬೆನ್ನು | ವೆನ್ನು |
| ಉದರ | ಕಡಪು | ಕಣ್ಣುಗುಡ್ಡೆ | ಕಣ್ಣುಗುಡ್ಡ |
| ಮಾಂಸಖಂಡ | ನೆಂದರಖಂಡ | ಪಾದ | ಪಾದುಂ |
| ಶ್ವಾಸಕೋಶ | ಶ್ವಾಸಕೋಶ | ರೆಪ್ಪೆಕೂದಲು | ರೆಪ್ಪಎಂಟಿಕ |
| ಕೂದಲು | ಎಂಟಿಕ | ಭ್ರೂಣ | ಭ್ರೂಣಂ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ಹುಬ್ಬು | ಹುಬ್ಬು | ಮಧ್ಯಬೆರಳು | ಮಧ್ಯವೇಳು |
| ವಸಡು | ಜಂತ | ಮುಷ್ಠಿ | ಮುಷ್ಠಿ |
| ಬಾಯಿ | ನೋರು | ಮೀಸೆ | ಮೀಸಾಮು |
| ನರ | ನರಂ | ಜುಟ್ಟು | ಜಡ |
| ಬೆನ್ನೆಲುಬು | ಪಕ್ಕೆಲಬು | ಹಣೆ | ಹಣೆ |
| ಜೋಲ್ಲು | ಜೋಲ್ಲು | ಶಿಶ್ನ | ಮಡ್ಡ |
| ರಕ್ತ | ರಕ್ತಂ | ಮೂಳೆ | ಎಮಕ |
| ಅಂಗೈ | ಅರಸೈ | ಕತ್ತುಪಟ್ಟಿ | ಗೊಂತುಪಟ್ಟಿ |
| ಹೃದಯ | ಹೃದಯಂ | ಕೈ | ಚೇಯಿ |

**ರೋಗಗಳು ಮತ್ತು ದೇಹದ ಸ್ಥಿತಿಗಳು**

| | | | |
|---|---|---|---|
| ಅಜೀರ್ಣ | ಅಜೀರ್ಣಮು | ಕುರುಡ | ಗುಡ್ಡೊಡು |
| ಅತಿಸಾರ | ಅತಿಸಾರಮು | ಮೇಹರೋಗ | ಮೇಹರೋಗಮು |
| ಅಂಡವಾಯು | ಅಂಡವಾಯುಂ | ಕಣ್ಣೀರು | ಕಣ್ಣೀಳ್ಲು |
| ಆಕಳಿಸು | ಆವಲಿಂಪು | ಕಫ | ಕಫಮು |
| ವಾಂತಿ | ವಾಂತಿಲು | ಕಾಮಾಲೆ | ಗುರುಜುಟ್ಟು |
| ಚಳಿಜ್ವರ | ಸನ್ನಿಜ್ವರ | ಒಕ್ಕಣ್ಣು | ಒಕ್ಕೆನ್ನು |
| ಗೋನುಬೆನ್ನು | ಗೂನುವೇನು | ತೊನ್ನು | ತೊನ್ನು |
| ಮಲಬದ್ಧತೆ | ಮಲಬದ್ಧತ | ಹುಳು | ಪುರುಗ |
| ತುರಿತ | ದುರದ | ಕಜ್ಜಿ | ಗಜ್ಜಿ |
| ಕೆಮ್ಮು | ದಗ್ಗು | ರಕ್ತಹೀನತೆ | ರಕ್ತಹಿನತ |
| ರಕ್ತಸ್ರಾವ | ರಕ್ತಸ್ರಾವಮು | ವಾಯುನೋವು | ವಾಯುನೊಪ್ಪಿ |
| ಗಂಟಲುಕೆರೆತ | ಗೊಂತುತುರಿಕ | ಗಂಟಲುಕಟ್ಟುವುದು | ಗೊಂತುಕಟೆದಿ |
| ಗಡ್ಡೆ | ಗಡ್ಡ | ಮೂಕತೆ | ಮೂಗತನಮು |
| ಬೊಕ್ಕತಲೆ | ಬೊಕ್ಕತಲ | ಗಾಯ | ಗಾಯಂ |
| ತಲೆಸುತ್ತುವುದು | ತಲಸುತ್ತು | ಬೊಜ್ಜುಮೈ | ಬೊಜ್ಜುವಲ್ಲು |
| ಅರ್ಬುದರೋಗ | ಅರ್ಬುದರೊಗಂ | ನೆಗಡಿ | ಪಡಸಮ |
| ಹೊಟ್ಟೆತೊಳಸುವುದು | ಕಡಪ ಕಡಗೆದಿ | ಆರೋಗ್ಯ | ಆರೋಗ್ಯಂ |
| ಉಗುಳು | ಎಂಗಲಿ | ಉಬ್ಬಸ | ಉಬ್ಬಸಂ |
| ನೋವು | ನೊಪ್ಪಿ | ತಲೆನೋವು | ತಲನೊಪ್ಪಿ |
| ಹೊಟ್ಟೆನೋವು | ಕಡಪುನೊಪ್ಪಿ | ಮಲ | ಪಿಯ |
| ತೆಳ್ಳಗಿರುವುದು | ತೆಳ್ಳಗವುನದಿ | ನಿದ್ರಾರೋಗ | ನಿದ್ರಾರೋಗಂ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ನಿದ್ರೆ | ನಿದ್ರ | ನಿದ್ರಾಹೀನತೆ | ನಿದ್ರಾಹೀನತ |
| ಕಲ್ಲು | ರಾಯಿ | ಬೆವರು | ಸೆಮಟ |
| ಹುಚ್ಚು | ಪಿಚ್ಚು | ಮತಿಭ್ರಮಣೆ | ಮತಿಭ್ರಮಣ |
| ಕೀವು | ಸಿಮ | ಬಿಳಿಸೆರಗು | ತೆಲ್ಲಸೆರಗು |
| ಬಾಯಾರಿಕೆ | ದಾಮು | ಮೊಡವೆ | ಗುಳ್ |
| ಮುಲವ್ಯಾದಿ | ಮಲಬದ್ಧಕಲು | ಹುಣ್ಣು | ಪುಂಡು |
| ಬಿಗಿಹಿಡಿತ | ಭದ್ರಂಗಪಟಕು | ಮಚ್ಚೆ | ಮಚ್ಚ |
| ಕ್ಷಯ | ಕ್ಷಯಮು | ಕುಂಟ | ಕುಂಟೊಡು |
| ಸಿಡುಬು | ಅಮವಾರು | ಬಿಳಿತೊನ್ನು | ತೆಲತೊನ್ನು |
| ಧ್ವನಿ | ಸ್ವರಮು | ಬಿಕ್ಕಳಿಕೆ | ಎಕ್ಕಳು |
| **ವೇಷ ಭೂಷಣ** | | | |
| ಅಂಗಿ | ಸೊಕ್ಕ | ಕುಪ್ಪಸ | ರವಿಕ |
| ಟೋಪಿ | ಟೋಪಿ | ಉಣ್ಣೆ | ಉಣ್ಣೆ |
| ಬಟ್ಟೆ | ಬಟ್ಟಲು | ಸೊಂಟಪಟ್ಟಿ | ನಡಮುಪಟ್ಟಿ |
| ಕಂಬಳಿ | ಕೆಂಬಡಿ | ಪ್ಯಾಂಟು | ಪ್ಯಾಂಟು |
| ಮಫ್ಲರ್ | ಮಫ್ಲರ್ | ಲಂಗ | ಲಂಗಾ |
| ದಾರ | ದಾರಂ | ಕಾಲುಚೀಲ | ಕಾಲತಿತ್ತಿ |
| ರೇಷ್ಮೆ | ರೇಷ್ಮಂ | ಉಡಿದಾರ | ಉಡಿದಾರಂ |
| ಸೆರಗು | ಸೆರಗು | | |
| **ಬಾಂಧವ್ಯ** | | | |
| ಅತಿಥಿ | ಸುಟ್ಟಲು | ಅಧ್ಯಾಪಕ | ಅಧ್ಯಾಪಕಡು |
| ಮಾಮ | ಮಾಮ | ಗುರು | ಗುರುವುಲು |
| ಗ್ರಾಹಕ | ಗ್ರಾಹಕಡು | ಚಿಕ್ಕಪ್ಪ | ಪಿನ್ನಪ್ಪ |
| ಶಿಷ್ಯ | ಶಿಷ್ಯಡು | ಜಮೀನ್ದಾರ | ಜಮೀನ್ದಾರಡು |
| ಓರಗಿತ್ತಿ | ತೊಡುಕ್ವಾಡಲು | ದತ್ತುಮಗಳು | ದತ್ತುಕೂತರು |
| ತಾತ | ತಾತಗಾರು | ಅಜ್ಜಿ | ಅವ್ವ |
| ಅಳಿಯ | ಅಲ್ಲುಡು | ಮಿತ್ರ | ಮಿತ್ರುಡು |
| ತಾಯಿಯ ತಂದೆ | ತಾತಡು | ತಾಯಿಯ ತಾಯಿ | ಅವ್ವ |
| ಗಂಡ | ಮೊಗಡು, ಬಾರ್ತ | ಹೆಂಡತಿ | ಪೆಂಡ್ಲಾಮು, ಬಾರ್ಯ |
| ಭಾವಮೈದುನ | ಭಾಮರ್ದಿ | ಸೊಸೆ | ಕ್ವಾಡಲು |
| ತಂದೆ | ತಂಡ್ರಿ, ನಾಯನ | ಮಗ | ಕ್ವಾಡಕು |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ಮಗಳು | ಕೂತರು | ತಂಗಿ | ಶಲ್ಲಲು, ಚೆಲ್ಲಿಲು |
| ಸೋದರ | ತಮ್ಮುಡು | ಸೋದರಮಾವ | ಮ್ಯಾನಮಾಮ |
| ಸೋದರತ್ತೆ | ಮ್ಯಾನಅತ್ತ | ಚಿಕ್ಕಮ್ಮ | ಪಿನ್ನಮ್ಮ |
| ಸಂಬಂಧಿಕ | ವಿಯ್ಯಯಡು | ಬಳಗದವರು | ಸುಟ್ಟಾಳು |

ಮನೆಬಳಕೆ ವಸ್ತುಗಳು

| | | | |
|---|---|---|---|
| ಅಲ್ಮಾರ | ಅಲ್ಮಾರಮು | ಗೋಡೆಯಾಲ್ಮಾರಿ | ಗೋಡೆಯಾಲ್ಮಾರಮು |
| ಒನಕೆ, ಹಾರೆ | ರ್‍ವಾಹಲಿ | ಕೆಂಡ, ಇದ್ದಲು | ಅಗ್ಗಿ ನಿಪ್ಪಲು |
| ಅಗ್ಗಿಷ್ಟಕೆ | ಅಗ್ಗಿಷ್ಟಕ | ಕಬ್ಬಿಣ | ಇನಮು |
| ಸೌಧ | ಕಟ್ಟಲು | ಸೌಟು | ಸವಟು |
| ರೊಟ್ಟಿಡಬ್ಬಿ | ಪಿಂಡಿಡಬ್ಬಮು | ಬಾಚಣಿಗೆ | ದುವ್ವಾನ |
| ಹರಿವಾಣ | ಕುಂಡಲು | ಕುರ್ಚಿ | ಕುರ್ಚಿ |
| ಮುಳ್ಳು ಚಮಚ | ಮುಲ್ಲುಚಂಚಾ | ಬುದ್ಧಿವಂತ | ಪನಾಲು |
| ಜಾಡಿ | ಜಲ್ಲೆಡ | ಚಾಪೆ | ಸಾಪ |
| ಚಮಚ | ಚಂಚಾ | ಜರುಡಿ | ಜಲ್ಲೆಡ |
| ಬೀಗದಕೈ | ತಾಳಮುಚೈ | ಹೊಗೆಗೂಡು | ಪೊಗಗೂಡು |
| ಕೊಡೆ | ಕೊಡ | ಜಾಲಿ | ಮುಂಡ್ಲು |
| ಪರಕೆ | ಮೊರಕ | ಉಯ್ಯಾಲೆ | ಉಯ್ಯಾಲ |
| ಬುಟ್ಟಿ | ಗಂಪ | ಮೇಜು | ಮೇಜಾ |
| ಪೆಟ್ಟಿಗೆ | ಪೆಟ್ಟಿ | ಮುಚ್ಚಳ | ಮೂಸೇದಿ |
| ಬಟ್ಟಲು | ಗಿನ್ನೆ | ಬೀಗ | ತಾಳಮು |
| ತಿಜೋರಿ | ತಿಜೋರಿ | ಒಲೆ | ಪೊಯ್ಯಿ |
| ತಟ್ಟೆ | ತಟ್ಟ | ಕನ್ನಡಿ | ಅದ್ದಂ |
| ಕಡ್ಡಿಪೆಟ್ಟಿಗೆ | ಅಗ್ಗಿಪೆಟ್ಟೆ | ಹಲ್ಲುಕಡ್ಡಿ | ಪೊಂಡಲುಪುಲ್ಲ |
| ಹಲ್ಲುಪುಡಿ | ಪೊಂಡಲುಪುಡಿ | ಹೂದಾನಿ | ಪೂದಾನಿ |
| ಗಡಿಗೆ | ದುತ್ತ | ಮಕ್ಕಳ ಗಾಡಿ | ಪಿಲ್ಲಲಗಾಡಿ |
| ಬತ್ತಿ | ವತ್ತಿ | ಮಂಜುಗಡ್ಡೆ | ಮಂಜುಗಡ್ಡ |

ಆಭರಣಗಳು

| | | | |
|---|---|---|---|
| ಉಂಗುರ | ಉಂಗುರಮು | ಕಡಗ | ಎಂಡಿಗಾಜು |
| ಸರ | ಸರಮು | ಬೆಂಡೋಲೆ | ಕಮುಲು |
| ಬೆಳ್ಳಿ | ಎಂಡಿ | ಬಳೆ | ಗಾಜುಲು |
| ಬೈತಲೆಬಟ್ಟು | ಪಾಪಿಡಿಬಟ್ಟು | ಪದಕ | ಪದಕಮು |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ವಾಲೆ | ಕಮುಲು | ತೋಡೆ | ತೊಡ್ಲು |
| ಡಾಬು | ವಡ್ಡಾಣಂ | ಮಾಣಿಕ್ಯ | ಮಾಣಿಕ್ಯಮು |
| ಮಾಲೆ | ಮಾಲ | ಕಿರೀಟ | ಕಿರೀಟಂ |
| ಹವಳ | ಹವಳಮು | ಮುತ್ತು | ಮುತ್ಯಾಲು |
| ಕಂಠಹಾರ | ಕಂಠಿಹಾರಂ | ಕಾಲುಂಗುರ | ಕಾಲುಂಗ್ರಾಲು |

ವಾದ್ಯಗಳು

| | | | |
|---|---|---|---|
| ಗಂಟೆ | ಗಂಟ | ತಂತಿವಾದ್ಯ | ತಂತಿವಾದ್ಯಮು |
| ಮದ್ದಲೆ | ಮದ್ದಲ | ಮೃದಂಗ | ಮೃದಂಗಮು |
| ತಮಟೆ | ತಮಟ | ತಬಲ | ತಬಲಂ |
| ಶಂಖ | ಶಂಖಮು | | |

ಧಾನ್ಯಗಳು ಮತ್ತು ಖಾದ್ಯಪದಾರ್ಥಗಳು

| | | | |
|---|---|---|---|
| ಕಾಳು, ಧಾನ್ಯ | ಗಿಂಜಲು | ತೊಗರಿಬೆಳೆ | ಕಂದುಬ್ಯಾಳು |
| ಹಿಟ್ಟು | ಪಿಂಡಿ | ಉದ್ದು | ಉದ್ದು |
| ಉಪ್ಪಿನಕಾಯಿ | ಊರುಗಾಯಿ | ಪಲ್ಯ | ಪಲ್ಯಮು |
| ಕಾಫಿ | ಕಾಫಿ | ಅವರೆಕಾಯಿ | ಅನಪಕಾಯಿ |
| ಗೋಧಿ | ಗೋದುಲು | ತುಪ್ಪ | ನೆಯ್ಯಿ |
| ಬಟಾಣಿ | ಬಟಾಣೀಲು | ಕಡಲೆ | ಸೆನಗಲು |
| ರೊಟ್ಟಿ | ರೊಟ್ಟಿ | ಅನ್ನ | ಅನ್ನಮು |
| ಚಹ | ತೀಪುನೀಳು | ಚಪಾತಿ | ಚಪಾತಿಲು |
| ಗೋಂದು | ಗೋಂದು | ಉಪಾಹಾರ | ಉಪಾಹಾರಮು |
| ಅವಲಕ್ಕಿ | ಅಟುಗುಲು | ಸಕ್ಕರೆ | ಚಕ್ಕರ |
| ಹೊಟ್ಟು | ಪೊಟ್ಟು | ಜೋಳ | ಜೊನ್ನಲು |
| ತರಕಾರಿ | ಕೂರಗಾಯಲು | ಎಣ್ಣೆ | ನೂನ |
| ಅಂಬಲಿ | ಕೊರಟ | ಮೊಸರು | ಪೆರಗು |
| ಬೇಳೆಕಾಳು | ಬ್ಯಾಳಗಿಂಜಲು | ಹಾಲು | ಪಾಲು |
| ಬಿಸ್ಕತ್ತು | ಬಿಸ್ಕತ್ತು | ಮುಸಕಿನ ಜೋಳ | ಪಂಡ್ಲುಜೊನ್ನ |
| ಆಹಾರ | ಬೋಜನಮು | ಮಾಂಸ | ನಂಜರ |
| ಭತ್ತ | ವಡ್ಲು | ರಾತ್ರಿ ಊಟ | ರೈಬೋಜನಮು |
| ದನದ ಮಾಂಸ | ಎದ್ದನಂಜರ | ಕುರಿ ಮಾಂಸ | ಗೊರ್ರೆ ನಂಜರ |
| ಹಂದಿ ಮಾಂಸ | ಪಂದಿ ನಂಜರ | ಕಲ್ಲುಸಕ್ಕರೆ | ಕಲ್ಲುಸಕ್ಕರ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| **ಸಂಬಾರ ಪದಾರ್ಥಗಳು** | | | |
| ಶುಂಠಿ | ಶುಂಠಿ | ಏಲಕ್ಕಿ | ಏಲಕ್ಕಿ |
| ಕರ್ಪೂರ | ಕರ್ಪೂರಮು | ನೆಲ್ಲಿಕಾಯಿ | ನೆಲ್ಲಿಕಾಯಿಲು |
| ಕರಿಜೀರಿಗೆ | ಕರಿಜೀರಿಗ | ಮೆಣಸು | ಮಿರುಪುಗಿಂಜಲು |
| ಜಾಪತ್ರೆ | ಜಾಪತ್ರಲು | ಜೀರಿಗೆ | ಜೀರಿಗ |
| ತುಳಸಿ | ತುಳಸಿ | ಮೆಣಸಿನಕಾಯಿ | ಮಿರುಪುಕಾಯಿ |
| ಅಡಿಕೆ | ವಕ್ಕ | ಅರಿಶಿನ | ಅರಿಶಿನಮು |
| **ಮರಗಳು ಮತ್ತು ಅವುಗಳ ಭಾಗಗಳು** | | | |
| ಸೀಬೆಹಣ್ಣಿನ ಮರ | ಜಿಪಕಾಯಿಮಾನು | ಮಾವಿನ ಮರ | ಮಾವಿಡಮಾನು |
| ಹುಣಿಸೇ ಮರ | ಸಿಂತಮಾನು | ಮರ | ಮಾನು |
| ಮುಳ್ಳು | ಮುಂಡ್ಲು | ಕಲ್ಲು | ರಾಳ್ಲು |
| ಆಲದಮರ | ಪಾಲುಮಾನು | ಜಾಲೀಗಿಡ | ಮುಂಡ್ಲುಮಾನು |
| ಬೀಜ | ಹಿತಲು | ಕೊಂಬೆ | ಕೊಂಬ |
| ಕಾಂಡ | ಕಾಂಡಮು | ನಾರು | ನಾರು |
| ಎಲೆ | ಆಕು | ಹೂವು | ಪೂವ |
| **ಹೂವುಗಳು, ಹಣ್ಣುಗಳು, ಮತ್ತು ತರಕಾರಿಗಳು** | | | |
| ಮಾವು | ಮಾವಿಡ | ಕಬ್ಬು | ಸೆರಕು |
| ಸೌತೆಕಾಯಿ | ದ್ರಾಸಕಾಯಿ | ಅಲುಗೆಡ್ಡೆ | ಉರಳಗಡ್ಡೆ |
| ಹುಣಸೆ ಹಣ್ಣು | ಸಿಂತಪಂಡು | ಕುಂಬಳ ಕಾಯಿ | ಗುಮ್ಮಡಕಾಯಿ |
| ಹಲಸಿನ ಹಣ್ಣು | ಪಣಸಪಂಡು | ಹಾಗಲ ಕಾಯಿ | ಕಾಕರಕಾಯಿ |
| ಬಾಳೆಹಣ್ಣು | ಬಾಳೆಪಂಡು | ಸೋರೆಕಾಯಿ | ಸ್ವಾರಕಾಯಿ |
| ಖರ್ಜೂರ | ಖರ್ಜೂರಮು | ಕಲ್ಲಂಗಡಿ | ಕಲ್ಲಂಗಡಿಪಂಡು |
| ಕೆಂಪುಮೂಲಂಗಿ | ಎರ್ರಮುಲ್ಲಂಗಿ | ಸೇವಂತಿಗೆ | ನಾವಂತಿಪೂವು |
| ಗುಲಾಬಿ | ಗುಲಾಬಿ | ಹುಲ್ಲು | ಕಸುವು |
| ಮಲ್ಲಿಗೆ | ಮಲ್ಲಿ | ಸಂಪಿಗೆ | ಸಂಪಿ |
| ಸಪೋಟಾ | ಸಪೋಟ | ತಂಬಾಕು | ವಕ್ಕಾಕು |
| ತೆಂಗಿನಕಾಯಿ | ತೆಂಗಕಾಯಿ | ವೀಳ್ಯದೆಲೆ | ಆಕು |
| ಪುದೀನಾ | ಪುದೀನಾ | ಈರುಳ್ಳಿ | ಯರಗಡ್ಡ |
| ಹೂಕೋಸು | ಪೂ ಕೂಸು | ಬಾದಾಮಿ | ಬಾದಾಮಿ |
| ಸೇಬು | ಸೇಬು | ಕಿತ್ತಳೆ | ಕಿತ್ತಳೆ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| **ಕಟ್ಟಡ ಮತ್ತು ಅದರ ಭಾಗಗಳು** | | | |
| ಅಸ್ಪತ್ರೆ | ಅಸ್ಪತ್ರ | ಕಟ್ಟಡ | ಕಟ್ಟಡಲು |
| ಕೋಣೆ | ಮೂಲ್ಲಿಲು | ಕಿಡಕಿ | ಕಿಟಿಕಿಲು |
| ಮಾಳಿಗೆ | ಮೇಡ | ಗುಡಿಸಲು | ಕಸುವುಇಲ್ಲು |
| ಬಾಗಿಲು | ವಕಾಲಿ | ಹೊಸ್ತಿಲು | ಗಡಪ |
| ಕಲ್ಲು | ರಾಯಿ | | |
| **ಪ್ರಾಣಿಗಳು** | | | |
| ಒಂಟೆ | ಒಂಟ | ನಾಯಿ | ಕುಕ್ಕ |
| ಹೆಣ್ಣು ನಾಯಿ | ಪೆಂಟಿಕುಕ್ಕ | ಹೇಸರಗತ್ತೆ | ಗಾಡದಿ |
| ಹಸು | ಆವು | ಅಳಿಲು | ಉಡತ |
| ಖಡ್ಗಮೃಗ | ಖಡ್ಗಮೃಗಮು | ಕುದುರೆ | ಗುರುಮು |
| ಹೆಣ್ಣು ಕುದುರೆ | ಪೆಂಟಿಗುರುಮು | ಚಿರತೆ | ಮುಟ್ಟಾಗಾಡು |
| ಮುಂಗಸಿ | ಯಂಟಿವ | ಬಾಲ | ತ್ವಾಕ |
| ಪಶು | ಗೊಡ್ಲು | ನಾಯಿಮರಿ | ಕುಕ್ಕಪಿಲ್ಲ |
| ಮೇಕೆ | ಮ್ಯಾಹ | ಮೇಕೆ(ಗಂಡು) | ಪೋತು |
| ಕರು | ದೂಡ | ಬೆಕ್ಕು | ಪಿಲಕುನ |
| ಮೇಕೆಮರಿ | ಮ್ಯಾಕಪಿಲ್ಲ | ಕುದುರೆಮರಿ | ಗುರುಮುಪಿಲ್ಲ |
| ಬೆಕ್ಕಿನ ಮರಿ | ಪಿಲಕುನಪಿಲ್ಲ | ಕೋತಿ | ಕೋತಿ |
| ವಾನರ | ವಾನರಡು | ಹುಲಿ | ಪುಲಿ |
| ಎತ್ತು | ಎದ್ದುಲು | ಕರಡಿ | ಎಲುಗಬಂಟಿ |
| ತೋಳ | ತೊಡೇಲು | ಎಮ್ಮೆ | ಎನಮು |
| ಇಲಿ | ಯೆಲಕ | ನರಿ | ನಕ್ಕ |
| ಬೇಟೆನಾಯಿ | ಯಾಟಕುಕ್ಕ | ಮುಳ್ಳುಹಂದಿ | ಮುಲ್ಲುಪಂದಿ |
| ಆನೆ | ಏನಗ | | |
| **ಹುಳುಗಳು ಮತ್ತು ಕೀಟಗಳು** | | | |
| ಹೆಬ್ಬಾವು | ದಾಸಪಾಮು | ನಾಗರಹಾವು | ನಾಗಪಾಮು |
| ಎರೆಹುಳು | ಯಾರಪುರುಗ | ಏಡಿ | ಯಂಡ್ರಕಾಯಿ |
| ತಿಗಣೆ | ನಲ್ಲುಲು | ಜೀರುಂಡೆ | ಜಿರ್ರಪುರುಗ |
| ಹಲ್ಲಿ | ಪಲ್ಲಿ | ವಿಷ | ವಿಷಂ |
| ಹೇನು | ಪೇನು | ಚಿಟ್ಟೆ | ರೆಕ್ಕೆಪುರುಗ |
| ಗಜ್ಜಲ | ಸೆದ್ದಲು | ಚೇಳು | ತೇಲು |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ನೋಣ | ಹೀಗ | ಜೇಡ | ಜಾಡ |
| ಸೊಳ್ಳೆ | ದೋಮ | ಮೀನು | ಚಾಪಲು |
| ಕಪ್ಪೆಮರಿ | ಕಪ್ಪಪಿಲ್ಲ | | |
| **ಹಕ್ಕಿಗಳು** | | | |
| ಮೊಟ್ಟೆ | ಗುಡ್ಡ | ಗೂಬೆ | ಗೂಬ |
| ಪಾರಿವಾಳ | ಪಾರಿವಾಳಮು | ಕೋಗಿಲೆ | ಕೋಕಿಲ |
| ಕಾಗೆ | ಕಾಕ | ಹದ್ದು | ಗದ್ದ |
| ರಣಹದ್ದು | ಗ್ರದ್ದ | ಗುಬ್ಬಚ್ಚಿ | ಪಿಟ್ಟಲು |
| ಗೂಡು | ಗೂಡು | | |
| **ಸಂಖ್ಯೆಗಳು** | | | |
| ಒಂದು | ಒಗಟಿ | ಎರಡು | ರೆಂಡು |
| ಮೂರು | ಮೂಡು | ನಾಲ್ಕು | ನಾಲ್ಗು |
| ಐದು | ಐದು | ಆರು | ಆರು |
| ಏಳು | ಏಡು | ಏಂಟು | ಎನಮದಿ |
| ಒಂಭತ್ತು | ತೊಂಬಿದಿ | ಹತ್ತು | ಪದಿ |
| ಹನ್ನೋಂದು | ಪದಕೊಂಡು | ಹನ್ನೆರೆಡು | ಪನ್ನೆಂಡು |
| ಹದಿಮೂರು | ಪದಮೂಡು | ಹದಿನಾಲ್ಕು | ಪದನಾಲ್ಗು |
| ಹದಿನೈದು | ಪದಿನೈದು | ಹದಿನಾರು | ಪದಿನಾರು |
| ಹದಿನೇಳು | ಪದೆಏಡು | ಹದಿನೆಂಟು | ಪದ್ನೆನೆಮಿದಿ |
| ಹತ್ತೋಂಭತ್ತು | ಪತ್ತೊಂಬಿದಿ | ಇಪ್ಪತ್ತು | ಇರವೈ |
| ಮೂವತ್ತು | ಮುಪ್ಪೈ | ನಲವತ್ತು | ನಲಪೈ |
| ಐವತ್ತು | ಯಬೈ | ಆರವತ್ತು | ಆರವೈ |
| ಎಪ್ಪತ್ತು | ಡೆಬ್ಬೈ | ಎಂಭತ್ತು | ಎಂಬೈ |
| ತೊಂಭತ್ತು | ತೊಂಬೈ | ನೂರು | ಒಕನೂರು |
| ಒಂದುಸಾವಿರ | ಒಕವೆಯ್ಯಿ | ಹತ್ತುಸಾವಿರ | ಪದಿವೆಯ್ಯಿ |

**ಲಿಪಿಯ ಬಳಕೆ :** ಕರ್ನಾಟಕದಲ್ಲಿ ತಲೆಮಾರುಗಳಿಂದ ನೆಲೆಸಿರುವುದರಿಂದ ಕನ್ನಡ ಭಾಷೆಯ ಲಿಪಿಯನ್ನು ಬಳಸುತ್ತಾರೆ. ತೆಲುಗು ಭಾಷೆಯ ಲಿಪಿಯೂ ಇವರಿಗೆ ತಿಳಿದಿದೆ.

೯

# ಪ್ರದರ್ಶಕ ಕಲೆಗಳು

## ಜನಪದ ನೃತ್ಯ

ಈ ಮೊದಲು ಸಮುದಾಯದವರಲ್ಲಿ ಹೆಂಗಸರ ನೃತ್ಯಗಳೇ ಹೆಚ್ಚಿಗಿದ್ದವು. ಇಂದು ನಾಗರೀಕತೆಯ ಗಾಢ ಪ್ರಭಾವಕ್ಕೆ ಈ ಸಮುದಾಯ ಒಳಗಾಗಿರುವುದರಿಂದ ಅಂಥ ನೃತ್ಯಗಳು ಈಗ ಕಂಡು ಬರುವುದಿಲ್ಲ. 'ದಾಸರಾಟ'ದ ದಾಸರು ಈಗಲೂ ಒಂದು ಪಿಟೀಲು, ತಬಲಾ ತೆಗೆದುಕೊಂಡು ಒಬ್ಬ ಗಂಡಸು ಮೂರ್‍ನಾಲ್ಕು ಜನ ಹೆಂಗಸರು ಸೇರಿ ಹಾಡು ಹಾಡುತ್ತ ಕುಣಿದು ಖುಷಿ ತೆಗೆದುಕೊಂಡು ಬರುವುದಿದೆ. ಇದಕ್ಕೆ ಹಂಸನೂರಿನ ದಾಸರಾಟದ ತಂಡವನ್ನು ಹೆಸರಿಸಬಹುದು. ಅದೂ ಕೂಡ ವಿಶೇಷ ಸಂದರ್ಭಗಳಲ್ಲಿ ಮಾತ್ರ. ಅದಕ್ಕೂ ಈಗ ಬೆಲೆಯಿಲ್ಲದಂತಾಗಿದೆ.

ಉತ್ತರ ಕರ್ನಾಟಕದಲ್ಲಿ ಬೇಸಿಗೆಯ ಬೆಳದಿಂಗಳಲ್ಲಿ ಯುವತಿಯರು ತಮ್ಮ ಓಣಿಯ ವಿಶಾಲ ಅಂಗಳದಲ್ಲಿ ರಂಗೋಲಿ ಹಾಕಿ ಅದರ ಸುತ್ತ ಕೋಲಾಟ ಆಡುತ್ತಿದ್ದರು. ಜೊತೆಗೆ ಹಾಡು ಹೇಳುತ್ತಿದ್ದರು. ಅದು ಈಗ ಇಲ್ಲವಾಗಿದೆ. ಗಂಡಸರು ಜಾತ್ರೆ ಮತ್ತು ಮದುವೆಯ ಮೆರವಣಿಗೆ ಸಂದರ್ಭದಲ್ಲಿ 'ಮರಗಾಲು ಕುಣಿತ" ಮಾಡುತ್ತಿದ್ದರು. ಮರದ ರೆಂಬೆಗಳಿಂದ ಮಾಡಿದ ಒಂದೂವರೆ, ಎರಡು ಘೂಟಿನ ಕಾಲುಗಳನ್ನು ಕಟ್ಟಿಕೊಂಡು, ಕುದುರೆ, ನವಿಲು, ಗರುಡ, ಹಾವಿನ ವೇಷ ಹಾಕಿ ರಣಹಲಗೆಯ ಮತ್ತು ಕೈತಾಳದ ತಾಳಕ್ಕೆ ತಕ್ಕಂತೆ ಕುಣಿಯುತಿದ್ದರು. ಅದು ಕೂಡ ಇಲ್ಲವಾಗಿದೆ.

ಕೋಲಾರದ ಭಾಗದಲ್ಲಿ ಗಂಡಸರ ಮತ್ತು ಹೆಂಗಸರ ಕೆಲವು ನೃತ್ಯ ಪ್ರಕಾರಗಳು ಇರುವುದಾಗಿ ತಿಳಿದು ಬರುತ್ತದೆ. ಗಂಡಸರು ಮಳೆಗಾಗಿ ಪ್ರಾರ್ಥಿಸಿ ಕುಣಿಯುವ ವಾಡಿಕೆಯಿದೆ. ಮನೆಗೆ ಒಬ್ಬರಂತೆ ಗಂಡಸರೆಲ್ಲ ಸೇರಿ, ಭುಜದ ಮೇಲೆ ಒಂದೊಂದು ಕೊಡ ನೀರನ್ನು ಬಾವಿಯಿಂದ ಹೊತ್ತುಕೊಂಡು ಭಜನೆ ಮಾಡುತ್ತ ಕುಣಿಯುತ್ತ ಬರುತ್ತಾರೆ. 'ವೆಂಕಟರಮಣ ಗೋವಿಂದ' ಎಂದು ಉಗ್ಘಡಿಸುತ್ತ ಅದಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಕುಣಿಯುತ್ತ ಗಂಗಮ್ಮನ ಗುಡಿಗೆ ಬಂದು ಕೊಡ ಅಥವಾ ಬಿಂದಿಗೆಗಳಲ್ಲಿನ ನೀರನ್ನು ಗಂಗಮ್ಮನ ಮೇಲೆ ಸುರಿದು, ಮಳೆ ಸುರಿಸುವಂತೆ ಕೇಳಿಕೊಳ್ಳುತ್ತಾರೆ. ಶ್ರಾವಣ ಮಾಸದ ಸಂದರ್ಭದಲ್ಲಿ ಬೇವಿನ ಎಲೆ ಮತ್ತು ಬೆಲ್ಲದ ಮಿಶ್ರಣದ ಉಂಡೆಗಳನ್ನು ದೇವರ ಮುಂದೆ ಇಟ್ಟು, ಅದನ್ನು ಎತ್ತುವ ಕಾರ್ಯದಲ್ಲಿಯೂ ಇದೇ ಬಗೆಯ

ಗಂಡಸರ ಕುಣಿತವಿದೆ. ಹೆಂಗಸರು ಹಬ್ಬ ಮತ್ತು ಮದುವೆ ಸಂದರ್ಭದಲ್ಲಿ ಕೋಲಾಟ ಮತ್ತು ಇತರ ಕುಣಿತಗಳನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಹಲಗೆಯನ್ನು ಕುಣಿತದ ವಾದ್ಯವನ್ನಾಗಿ ಬಳಸುತ್ತಾರೆ. ಸಂಕ್ರಾಂತಿ ಹಬ್ಬದ ದಿನ ಸೆಗಣಿಯ ಗುಳ್ಳವ್ವನನ್ನು ಮಾಡಿ, ಅದಕ್ಕೆ ಪೂಜೆ ಸಲ್ಲಿಸಿ ಅದನ್ನು ಗಂಪೆಯಲ್ಲಿ ಇಟ್ಟುಕೊಂಡು ಐದಾರು ಜನ ಹೆಂಗಸರು "ಗಬ್ಬಿಯಾಳು ನಿನ್ನ ಗಂಡ, ನನ್ನ ಗಂಡ ಕಲ್ಲನಮಕ್ಕಳೆ" ಎಂದು ಜೋರಾಗಿ ಹಾಡು ಹೇಳುತ್ತ ಗತಿಗೆ ತಕ್ಕಂತೆ ಕುಣಿಯುತ್ತ ಮನೆಮನೆಗೆ ಹೋಗಿ ಅಕ್ಕಿಯನ್ನು ಸಂಗ್ರಹಿಸುವರು. ಅದನ್ನು ಮಾರಿ, ಅದರಿಂದ ಬಂದ ಹಣದಿಂದ ಅಡುಗೆಯ ಪದಾರ್ಥಗಳನ್ನು ಕೊಂಡು ಊರವರಿಗೆಲ್ಲಾ ಅಂದು ರಾತ್ರಿ ಊಟ ಹಾಕುತ್ತಾರೆ. ಈಗೀಗ ಇಂಥ ನೃತ್ಯಗಳೂ ಕಡಿಮೆಯಾಗುತ್ತಿವೆ.

### ಮೇಳ

ಈ ಸಮುದಾಯದ ಕಲಾ ತಂಡಗಳಿಗೆ ಒಂದು ಪರಂಪರೆಯೇ ಇದೆ. 'ದಾಸರಾಟ'ದ ಮೇಳಗಳು, 'ತಂಬೂರಿ' ಮೇಳಗಳು, 'ಶ್ರೀಕೃಷ್ಣ ಪಾರಿಜಾತ'ದ ಮೇಳಗಳು, 'ಭಜನಾ'ದ ಮೇಳಗಳು ಪ್ರಮುಖವಾದವುಗಳಾಗಿವೆ. ಈ ಎಲ್ಲ ಮೇಳಗಳೂ ಇಂದು ಸಕ್ರೀಯವಾಗಿರ ದಿದ್ದರೂ ಪೂರ್ತಿಯಾಗಿ ಕಣ್ಮರೆಯಾಗಿಲ್ಲ.

ಬಯಲಾಟ : ಮೈಸೂರು ಭಾಗ ಮತ್ತು ಹೈದರಾಬಾದ ಕರ್ನಾಟಿಕ ಭಾಗದಲ್ಲಿ ಬಯಲಾಟಗಳನ್ನು ಪ್ರದರ್ಶಿಸಿ ಉಪಜೀವನ ನಡೆಸುವ ಬಯಲಾಟದ ತಂಡಗಳು ಇನ್ನೂ ಸಾಕಷ್ಟು ಸಂಖ್ಯೆಯಲ್ಲಿವೆ. ಇವರಲ್ಲಿ ಬಯಲಾಟ ಕಲಿಸುವ 'ಬಯಲಾಟದ ಮಾಸ್ತರರು' ಇದ್ದಾರೆ. ಈ ಸಮುದಾಯದ ಬಯಲಾಟಗಳಲ್ಲಿ ನುರಿತ ಕಲಾವಿದರು, ಸಂಗೀತ ಪಂಡಿತರು ಇರುವುದು ಇವುಗಳ ಹೆಗ್ಗಳಕೆಯಾಗಿದೆ. ಪೌರಾಣಿಕ ಮತ್ತು ಸಾಮಾಜಿಕ ನಾಟಕಗಳನ್ನು ಈಗಲೂ ಆಡುವ ಬಯಲಾಟದ ಮೇಳಗಳಿವೆ. ಉದಾಹರಣೆಗೆ ಹೆಸರಿಸುವುದಾದರೆ, ದಾವಣಗೆರೆ ಜಿಲ್ಲೆಯ ಜರಿಕಟ್ಟೆಯ ದುರುಗೋಜಪ್ಪ ಹನುಮಂತಪ್ಪ ಪೂಜಾರಿ (ವಯಸ್ಸು ೫೫) ಇವರ ಮೇಳದಲ್ಲಿ ಕುರುಕ್ಷೇತ್ರ, ರೇಣುಕಾ ಯಲ್ಲಮ್ಮ, ಮಾರುತಿ-ಕರ್ಣ, ಸಾವು ತಂದ ಸೌಭಾಗ್ಯ, ಕುಡುಕ ಕಟ್ಟಿದ ತಾಳಿ- ಮುಂತಾದ ಬಯಲಾಟಗಳನ್ನು ಆಡುತ್ತಾರೆ.

ಚನ್ನಗಿರಿ ತಾಲೂಕಿನ ರಂಗಪ್ಪ ಭೀಮಪ್ಪ ತಾವಣಗಿ (ವಯಸ್ಸು ೭೫) ಇವರ ಮೇಳದಲ್ಲಿ ಕರಿಬಂಟ, ಪುಂಡರೀಕಾಕ್ಷ, ಶಶಿರೇಖಾ ಪರಿಣಯ, ಕಂಸಾಶೂರನ ಕಥೆ - ಮುಂತಾದ ಬಯಲಾಟಗಳನ್ನು ಆಡುತ್ತಾರೆ.

ರಾಯಚೂರು ಜಿಲ್ಲೆಯಲ್ಲಿ ಜಾಲಪೂರದ ಗೋಪಾಲಪ್ಪ , ಗಬ್ಬೂರಿನ ನಾರಾಯಣಪ್ಪ ದೇವದುರ್ಗದ ಸಣ್ಣಯ್ಯ, ಹೂಗನಹಳ್ಳಿಯ ಸಣ್ಣಬಾಬಣ್ಣ ಈ ಮುಂತಾದವರ ಬಯಲಾಟ-ನಾಟಕ ಮೇಳಗಳಿವೆ. ಈ ಮೇಳಗಳಲ್ಲಿ ವಿರೋಚನಾ, ಭಸ್ಮಾಸುರ, ರತಿ ಕಲ್ಯಾಣ, ಸತ್ಯವ್ರತ ಅಲ್ಲದೇ ಸಾಮಾಜಿಕ ಆಟಗಳನ್ನು ಆಡುತ್ತಾರೆ. ಹಾಗೆಯೇ ಬಿಜಾಪೂರ ಜಿಲ್ಲೆಯ 'ಶ್ರೀಕೃಷ್ಣ ಪಾರಿಜಾತ' ಮೇಳದ ದಶವಂತರು, ಬಾಗಲಕೋಟ ಜಿಲ್ಲೆಯ

'ದಾಸರಾಟ'ದ ಮೇಳದವರು, ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಬಯಲಾಟದವರು ಪ್ರಮುಖ ಮೇಳ ಕಲಾವಿದರಾಗಿರುವರು.

ತಂಬೂರಿ: ತಂಬೂರಿಯನ್ನು ಒಬ್ಬರೇ ನುಡಿಸಿ ಹಾಡಬಹುದಾದರೂ ಮೊದಲಿನಿಂದಲೂ ಮೇಳಗೂಡಿ ಭಿಕ್ಷೆಗೆ ಹೋಗುವ ತಂಬೂರಿ ಕಲಾವಿದರು ಇದ್ದುದಾಗಿ ತಿಳಿದು ಬರುತ್ತದೆ. ಕನ್ನಡದ ಹರಿದಾಸ ಸಾಹಿತ್ಯದಲ್ಲಿ ಇದಕ್ಕೆ ಅನೇಕ ನಿದರ್ಶನಗಳು ದೊರೆಯುತ್ತವೆ. (ಇದೇ ಕೃತಿಯ ಜನಪದ ವಾದ್ಯ ವಿಭಾಗದಲ್ಲಿ ಮಾಹಿತಿ ನೀಡಲಾಗಿದೆ.) ಅನೇಕ ಇಂಗ್ಲೀಷ ವಿದ್ವಾಂಸರು ಈ ಕುರಿತು ಬರೆದಿರುವರು. ಈ ಮೇಳದಲ್ಲಿ ಕನಿಷ್ಟ ಮೂರು ಜನರಾದರೂ ಇರುತ್ತಾರೆ. ಒಬ್ಬರು ತಂಬೂರಿ ಬಾರಿಸುತ್ತಾ ಹಾಡುತ್ತಿದ್ದರೆ ಮತ್ತೊಬ್ಬರು ಜಾಗಟೆ, ಇನ್ನೊಬ್ಬರು ಶಂಖ ನುಡಿಸುತ್ತಿರುತ್ತಾರೆ. ಸಾಮಾನ್ಯವಾಗಿ ಭಿಕ್ಷೆಗೆ ಗೋಪಾಳಬುಟ್ಟಿ, ಭಿಕ್ಷೆಯ ಸಂಕೇತವಾಗಿ ಗರುಡ ಗಂಬ ಜೊತೆಯಲ್ಲಿ ಒಯ್ಯುತ್ತಾರೆ. ಈ ತಂಬೂರಿ ಕಲಾವಿದರು ಹೆಚ್ಚಾಗಿ ತತ್ವಪದಗಳನ್ನು ಹಾಡುವುದರಿಂದ ಇವರನ್ನು ತತ್ವಪದಕಾರರೆಂದೂ ಗುರುತಿಸುತ್ತಾರೆ. ಇವರಲ್ಲಿ ಕೊಪ್ಪಳ ಜಿಲ್ಲೆಯ ತುಮ್ಮರಗುದ್ದಿಯ ಮಾರೆಪ್ಪ ದಾಸರ, ಬದಾಮಿ ತಾಲೂಕಿನ ತುಳಸಿಗೇರಿಯ ವೆಂಕಪ್ಪ ದಾಸರ, ಗುಳೇದಗುಡ್ಡದ ಕೃಷ್ಣಪ್ಪ ವಾರದ, ಹುಕ್ಕೇರಿ ತಾಲೂಕಿನ ಅರ್ಜುನವಾಡದ ಯಲ್ಲಪ್ಪ ಹನುಮಂತ ಹುಲ್ಲೆನ್ನವರ, ಹಂಚಿನಾಳದ ಗೋವಿಂದಪ್ಪ ಕೃಷ್ಣಪ್ಪ ದಾಸರ, ಅಡ್ನೂರಿನ ತುಳಸಪ್ಪ ದಾಸರ, ಧಾರವಾಡ ಜಿಲ್ಲೆಯ ಗಿರಿಯಾಲದ ಪುಲಿ ವೆಂಕಪ್ಪ ದಾಸರ ಇನ್ನೂ ಮುಂತಾದ ಮೇಳ ಕಲಾವಿದರನ್ನು ಹೆಸರಿಸಬಹುದು. ಇವರು ಮುಖ್ಯವಾಗಿ ಹರಿದಾಸರ ಕೀರ್ತನೆಗಳನ್ನು ಹಾಡುವರು. ಅಲ್ಲದೇ ಅವುಗಳ ಜೊತೆಗೆ ಕಡಕೋಳ ಮಡಿವಾಳಪ್ಪ, ನಿಜಗುಣ ಶಿವಯೋಗಿ, ಶಿಶುನಾಳ ಶರೀಫ ಮತ್ತು ಜನಪದ ಗೀತೆಗಳಲ್ಲಿನ ತತ್ವಪದಗಳನ್ನು ಹಾಡುತ್ತಾರೆ. ಇವರಲ್ಲಿನ ಬಹುತೇಕ ಕಲಾವಿದರು ರಾಜ್ಯಮಟ್ಟದ ಪ್ರಶಸ್ತಿಗಳನ್ನು ಪಡೆದವರಾಗಿದ್ದಾರೆ.

ತುಮ್ಮರಗುದ್ದಿಯ ಮಾರೆಪ್ಪ ಮಾರೆಪ್ಪ ದಾಸರ ಈ ಸಮುದಾಯದ ಬಹುದೊಡ್ಡ ತತ್ವಪದಕಾರರು. ಈಗಲೂ ಬಹು ಬೇಡಿಕೆಯಲ್ಲಿರುವ ಜನಪದ ಗಾಯಕರು. ದಾಸರ ಪದಗಳು, ಶರಣರ ಪದಗಳು, ಶಿಶುನಾಳ ಶರೀಫ್ ಮತ್ತು ಜನಪದ ತತ್ವಪದಗಳನ್ನುಆಕಾಶವಾಣಿ ಮತ್ತು ದೂರದರ್ಶನದಲ್ಲಿ, ಸರಕಾರದ ಮತ್ತು ಇತರ ಸಾರ್ವಜನಿಕ ಸಂಘಟನೆಗಳ ವೇದಿಕೆಗಳಲ್ಲಿ ಹಲವಾರು ಬಾರಿ ಹಾಡುಗಾರಿಕೆಯ ಕಾರ್ಯಕ್ರಮ ನೀಡಿದ್ದಾರೆ. ಕಂಚಿನ ಕಂಠದ ಈ ಗಾಯಕನಿಗೆ ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಅನೇಕ ಪ್ರಶಸ್ತಿಗಳು ಸಂದಿವೆ. ಬಾನಂದೂರು ಕೆಂಪಯ್ಯ ಮತ್ತು ಇತರ ಅನೇಕ ಕಲಾವಿದರಿಗೆ ಸ್ಫೂರ್ತಿಯಾಗಿಯೂ ಪ್ರಭಾವಿಸಿದ್ದಾರೆ. ಪಂಡಿತ್ ಮಲ್ಲಿಕಾರ್ಜುನ ಮನಸೂರಂತವರು ಇವರ ಹಾಡುಗಾರಿಕೆಯನ್ನು ಕೇಳಿ ಮೆಚ್ಚಿಕೊಂಡಿದ್ದಾರೆ.

ತುಂಬಾ ಸ್ವಾಭಿಮಾನಿಯಾದ ಮಾರೆಪ್ಪ ದಾಸರ ಸರಕಾರದ ಉನ್ನತ ಪ್ರಶಸ್ತಿ ಪುರಸ್ಕೃತರಾದರೂ ಸರಕಾರದ ಯಾವುದೇ ಸವಲತ್ತಿನ ಹಿಂದೆ ಬೀಳದೆ, ಈಗಲೂ

ತನ್ನ ಸಮುದಾಯ ಚೆನ್ನದಾಸರೊಂದಿಗೆ ಗುಡಾರದಲ್ಲಿ ಆರ್ಥಿಕವಾಗಿ ಕಡುಬಡತನದಲ್ಲಿ ಬದುಕುತ್ತಿದ್ದಾರೆ.

ಭಜನೆ : ಈ ಸಮುದಾಯದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಮೇಳ ವೆಂದರೆ ಭಜನಾ ಮೇಳ. ಭಜನೆಯಲ್ಲಿ ಪ್ರಮುಖ ಎರಡು ಪ್ರಕಾರಗಳಿವೆ. ಒಂದು ಹರಿಭಜನೆ –ಇದು ವಿಷ್ಣುಪರವಾದುದು. ಇನ್ನೊಂದು ಹರಭಜನೆ– ಇದು ಶಿವಪರ ವಾದುದು. ಚೆನ್ನದಾಸರ ಸಮುದಾಯದವರು ವಿಷ್ಣುಪರವಾದ ಹರಿಭಜನೆ ಪರಂಪರೆಗೆ ಸೇರಿದವರು. ಆದರೂ ಇವರಲ್ಲಿ ಹರಭಜನೆಯ ಪರಂಪರೆಯ ಪದಗಳನ್ನು ಹಾಡುವವರೂ ಇರುವರು. ಈ ಭಜನಾ ಮೇಳದ ಕಲಾವಿದರು ಎಲ್ಲಾ ಜಿಲ್ಲೆಗಳಲ್ಲಿಯೂ ಇರುವರು. ಇವರಲ್ಲಿ ರಾಯಚೂರು ಜಿಲ್ಲೆಯ ಶ್ರೀ ಪಿಟೀಲು ಯಂಕಪ್ಪ ಗಬ್ಬೂರ, ಗುಲಬುರ್ಗಾ ಜಿಲ್ಲೆಯ ನಾಯ್ಕಲ್‌ನ ಹುಲಿಗೆಪ್ಪ ಮಾಸ್ತರ್, ಬೆಳಗಾವಿ ಜಿಲ್ಲೆಯ ಅಡಿವೆಪ್ಪ ಹುಲ್ಲೆನ್ನವರ, ಹಂಸನೂರಿನ ಸುರೇಶ ಯಲ್ಲೂಬಾಯಿ ಚಿಮ್ಮಲ ಅವರ ಭಜನಾ ಮೇಳಗಳು ಬೇರೆ ಬೇರೆ ವೇದಿಕೆಗಳಲ್ಲಿ ಪ್ರದರ್ಶನಗಳನ್ನು ನೀಡಿರುವುದಿದೆ.

## ರಂಗಭೂಮಿ

ಜಾನಪದ ವಿದ್ವಾಂಸರು ಚೆನ್ನದಾಸರ ಮೂಲವನ್ನು 'ದಾಸರಾಟ'ದ ಮೂಲಕ ಗುರುತಿಸಲು ಪ್ರಯತ್ನಿಸಿದ್ದಾರೆ. ಅದರಲ್ಲಿ ದಾಸರ ಮೂಲವನ್ನು 'ನಟುವರ' ರಲ್ಲಿ ಗುರುತಿಸಿರುವುದಿದೆ. ಈ ಕುರಿತು ತುಸು ಒತ್ತು ಕೊಟ್ಟು ಚರ್ಚಿಸಿದವರಲ್ಲಿ ಎಂ ಟಿ ಧೂಪದ ಅವರು ಪ್ರಮುಖರು.

"ಕ್ರಿಸ್ತ ಪ್ರಾರಂಭದ ಶತಮಾನದಲ್ಲಿ ದಾಸರಾಟವನ್ನು ಹೋಲುವಂತಹ ಒಂದು ಆಟದ ವರ್ಣನೆಯು ತಮಿಳು 'ಶಿಲಪ್ಪದಿಕಾರಮ್' ಎಂಬ ಗ್ರಂಥದಲ್ಲಿ ಸೂಚಿತವಾಗಿದೆ. ನೀಲಗಿರಿ ಬೆಟ್ಟದಲ್ಲಿ ಚೇರ್ ಅರಸನ ಗೌರವಾರ್ಥವಾಗಿ ಒಂದು ಮನರಂಜನೆಯ ಆಟವು ಏರ್ಪಟ್ಟಿತ್ತೆಂದೂ ಅದರಲ್ಲಿ ನಟ–ನಟಿಯರು ಬಣ್ಣ ಬಳಿದುಕೊಂಡು ಪಾತ್ರಧಾರಿ ಗಳಾಗಿ ತಮ್ಮ ಸಂಗೀತ ಮತ್ತು ನೃತ್ಯದಿಂದ ಅರಸನ ಮನಾನಂದಗೊಳಿಸಿದರೆಂದೂ, ಅವರ ಸಂಖ್ಯೆ ನೂರಿಪ್ಪತ್ತು ಎಂದೂ ಈ ಗ್ರಂಥದಿಂದ ತಿಳಿದುಬರುತ್ತದೆ. ಇದು ಬಹುಶಃ ಅಲೆದಾಡುತ್ತಿದ್ದ ಒಂದು ದಾಸರ ಗುಂಪಿರಬಹುದು. ಗಂಡು ಹೆಣ್ಣು ಒಟ್ಟಿಗೆ ಹಾಡುತ್ತಾ, ಕುಣಿಯುತ್ತಾ ಅಲೆದಾಡುವ ಗುಂಪು ಭಾರತದ ಈ ಭಾಗದಲ್ಲಿ ದಾಸರನ್ನು ಬಿಟ್ಟರೆ ಬೇರಿಲ್ಲ. ಕಾರಣ 'ಶಿಲಪ್ಪದಿಕಾರಮ್'ನಲ್ಲಿ ವರ್ಣಿಸಿದ ನಾಟ್ಯ, ಕುಣಿತ ದಾಸರಾಟ ವನ್ನೇ ಸೂಚಿಸಬಹುದೆಂದೂ ನನ್ನ ಭಾವನೆ. ದಾಸರ ಗುಂಪಿನಲ್ಲಲ್ಲದೆ, ಸ್ತ್ರೀಯರು ಹಾಡುತ್ತ ಕುಣಿಯುವುದು ಇನ್ನೆಲ್ಲಿಯೂ ಕಂಡು ಬಂದಿಲ್ಲ. ನಾಟ್ಯ ಶಾಸ್ತ್ರದಲ್ಲಿಯೂ ಸಂಸ್ಕೃತ ರಂಗಭೂಮಿಯ ಅವಿಭಾಜ್ಯ ಅಂಗಗಳೇ ನೃತ್ಯ ಮತ್ತು ಸಂಗೀತವೆಂದು ಭರತನು ಹೇಳಿದ್ದಾನೆ. ದೇಶೀಯ ಆಟದಲ್ಲಿ ಸ್ತ್ರೀಯರನ್ನು ಹೊಂದಿದ ಗುಂಪು, ದಾಸರ ಗುಂಪು ಬಿಟ್ಟರೆ ಬೇರೊಂದಿಲ್ಲ. ಕಾರಣ ರಾಜನನ್ನು ಸಂತಸಗೊಳಿಸಿದ ತಂಡವು 'ದಾಸರಾಟ'ದ ತಂಡವಾಗಿರಬಹುದು.

'ನಟ' ಜನ ಇಲ್ಲಿಯವರಾಗಿದ್ದರೆಂಬುದಕ್ಕೂ ಕಾಲಾನುಕ್ರಮದಲ್ಲಿ ಇವರೇ 'ದಾಸ' ರಾಗಿರಬಹುದೆಂಬುದೂ ಸಹ ಯೋಚಿಸಲು ಯೋಗ್ಯವಾಗಿದೆ" (ಧೂಪದ, ಎಂ ಟಿ:೧೯೭೧:೨೧೯–೨೦).

ಇದೇ ರೀತಿಯ ಅಭಿಪ್ರಾಯವನ್ನು, ಪ್ರೊ॥ ಎ ಆರ್ ಕೃಷ್ಣಶಾಸ್ತ್ರೀಯವರೂ ವ್ಯಕ್ತಪಡಿಸಿದ್ದಾರೆ. "ಕನ್ನಡ ಜಾನಪದ ಕಲಾವಂತಿಕೆಯ ಮಾತು ಅತಿ ಪ್ರಾಚೀನ ತಮಿಳು ಸಾಹಿತ್ಯದಲ್ಲಿಯೂ ಬರುತ್ತದೆ. ಕ್ರಿಸ್ತ ಶಕದ ಮೊದಲ ವರ್ಷಗಳಲ್ಲಿ ರಚಿತವಾದ 'ಶಿಲಪ್ಪದಿಕಾರಂ' ಕಾವ್ಯದಲ್ಲಿ ಚೇರರಾಜನಾದ ಶೆಂಗಟ್ಟುವನ್ ನೀಲಗಿರಿಗೆ ಬಂದಾಗ ಅವನ ಮನೋರಂಜನೆಗಾಗಿ "ಕರುನಾಟದ ನಟಿ ನರ್ತಕಿ" ಯರು ಆಡಿದ ಗೀತನ ನೃತ್ಯದ ವರ್ಣನೆ ಇದೆ. ಇಷ್ಟು ಪ್ರಾಚೀನವೂ ವೈಭವಯುಕ್ತವೂ ಆದ ನಮ್ಮ (ದ್ರಾವಿಡರ) ಜಾನಪದ ರಂಗಭೂಮಿಯ ಪ್ರಭಾವವು ಭರತನ ನಾಟ್ಯಶಾಸ್ತ್ರದ ಮೇಲೆ ಬಿದ್ದಿರುವ ಸಂಭವವಿದೆ" (ರಂಗನಾಥ, ಎಚ್ ಕೆ:೧೯೭೨:೨೫)ಎಂದು ಪ್ರತಿಪಾದಿಸಿದ್ದಾರೆ.

ಇಂಥದ್ದೇ ರೀತಿಯ ಇನ್ನೆರಡು ಅಭಿಪ್ರಾಯಗಳು ಹೀಗಿವೆ:

ಎಚ್ ಕೆ ರಂಗನಾಥ ಅವರು "ತೀರ ಹಿಂದಿನ ಕಾಲದಲ್ಲಿ ಹಳ್ಳಿಗರ ಮನೋರಂಜನೆಗಾಗಿ ಆಟಕಟ್ಟಿ ಆಡುತ್ತಿದ್ದ" "ನಟುವರು" ಎಂಬ ಪಂಗಡಕ್ಕೆ "ದಾಸರು" ಎಂಬ ಹೆಸರೂ ಇದ್ದಿತು. ಜಾತ್ರೆ, ಉತ್ಸವ, ಹಬ್ಬ–ಹರಿದಿನಗಳಲ್ಲಿ ಈ ದಾಸರ ಆಟಗಳು ನಡೆಯುತ್ತಿದ್ದವು. ಇವರ ಮೇಳ ಸ್ತ್ರೀ ಪುರುಷ ಮಿಶ್ರಿತವಾದುದು"(ರಂಗನಾಥ, ಎಚ್ ಕೆ:೧೯೭೨:೨೬) ಎಂದಿದ್ದರೆ, ಚಂದ್ರಶೇಖರ ಕಂಬಾರ ಅವರು ದಾಸರಾಟದ ಹಿನ್ನೆಲೆಯನ್ನು ವಿವರಿಸುತ್ತ "ದಾಸರಾಟ ದ್ರಾವಿಡ ಬಯಲಾಟದ ಮುಂದುವರಿದ ರೂಪವಾಗಿರಬಹುದೇನೋ ಎಂದು ಅನಿಸುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಈ ಮೇಲಿನ ವಿದ್ವಾಂಸರ ಎಲ್ಲ ಹೇಳಿಕೆಗಳಲ್ಲಿ ಒಂದಿಷ್ಟು ಹೊಂದಾಣಿಕೆ ಕಂಡು ಬರುತ್ತದೆ. ತಮಿಳು ಸಾಹಿತ್ಯ ಕೃತಿ 'ಶಿಲಪ್ಪದಿಕಾರಮ್'ನಲ್ಲಿ 'ಚೇರ' (ಚೇರ) ರಾಜನಾದ ಶೆಂಗಟ್ಟುವನ್ ರಾಜನ ಮುಂದೆ ನರ್ತಿಸುತ್ತ ಹಾಡಿದವರು ದಾಸರ ಗುಂಪಿನ ನಟ–ನಟಿಯರೆಂದೂ ಅವರು ಮೇಳಗಳನ್ನು ಕಟ್ಟಿಕೊಂಡು ಆಟಕಟ್ಟಿ ಆಡುತ್ತಿದ್ದರೆಂದೂ, ಅವರನ್ನು ನಟುವರ ಪಂಗಡದ ದಾಸರೆಂದೂ, ಇಂದಿನ ದಾಸರಾಟವು ದ್ರಾವಿಡ ಬಯಲಾಟದ ಮುಂದುವರಿದ ರೂಪವೆಂದು ಗ್ರಹಿಸಬಹುದಾಗಿದೆ. ಅಂದರೆ ತಮಿಳು ಸಾಹಿತ್ಯ ಕೃತಿ 'ಶಿಲಪ್ಪದಿಕಾರಮ್' ಕಾವ್ಯದ ಸಂದರ್ಭದಲ್ಲಿ ಸ್ತ್ರೀ–ಪುರುಷರ ಕುಣಿಯುವ–ಹಾಡುವ ಮೇಳಗಳಿದ್ದವು. ಈ ತರಹದ ಮೇಳಗಳು ದಾಸರ ಸ್ತ್ರೀ–ಪುರುಷ ಮೇಳಗಳೇ ಆಗಿದ್ದವು. ಇಂಥ ಮೇಳಗಳನ್ನು ನಟುವರು ಎಂದು ಕರೆಯುತ್ತಿದ್ದರು. ಅಂದಿನ ನಟುವ ಮೇಳಗಳ ಮುಂದುವರಿದ ರೂಪವೇ ಇಂದಿನ ದಾಸರಾಟ ಎನ್ನಬಹುದಾಗಿದೆ.

ಈ 'ನಟುವ' ಪದದ ಕುರಿತು ಅನೇಕರು ಭಿನ್ನರೀತಿಯಲ್ಲಿ ವಿವರಿಸಿದ್ದಾರೆ. 'ನಟುವ' ಎಂಬುದೊಂದು ಪ್ರತ್ಯೇಕ ಜಾತಿಯೆಂಬಂತೆ ಗ್ರಹಿಸಲಾಗಿದೆ. ಹೊಸೂರು ಮುನಿಶಾಮಪ್ಪ ಅವರು "ನಟುವರ ಸಂಸ್ಕೃತಿ" ಎನ್ನುವ ಕೃತಿ ರಚಿಸಿದ್ದಾರೆ. ಅಲ್ಲಿ "ನಟುವರಲ್ಲಿ

ಎರಡು ರೀತಿಯ ಜನರಿದ್ದಾರೆ. ಪ್ರಕೃತರು ಮತ್ತು ತಿರುನಾಮದಾರರೆಂದು. ಪ್ರಕೃತರು ಸಸ್ಯಹಾರಿಗಳಾದರೆ, ತಿರುನಾಮದವರು ಮಾಂಸಹಾರಿಗಳು. ಇದರಲ್ಲಿ ತಿರುನಾಮದವರು ಸಂಗೀತಕ್ಕೆಂದು ಪ್ರಸಿದ್ಧರು. ತಮ್ಮ ಜೀವನೋಪಾಯಕ್ಕೆ ನಟುವರು ಸಂಗೀತ ಮತ್ತು ನೃತ್ಯವನ್ನು ನೆಚ್ಚಿಕೊಂಡಿದ್ದರು. ತಿರುನಾಮದಾರರಲ್ಲಿ ಹೆಂಗಸರು ಮತ್ತು ಗಂಡಸರು ತಮ್ಮ ಜೀವನ ವಿಧಾನಕ್ಕೆ ಸಂಗೀತವನ್ನು ಅವಲಂಬಿಸಿದ್ದರು"(ಹೊಸೂರು ಮುನಿಶಾಮಪ್ಪ: ನಟುವರ ಸಂಸ್ಕೃತಿ: ೧೯೯೩)ಎಂದು ವಿವರಿಸಲಾಗಿದೆ. ಆದರೆ ಇವರ ಅನೇಕ ಆಚಾರ–ವಿಚಾರಗಳು, ಬದುಕಿನ ರೀತಿ ದಾಸರಲ್ಲಿ ಕಂಡು ಬರುತ್ತವೆ. ನಟುವ ಹೆಂಗಸರನ್ನು 'ನಾಯಕಸಾನಿ' ಎಂದು ಕರೆಯಲಾಗುತ್ತಿತ್ತು ಎಂದು ಹೇಳಲಾಗಿದೆ. ವಾಸ್ತವದಲ್ಲಿ ದಾಸರಾಟದ ಮೇಳದ ನಾಯಕಿ ನಟಿಯನ್ನು 'ನಾಯಕಸಾನಿ' ಎಂದು ಕರೆಯ ಲಾಗುತ್ತದೆ. "ಸೈನಿಕರ ಮನರಂಜನೆಗಾಗಿಯೂ ದಾಸರಾಟಗಳು ಜರುಗುತ್ತಿದ್ದವು. ಯುದ್ಧ ಸಮಯದಲ್ಲಿ ಸೈನಿಕರ ಮನರಂಜನೆಗಾಗಿ ಅನೇಕ ಕಲಾಮೇಳಗಳು ಇರುತ್ತಿದ್ದಂತೆ ದಾಸರಾಟದ ಮೇಳಗಳೂ ಇರುತ್ತಿದ್ದವು. ದಾಸರಾಟದವರು ಸೈನ್ಯದ ಸಂಗಡವೇ ಇರಲಿ, ಊರಲ್ಲಿಯೇ ಇರಲಿ, ಪ್ರದರ್ಶನವಿಟ್ಟುಕೊಳ್ಳಲಿ, ಎಲ್ಲಿದ್ದರೂ ಈ ಮೇಳಗಳು ಆಟದ ನಾಯಕಿಯ ಹೆಸರಿನಿಂದ ಗುರುತಿಸಲ್ಪಡುತ್ತಿದ್ದವು" (ಲಕ್ಕಪ್ಪಗೌಡ, ಎಚ್ ಜೆ: ೧೯೯೭:೨೩೭) ಇಂತ ನಾಯಕಿಯರಲ್ಲಿ ಯಲ್ಲಾಸಾನಿ ಮತ್ತು ಗಂಗಾಸಾನಿ ಪ್ರಸಿದ್ಧ ಚೆನ್ನದಾಸರ ಜನಪದ ವೃತ್ತಿ ಕಲಾವಿದರು. ಮತ್ತು ಆಧುನಿಕ ರಂಗಭೂಮಿಯ ಮೇಲೆ ಮೊಟ್ಟಮೊದಲು ಪಾದಾರ್ಪಣೆ ಮಾಡಿದವರು ಈ ಮಹಿಳೆಯರೇ ಎಂದು ಗುರುತಿಸಲಾಗಿದೆ. ಅಲ್ಲದೇ, ನಟುವರದ್ದು ಎರಡು ಪ್ರಮುಖ ಕುಲಗಳಿವೆ. 'ಪಸುಪಲೇಟಿ' ಈ ಬಳಿ/ಕುಲ ಚೆನ್ನದಾಸರಲ್ಲಿಯೂ ಕಂಡು ಬರುತ್ತದೆ.

ಈ ಮೇಲೆ ಉಲ್ಲೇಖಿತ 'ಶೆಂಗಟ್ಟುವನ್' ಅರಸನ ಮುಂದೆ ಹಾಡಿ ನರ್ತಿಸಿದ 'ಕರುನಾಟದ ನಟಿನರ್ತಕಿ'ಯರು 'ದಾಸ' ಸಮುದಾಯದ ಅಥವಾ 'ದಾಸರಾಟ'ದ ಮೇಳ ಎನ್ನುವುದಕ್ಕೆ ಇನ್ನೂ ಹೆಚ್ಚಿನ ಆಧಾರಗಳು ಸಿಕ್ಕಿ ನಿಜವಾದರೆ, ಈ ಆಟದ ನಟರು 'ದಾಸರಾಟ'ದ ಪೂರ್ವಜರಾಗಬಹುದು. ಆದರೆ ಈಗಿರುವ ಆಧಾರಗಳು ಅಪ್ಪುಗಟ್ಟಿಯಾಗಿ ಇವರದ್ದೇ 'ದಾಸರಾಟ'ದ ಮೇಳಗಳು ಎಂದು ಹೇಳಲು ಸಾಧ್ಯ ವಾಗುತ್ತದೆಯೇ ಎನ್ನುವುದು ಒಂದು ಪ್ರಶ್ನೆ.

ದಾಸರಾಟದ ಜನಪ್ರಿಯತೆಯ ಕುರಿತು ಒಂದು ಆಖ್ಯಾಯಿಕೆ ಇದೆ. "ಕ್ರಿ ಶ ೧೦೨೧ ರಲ್ಲಿ ಈಗಿನ ವಿಜಾಪೂರ ಜಿಲ್ಲೆಯಲ್ಲಿ ಚಾಲುಕ್ಯ ವಂಶಸ್ಥಳಾದ ಅಕ್ಕಮ್ಮನು ರಾಜ್ಯವಾಳಿದಳು. ನಂತರ ಹಾಳಾದ ಈ ಪಟ್ಟಣವೇ ಇಂದಿನ ಅರಸೀಬೀದಿ. ಹಾಳಾದ ಕೂಡಲೆ ಇಲ್ಲಿ ದೆವ್ವಗಳು ವಾಸಿಸಲು ಪ್ರಾರಂಭಿಸಿದವು. ಒಂದು ಸಾಯಂಕಾಲ ಆ ಮಾರ್ಗವಾಗಿ ದಾಸರಾಟದ ತಂಡವೊಂದು ಹೊರಟಿತ್ತು. ಜನಪ್ರಿಯವಾದ ತಂಡ. ಅರಸೀಬೀದಿಯ ನಿವಾಸಿಯೊಬ್ಬ ಒಂದು ದಾಸರಾಟದ ಮುಖ್ಯಸ್ಥನನ್ನು ಅಂದು ತಮ್ಮ ಊರಲ್ಲಿ ತಂಗಬೇಕೆಂದೂ ಒಂದು ಆಟ ಆಡಬೇಕೆಂದೂ ದೈನ್ಯದಿಂದ ಬೇಡಿ

ಕೊಂಡನು. ನಾಯಕ ಆಮಂತ್ರಣವನ್ನು ಒಪ್ಪಿ ಅಲ್ಲಿಯೇ ಒಂದೆಡೆ ಊಟಮಾಡಿ ಆಟವನ್ನು ಚಾವಡಿಯಲ್ಲಿ ಪ್ರಾರಂಭಿಸಿದರು. ಅವರ ಆದರದಿಂದ ಸಂತುಷ್ಟರಾದ ದಾಸರು ಚನ್ನಾಗಿ ಹಾಡಿ, ಕುಣಿದು ರಾತ್ರಿಯೆಲ್ಲಾ ಆಡಿದರು. ಬೆಳಗಾದಂತೆ ಪ್ರೇಕ್ಷಕರ ವಿಕಾರ ರೂಪ, ಅಲ್ಲಿಯ ಸ್ಮಶಾನ ಸದೃಸ ಪರಿಸ್ಥಿತಿಯನ್ನು ತಿಳಿದ ನಟ, ನಟಿಯರು ರಂಗಭೂಮಿಯ ಮೇಲೆಯೇ ಉಟ್ಟ ಬಟ್ಟೆಯಲ್ಲಿಯೇ ಪ್ರಾಣತೆತ್ತರು. ಪ್ರೇಕ್ಷಕರೆಲ್ಲಾ ಮನುಜರಲ್ಲಾ! ದಾಸರಾಟದ ಧೈರ್ಯಶಾಲಿ ಮುಂದಾಳೂ, ಮತ್ತು ಒಬ್ಬ ನಟಿ ಮಾತ್ರ ಬದುಕಿ ಮರಳಿದರಂತೆ, ಕಥೆ ಎಂತಹದೇ ಇದ್ದರೂ ಅದರ ಜನಪ್ರೀಯತೆಯನ್ನು ನಿದರ್ಶಿಸುತ್ತದೆ. ಹಳ್ಳಿಗರ ಬೇಡಿಕೆಯಂತೆ ಒಂದು ಹಳ್ಳಿಯಲ್ಲಿ ಎರಡು, ಅಥವಾ ಮೂರು ದಾಸರಾಟಗಳನ್ನು ಪ್ರದರ್ಶಿಸಿ ಅಲ್ಲಿಯ ಗೌಡ, ಕುಲಕರ್ಣಿ, ಹಿರಿಯರಿಂದ ಹರಕೆ ಪಡೆದು ಮುಂದಿನ ಹಳ್ಳಿಗೆ ಪ್ರಯಾಣ ಬೆಳೆಸುತ್ತಿದ್ದ ಪದ್ಧತಿ ಅವರದು"(ಧೂಪದ, ಎಂ ಟಿ:೧೯೮೩:೭-೮).

ಈ ದಾಸರಾಟಕ್ಕೆ ನಿರ್ದಿಷ್ಟವಾದ ಕಥೆಯೆಂಬುದಿಲ್ಲ. ಆದರೆ ವಿಷ್ಣುವಿನ ಮಹಿಮೆಯನ್ನು ಸಾರುವ ಆಶಯ ಈ ಬಯಲಾಟದ ಹಿಂದಿದೆ. "ಕೃಷ್ಣ -ಗೋಪಿ ಅಥವಾ ಕೃಷ್ಣ-ರಾಧೆಯರ ಮಧುರ ಪ್ರೇಮಭಕ್ತಿ ಹಾಗೂ ದಶಾವತಾರ ಲೀಲೆ ಎರಡೂ ಸೇರಿಕೊಂಡು ವೈಷ್ಣವ ಆಟದ ಹೊಸಿಗೆಯಾಯಿತೆಂದು ಹೇಳಬೇಕು"(ಸುಂಕಾಪುರ, ಎಂ ಎಸ್:೧೯೭೮: ೧೦೧). 'ದಾಸರಾಟ' ದ ವಸ್ತುವಿನ ವಿವರ ಹೀಗೆ ಕೊಡಬಹುದು.

"ದಾಸರಾಟದಲ್ಲಿ ಎರಡು ಭಾಗಗಳನ್ನು ಕಾಣುತ್ತೇವೆ. ಆರಂಭದಲ್ಲಿ (ಮೊದಲನೆಯ ಭಾಗ) ಗಣಪತಿ ಸ್ತುತಿ, ಇತರ ದೇವತೆಗಳ ಸ್ತುತಿಯನಂತರ ಆಟ ಪ್ರಾರಂಭವಾಗುತ್ತದೆ. ಕೃಷ್ಣ ಗೊಲ್ಲತಿಯರು ರಂಗ ಪ್ರವೇಶಿಸುತ್ತಾರೆ. ಗೊಲ್ಲತಿ ಹಾಲು, ಮೊಸರು ಮಾರಲು ಬಂದಿರುತ್ತಾಳೆ. ಕೃಷ್ಣ ಅವಳಿಗೆ ಸುಂಕ ಕೊಡಬೇಕೆಂದು ಪೀಡಿಸುತ್ತಾನೆ. ಅವಳು ನಿರಾಕರಿಸುತ್ತಾಳೆ. ಗಂಡುಳ್ಳ ಬಾಲೆಯರನ್ನು ಈ ರೀತಿ ಸುಂಕಕ್ಕಾಗಿ ಒತ್ತಾಯಿಸಬಾರದೆಂದು ತಿಳಿಸುತ್ತಾಳೆ. ಕೃಷ್ಣ ಅವಳೊಡನೆ ವಾದಿಸುತ್ತಾನೆ.ವಾದ-ವಿವಾದಗಳ ನಂತರ ಗೊಲ್ಲತಿ ಸುಂಕ ಕೊಡಲು ಒಪ್ಪಿಕೊಳ್ಳುತ್ತಾಳೆ. ಇಬ್ಬರೂ ರಂಗಮಂದಿರದಿಂದ ಕುಣಿಯುತ್ತ ಹಿಂದೆ ಸರಿಯುತ್ತಾರೆ. ಇದು ದಾಸರಾಟದ ಮೊದಲನೆಯ ಭಾಗದ ಪ್ರದರ್ಶನ. ಇದನ್ನೇ ಪೂರ್ವರಂಗ ಎಂದು ಕರೆಯಬಹುದು.ಮೊದಲನೆಯ ಭಾಗ ಎಷ್ಟೇ ಕಡಿಮೆ ಅವಧಿಯದಾದರೂ ಅದನ್ನು ದಾಸರಾಟದವರು ಆಡುತ್ತಾರೆ.

ದಾಸರಾಟದ ಎರಡನೆಯ ಭಾಗದಲ್ಲಿ ಚುಮಣಾ ನಾಯಕಿಯಾಗಿರುತ್ತಾಳೆ. ಗೊಡ್ಡಿ ಭೀಮಣ್ಣ ನಾಯಕನಾಗಿರುತ್ತಾನೆ. ಮುಮ್ಮೇಳ ಹಿಮ್ಮೇಳದವರು ಹಾಡುತ್ತಿದ್ದಾಗ, ಹಾಡಿನ ತಾಳ ಲಯಕ್ಕೆ ತಕ್ಕಂತೆ ಚುಮಣಾ ಕುಣಿಯುತ್ತ ರಂಗಮಂಟಪವನ್ನು ಸುತ್ತುತ್ತಾಳೆ. ನಾಯಕ ಗೊಡ್ಡಿ ಭೀಮಣ್ಣ ಪ್ರವೇಶಿಸಿ ಚುಮಣಾಳ ಸೌಂದರ್ಯ ಕಂಡು ಮೋಹ ಪರವಶನಾಗಿ, ಅವಳ ಅಂಗಾಂಗ ವರ್ಣನೆ ಮಾಡುತ್ತ ತನಗೆ ಒಲಿಯಬೇಕೆಂದು ಕೇಳುತ್ತಾನೆ. ಅವಳು ನಿರಾಕರಿಸುತ್ತಾಳೆ. ಇಬ್ಬರಲ್ಲಿ ವಾಗ್ವಾದ ಏರ್ಪಟ್ಟು ಪರದೇಸಿ-

ನಾಗೇಶಿ ಸಂಪ್ರದಾಯವನ್ನು ಅನುಸರಿಸಲಾಗುತ್ತದೆ. ಚುಮಣಾ ಗಂಡು ಜಾತಿಯನ್ನು ಹೀಯಾಳಿಸಿ ಗಂಡು ದೇವರನ್ನೂ ಬಿಡದೆ ಎಲ್ಲರನ್ನೂ ಅಸಹ್ಯವಾಗಿ ನಿಂದಿಸುತ್ತಾಳೆ. ಗೊಡ್ಡಿ ಭೀಮ ಸ್ತ್ರೀ ಕುಲದ ತಳಬುಡವನ್ನೆಲ್ಲ ತೆಗೆದು ಶೋಧಿಸಿ ಹೀಯಾಳಿಸುತ್ತಾನೆ. ಇವರಿಬ್ಬರಲ್ಲಿಯ ವಾದ ವಿವಾದಗಳು ಬೆಳಗಿನತನಕ ನಡೆಯುವುದುಂಟು. ಒಂದೊಂದು ಸಲ ಇಬ್ಬರೂ ಸೋಲದೇ ಇರುವುದುಂಟು. ಚುಮಣಾ ಮತ್ತು ಗೊಡ್ಡಿ ಭೀಮಣ್ಣ ತಮ್ಮ ವಿವಾದವನ್ನು ವ್ಯಕ್ತಪಡಿಸುವಾಗ ದಾಸರ ಹಾಡುಗಳನ್ನು, ಶೃಂಗಾರ ಲಾವಣಿಗಳನ್ನು, ಜಾವಳಿ ಮತ್ತು ಇತರ ಲಘು ಗೀತೆಗಳನ್ನು, ಶರಣರ ವಚನಗಳನ್ನು 'ತೋಮೀ' ಹಾಡುಗಳನ್ನು ಬಳಸಿಕೊಳ್ಳುತ್ತಾರೆ"(ಬೋರಲಿಂಗಯ್ಯ, ಹಿ ಚಿ:೧೯೯೬: ೨೮೬). ಅಲ್ಲದೆ ಬಿ ಬಿ ಹೆಂಡಿಯವರು ಹೇಳುವ ಹಾಗೆ ಆಟದ ಬೇರೆ ಅವತಾರಗಳಲ್ಲಿ ಇಡಿಯ ರಾತ್ರಿ ಯೆಲ್ಲಾ ಕೃಷ್ಣ ಗೋಪಿಯರದೇ ವಾದ ನಡೆಯುವುದುಂಟು. ಆಗ ಕೃಷ್ಣ ತನ್ನ ದಶಾವತಾರದ ಮಹಿಮೆಯನ್ನೆಲ್ಲ ಬಿಚ್ಚಿ ಹೇಳುತ್ತಾನೆ. ಗೋಪಿ ಅದನ್ನೆಲ್ಲಾ ಅಸಡ್ಡೆ ಮಾಡುತ್ತಾಳೆ.

ಕಥೆಯ ಸಂದರ್ಭ ಮತ್ತು ವಿಷಯ ಏನೇ ಇರಲಿ, ವಿಷ್ಣುವಿನ ಶ್ರೇಷ್ಠ ಅವತಾರವಾದ ಕೃಷ್ಣನ ಪಾತ್ರದ ಮೂಲಕ ವಿಷ್ಣುವಿನ ವಿವಿಧ ಅವತಾರಗಳು ಪರಿಚಯಿಸಲ್ಪಡುತ್ತವೆ. ಪಾತ್ರಗಳಾಗಿ ಕಾಣಿಸಿಕೊಳ್ಳದಿದ್ದರೂ ಸಂಭಾಷಣೆಯಲ್ಲಿ ವ್ಯಕ್ತವಾಗುತ್ತದೆ. ಆದರಿದು ಗಂಭೀರ ಸ್ವರೂಪದ್ದಿರುವುದಿಲ್ಲ. ಬಹುತೇಕರು ಅಭಿಪ್ರಾಯ ಪಡುವಂತೆ 'ಒಂದು ಮೋಜಿನ ಕಾಲಯಾಪನೆ' ಅನ್ನುವಂತಿದೆ.

"ದಾಸರಾಟದಲ್ಲಿ 'ಜವಾರಿ' ಪಾತ್ರ ವಿಶೇಷವಾದದ್ದು. ಇವನೇ ವಿದೂಷಕ, ಹಾಸ್ಯಗಾರ. ಅವನು ಪ್ರತಿ ಸನ್ನಿವೇಶಕ್ಕೊಂದು ತರಹ ರುಮಾಲು ಸುತ್ತಿ ಪ್ರೇಕ್ಷಕರನ್ನು ಬೆರಗು ಗೊಳಿಸುತ್ತಾನೆ. ರುಮಾಲನ್ನು ಎತ್ತು, ಕುದುರೆ, ನಾಯಿ ಮುಂತಾದ ಪ್ರಾಣಿಗಳ ಆಕಾರದಲ್ಲಿ ಸುತ್ತಿ ಪ್ರೇಕ್ಷಕರನ್ನು ರಂಜಿಸುತ್ತಾನೆ. ಅವನು ಚುಮಣಾ, ಗೊಡ್ಡಿ ಭೀಮರ ನಡುವಿನ ವಾದದಲ್ಲಿ ಭಾಗವಹಿಸಿ ಅಡ್ಡ ಮಾತು ಬಳಸಿ, ಅಶ್ಲೀಲ ಮಾತುಗಳನ್ನು ಹೇಳುತ್ತ ಜನರನ್ನು ರಂಜಿಸುತ್ತಾನೆ(ಅದೇ:೨೮೭).

ನಿಶ್ಚಿತ ಕಥಾನಕವಿಲ್ಲದ, ರಾತ್ರಿಯೆಲ್ಲ ಕೃಷ್ಣ ಲೀಲೆಯ ಶೃಂಗಾರಪದ, ಹೆಣ್ಣು ಗಂಡಿನ ವಾದೀಹಾಡು, ಹಾಸ್ಯ, ಅಡ್ಡಸೋಗು ಬಂದು ಬೆಳಗು ಮಾಡುವ ಹಳ್ಳಿಯ ತರುಣ ರಸಿಕರ ಅಸಭ್ಯ ರುಚಿಗೆ ಚಾಲನೆ ನೀಡುವ ಒಂದು ಮೇಳವಾಗಿದೆ. ಹೀಗಾಗಿ 'ದಾಸರ ಆಟವಲ್ಲ, ದೋಷಯ ಊಟವಲ್ಲ, ಎಂಬ ಜನಪ್ರಿಯ ಗಾದೆಯೇ ಸೃಷ್ಟಿ ಯಾಗಿದೆ.

ದಾಸರಾಟದಲ್ಲಿ ಮೂರು ಪ್ರಮುಖ ಪಾತ್ರಗಳಿರುತ್ತವೆ. ಚಿಮಣಾ(ನಾಯಕಿ) ಗೊಡ್ಡಿ ಭೀಮ (ನಾಯಕ), ಜವಾರಿ (ವಿದೂಷಕ). ವಿಶೇಷವಾಗಿ ಪಾತ್ರ ಧಾರಿಗಳೆಲ್ಲಾ ಹೆಚ್ಚಾಗಿ ಹೆಂಗಸರೇ ಆಗಿರುತ್ತಾರೆ. ಇಲ್ಲಿನ ನಟಿಯೇ ಈ ಮೇಳದ ನಾಯಕಿಯಾಗಿರುತ್ತಾಳೆ. ಗಂಡಸು ಇದ್ದರೆ ತಬಲ ಬಾರಿಸುವ ಪಕ್ಕ ವಾದ್ಯದವನಾಗಿ ಇರುತ್ತಾನೆ. ಆಟವು

ಪಾತ್ರಗಳಿಗೆ ಮುಖವರ್ಣಿಕೆ ಇತ್ಯಾದಿ ಏನೂ ಇಲ್ಲದೆ ತಮ್ಮ ನಿತ್ಯದ ಉಡುಪಿನಲ್ಲಿಯೇ ನಡೆಯುತ್ತದೆ. ಪ್ರಾರಂಭದಲ್ಲಿ ಗಣಸ್ತುತಿ ಮತ್ತು ಇತರ ದೇವತೆಗಳ ಸ್ತುತಿ ಪದಗಳನ್ನು ಹಾಡಿನ ಮೇಲೆ ಬಾಲಗೋಪಾಲನ ವೇಷ ಹಾಕಿದ ಇಬ್ಬರು ತರುಣಿಯರು ರಂಗಕ್ಕೆ ಬಂದು "ಬಾಲ ಬಂದಾನೇ ಗೋಪಾಲ ಬಂದಾನೆ" ಎಂದು ಹಾಡಲು ಪ್ರಾರಂಭಿಸುತ್ತಾರೆ. ಇದು ಮುಗಿದ ಮೇಲೆ ಅನೇಕ ಇತರ ಪದಗಳನ್ನು ಕುಣಿತದೊಂದಿಗೆ ಹಾಡಿ ಬದಿಗೆ ಸರಿಯುತ್ತಾರೆ. ನಂತರ ಈ ಮುಂಚೆ ಹೇಳಿದಂತೆ ಬಯಲಾಟ ಮುಂದುವರಿಯುತ್ತದೆ.

ಈ ಆಟದಲ್ಲಿ ಹಿಮ್ಮೇಳ ಮುಮ್ಮೇಳದವರೂ ಇರುತ್ತಾರೆ. ಇವರೆಲ್ಲರ ಕೈಯಲ್ಲಿ ಕಂಚಿನ 'ಗುಂಡುದಾಳ'ಗಳು, ಸ್ಥಾಯಿ ಶ್ರುತಿಗಾಗಿ ಮೊದಲು ಪುಂಗಿಯ ನಾದ ವಿರುತ್ತಿದ್ದಂತೆ. ಪಕ್ಕ ವಾದ್ಯದವರಾಗಿ ಇಬ್ಬರು ಪಿಟೀಲು ವಾದನಕಾರರು ಇಬ್ಬದಿಗಳಲ್ಲಿ ನಿಂತಿರುವರು. ಹಿಂಬದಿಯಲ್ಲಿ ಮದ್ದಲೆಕಾರ ನಿಂತಿರುವನು. ಬೆಳಕಿಗಾಗಿ ಮುಂಬದಿಯ ಎರಡೂ ಪಕ್ಕಗಳಲ್ಲಿ ಹಿಲಾಲುಗಳು ಉರಿಯುತ್ತಿದ್ದವು.

ಆಟದ ಪ್ರದರ್ಶನಕ್ಕೆ ನಿಶ್ಚಿತವಾದ ಜಾಗವೆಂಬುದು ಇರುವುದಿಲ್ಲ. ಕಲಾ ಪೋಷಕರ ಅಭಿಲಾಷೆಯ ಮೇರೆಗೆ ಅನುಕೂಲವಿರುವ ಯಾವುದೇ ಜಾಗವಾದರೂ ಸರಿ. ಗುಡಿಯ ಎದುರಿನ ಕಟ್ಟೆ, ಊರ ಚಾವಡಿಯಕಟ್ಟೆ, ಗುಡಿಯ ಆವರಣ, ಪ್ರತಿಷ್ಠರ ಮನೆಯ ಅಂಗಳ, ನಾಲ್ಕು ದಾರಿಗಳ ಕೂಡುವ ಚೌಕ-ಮತ್ತಿತರ ಸ್ಥಳಗಳಲ್ಲಿ ಪ್ರದರ್ಶನ ವಿರುತ್ತಿತ್ತು. ವಿಶೇಷವಾಗಿ ದೊಡ್ಡ ದೊಡ್ಡ ಜಾತ್ರೆಗಳಲ್ಲೂ ಈ ಮೇಳಗಳು ಪ್ರದರ್ಶನ ನೀಡುತ್ತಿದ್ದವು.

ಈ ದಾಸರಾಟದ ಪ್ರಯೋಗ ಮತ್ತು ಜನಪ್ರಿಯತೆಯಿಂದಾಗಿ ಬೇರೆ ಬೇರೆ ರಂಗಭೂಮಿ ಪ್ರಕಾರಕ್ಕೆ ಪ್ರೇರಣೆಯಾಗಿದೆಯೆಂದು ಹಲವಾರು ವಿದ್ವಾಂಸರು ಹೇಳಿದ್ದಾರೆ. ಶ್ರೀ ಎಂ ಟಿ ಧೂಪದ ಅವರು ಕನ್ನಡದ ಈ ದಾಸರಾಟವು ಮರಾಠಿ ರಂಗಭೂಮಿಯ 'ತಮಾಶಾ'ದ ಹುಟ್ಟಿಗೆ ಕಾರಣವಾಗಿದೆ ಎಂದೂ ಪುನಃ ಅದು 'ರಾಧಾನಾಟ'ವಾಗಿ ಕನ್ನಡಕ್ಕೆ ಬಂದಿತೆಂದೂ ಹೇಳುತ್ತಾರೆ(ಧೂಪದ, ಎಂ ಟಿ:೧೯೭೭). ಇದೇ ಮಾತನ್ನು ಬೆಟಗೇರಿ ಕೃಷ್ಣಶರ್ಮ ಅವರು ಹೇಳುತ್ತಾರಲ್ಲದೆ ದಾಸರಾಟ ಮತ್ತು ರಾಧಾನಾಟ ಎರಡೂ ಹೋಲಿಕೆಗಳಲ್ಲಿ ಒಂದೇಯಾಗಿರುವುದನ್ನು ಉದಾಹರಿಸುತ್ತಾರೆ.

"ದಾಸರಾಟದ ವಸ್ತುವೇ ರಾಧಾನಾಟದಲ್ಲಿದೆ. ಇದರಲ್ಲಿಯೂ ತರುಣ-ತರುಣಿಯರ ಪ್ರಣಯಚೇಷ್ಟೆಗಳೇ-ಉತ್ತಾನ ಶೃಂಗಾರದಿಂದ- ಬೆಳೆಯುತ್ತವೆ. ಇದರಲ್ಲಿಯೂ ನಾಯಕ-ನಾಯಿಕೆಯರ ಪರಸ್ಪರ ನಿರಾಕರಣೆ, ಆ ಮೇಲೆ ಪರಸ್ಪರರ ಪ್ರಣಯಯಾಚನೆ,ಕೊನೆಗೆ ಪ್ರಣಯಿಗಳ ಸಂಯೋಗ, ಈ ಎಲ್ಲ ಕಾರ್ಯಗಳಲ್ಲಿ ತಲೆಹಿಡುಕ ಸಖಾರಾಮಶಾತ್ಯಾನ ಹಾಸ್ಯಭರಿತ ಸಹಕಾರ-ಇವೆಲ್ಲವೂ ಇವೆ. ಇದರಲ್ಲಿ ಹೊಸದಾಗಿ ಸೇರಿಸಿರುವ ಬಾಲ ಗೋಪಾಲ-ಗೌಳಿಗಿತಿಯ ಪ್ರಣಯ ಸಂದರ್ಭದ ಪ್ರಾರಂಭ ಭಾಗ. ದಾಸರಾಟದಲ್ಲಿಯ ಬಾಲಗೋಪಾಲರ ಅರ್ಥರಹಿತ ಕುಣಿತದ ಭಾಗವನ್ನು ಬಿಟ್ಟು, ಅದರ ಸ್ಥಳದಲ್ಲಿ ಸಾರ್ಥವೆನಿಸುವಂತೆ, ಈ ಗೋಪಾಲ-ಗೊಲ್ಲತಿಯರ ಸಂಯೋಗಸಂದರ್ಭವನ್ನು

ಸೇರಿಸಿಕೊಂಡಿದ್ದಾನೆ–ಇಷ್ಟೇ ಹೊಸತನ"(ಬೆಟಗೇರಿ, ಕೃಷ್ಣಶರ್ಮ: ೧೯೭೬:೮೨). ಅಲ್ಲದೆ ಇದೇ ಮಾತನ್ನು ಎಚ್ ಕೆ ರಂಗನಾಥ ಅವರು ಹೇಳಿರುವರು. ಇತರ ಗ್ರಂಥಗಳಲ್ಲೂ ಕೂಡ ದಾಖಲಾಗಿದೆ. "ಮರಾಠಿ ಕಂಪನಿ ರಂಗಭೂಮಿಯು ಕನ್ನಡ ಜಾನಪದ ರಂಗಭೂಮಿಯ ಪ್ರಭಾವದಿಂದ ಅಸ್ತಿತ್ವಕ್ಕೆ ಬಂತು ಎಂಬುದನ್ನು ಎ ವಿ ಕುಲಕರ್ಣಿ, ಡಾ ಯಾಜ್ಞಿಕ್, ವಿ ಪಿ ದಾಂಡೇಕರ, ಮತ್ತು ಮಾಮಾ ವಾರೇರಕರ್–ಇವರಂತಹ ಮಹಾರಾಷ್ಟ್ರದ ವಿಮರ್ಶಕರು ಒಪ್ಪಿಕೊಂಡಿದ್ದಾರೆ. ಮರಾಠಿ 'ತಮಾಶಾ'ವು ಹಿಂದಿನ ಕನ್ನಡ ದಾಸರಾಟದ ಇನ್ನೊಂದು ರೂಪ, ಅಷ್ಟೇ"(ರಾಮಾನುಜಂ, ಪಿ ಎಸ್:೧೯೯೨: ೪೬೨). ಎಂಬುದು ಗಮನಾರ್ಹವಾದುದು. ಆದರೆ ಬಸವರಾಜ ಮಲಶೆಟ್ಟಿಯವರು ಇದನ್ನೊಪ್ಪದೇ 'ತಮಶಾ' ಅತಿಯಾದ ಅಶ್ಲೀಲತೆಯನ್ನು ಮೈಗೂಡಿಸಿಕೊಂಡು 'ಜಲಸಾ' ಆಯಿತೆಂದೂ... ನಮ್ಮ ದಾಸರಾಟದ ಹೆಣ್ಣುಗಳು ಕಾಮಚೇಷ್ಟೆಯ ಹಾವ–ಭಾವಗಳನ್ನು ಅಭಿನಯಿಸಿ ಕೀಳು ಅಭಿರುಚಿಯ ಪ್ರೇಕ್ಷಕರನ್ನು ಆಕರ್ಷಿಸುವಂತೆ ಪ್ರೇರಣೆಯನ್ನು ಈ ಜಲಸಾ ನೀಡಿದುದರಲ್ಲಿ ಸಂಶಯವಿಲ್ಲ. ಅಲ್ಲದೆ ಈ ದಾಸರಾಟದ ಹೆಣ್ಣುಗಳು ಗರತಿಯರಂತೂ ಅಲ್ಲವಲ್ಲ; ಜಲಸಾದವರಿಗೂ ಇವರಿಗೂ ಯಾವುದೇ ವ್ಯತ್ಯಾಸವಿಲ್ಲ" (ಮಲಶೆಟ್ಟಿ, ಬಸವರಾಜ: ೧೯೮೩: ೧೦೯) ಎಂದು ಪ್ರತಿಪಾದಿಸಿರುವರು. ದಾಸರಾಟದ ಬಗ್ಗೆ, ಅವರ ವೃತ್ತಿಜೀವನದ ಬಗ್ಗೆ ಅವರು ಬಳಸಿರುವ ಭಾಷೆಯನ್ನು ನೋಡಿದರೆ ಮಲಶೆಟ್ಟಿಯವರಿಗೆ ಜಿಗುಪ್ಸೆಯ ಪೂರ್ವಾಗ್ರಹ ಇದ್ದಂತಿದೆ.

ಈಗ ದಾಸರಾಟದ ಮೇಳಗಳೇ ಅಪರೂಪ. ಚಲನಚಿತ್ರಗಳು ಮತ್ತು ಆಧುನಿಕ ನಾಟಕಗಳ ಪ್ರಭಾವದಿಂದಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ಈಗ ದಾಸರಾಟದ ಮೇಳಗಳು ಸಂಪೂರ್ಣ ಮರೆಯಾಗಿಲ್ಲವಾದರೂ ಬೇರೆ ರೂಪದಲ್ಲಿ ಅದರಲ್ಲಿನ ಕಲಾವಿದರು ವೃತ್ತಿಯನ್ನು ಮುಂದುವರಿಸಿದ್ದಾರೆ. ಈಗಲೂ ಒಬ್ಬ ಗಂಡಸು ಮತ್ತು ಮೂರು ಅಥವಾ ನಾಲ್ಕು ಜನ ಹೆಂಗಸರ ಒಂದು ಗುಂಪು ಪೇಟೀಲು ಮತ್ತು ತಬಲಾ ಜೊತೆಗೆ ನರ್ತನ ಮಾಡಿ ಮಿಷಿ ತೆಗೆದುಕೊಂಡು ಬರುವುದಿದೆ. ಅಲ್ಲದೆ ಬೇರೆ ಬೇರೆ ಕಂಪನಿಗಳ ತಂಡಗಳಲ್ಲಿ ಕರೆಬಂದಾಗ ಪಾತ್ರ ಮಾಡಲು ಹೋಗುತ್ತಾರೆ. ಇನ್ನೂ ಅನೇಕ ನಟಿಯರು ತಮ್ಮ ಜನಪ್ರಿಯತೆಯನ್ನು ಕಾಯ್ದುಕೊಂಡಿದ್ದಾರೆ. ಬೇರೆ–ಬೇರೆ ನಾಟಕಗಳಲ್ಲಿ ಪಾತ್ರ ಮಾಡಲು ಇವರನ್ನು ಕರೆಯಲು ಬರುವವರ ಸಂಖ್ಯೆ ಕಡಿಮೆಯಾಗಿಲ್ಲ. ಈ 'ದಾಸರಾಟ'ದ ಮೇಳಗಳು ಇರುವ ಪ್ರಮುಖ ಊರುಗಳೆಂದರೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಹಂಸನೂರು ಮತ್ತು ಗುಳೇದಗುಡ್ಡ. ಹಂಸನೂರಿನ ದಾಸರ ನಟಿಯರೆಂದರೆ ಈಗಲೂ ಪ್ರಸಿದ್ಧಿ. ಆದರೆ ಈ ವೃತ್ತಿಯನ್ನು ಹಿಡಿಯುವವರ ಸಂಖ್ಯೆ ತೀರ ಕಡಿಮೆಯಾಗುತ್ತಿದೆಯೆಂದೂ ಶಿಕ್ಷಣ ಕಲಿಕೆಯ ಕಡೆಗೆ ಹೆಚ್ಚು ಗಮನ ಹರಿಸಲಾಗುತ್ತಿದೆಯೆಂದೂ ಹಂಸನೂರು ಗ್ರಾಮ ಪಂಚಾಯತಿಯ ಅಧ್ಯಕ್ಷೆಯಾದ ಚೆನ್ನದಾಸರ ಸಮುದಾಯದ ಶ್ರೀಮತಿ ರೇಣುಕಾ ಚಿಮ್ಮಲ (೩೬) ಅವರು ವಿವರಿಸುತ್ತಾರೆ(೧೯–೦೮–೨೦೦೭ ರಂದು ಹಂಸನೂರಿಗೆ ಕ್ಷೇತ್ರಕಾರ್ಯಕ್ಕೆ ಹೋದಾಗ ಹೇಳಿದ ಮಾಹಿತಿ).

ಈ ಪರಂಪರೆಯಲ್ಲಿ ಹೆಸರು ಮಾಡಿದ ವೃತ್ತಿರಂಗಭೂಮಿಯ ನಟಿಯರಲ್ಲಿ ಗುಳೇದಗುಡ್ಡದ ಯಲ್ಲೂಬಾಯಿ ಮತ್ತು ಅವರ ಮಗಳು ಗಂಗುಬಾಯಿ. ಕರ್ನಾಟಕ ವೃತ್ತಿರಂಗಭೂಮಿಯ ಮೊದಲ ನಟಿಯೆಂಬ ದಾಖಲೆ ಯಲ್ಲೂಬಾಯಿಯದು (ಮರಾತೆ, ರಾಮಕೃಷ್ಣ: ೧೯೯೪:೨೫೭).

ಅದೇ ರೀತಿ ಶ್ರೀಕೃಷ್ಣ ಪಾರಿಜಾತಕ್ಕೂ ಚೆನ್ನದಾಸರ ಸಮುದಾಯದವರ ಕೊಡುಗೆ ಅಪಾರವಾದುದು. ಆದರೆ ವಿದ್ವಾಂಸರು ಈ ಕಡೆಗೆ ಗಮನ ಹರಿಸಿಲ್ಲ. ಪಾರಿಜಾತಕ್ಕೂ ಈ ಸಮುದಾಯಕ್ಕೂ ಎಂಥಾ ನಂಟೆಂದರೆ ಶ್ರೀಕೃಷ್ಣಪಾರಿಜಾತದ ದಶಾವತಾರಗಳ ಅಭಿನಯದಿಂದಾಗಿ ಈ ಸಮುದಾಯದವರನ್ನು "ದಶವಂತ"ರೆಂದು ಕರೆಯಲಾಗುತ್ತಿದೆ. ಹಲವಾರು ದಶಕಗಳ ಕಾಲದಿಂದಲೂ ಇವರನ್ನು ಚೆನ್ನದಾಸರೆಂದಾಗಲೀ, ದಾಸರೆಂದಾಗಲೀ ಕರೆಯುವುದು ಅಥವಾ ಹೇಳುವುದು ಇಲ್ಲವೇ ಇಲ್ಲ. ದಶವಂತ ಅಥವಾ ದಶಂತರೆಂದೇ ಕರೆಯುತ್ತಾರೆ."ವೈಷ್ಣವದಾಸರು ನೃತ್ಯ ಸೇವೆಯಿಂದ ದೇವಾಲಯದಿಂದ ರಂಗಭೂಮಿಗೆ ಪ್ರವೇಶಿಸಿ ಮುಂದೆ ಗುಡಿಯ ಹೊರಗೂ ವಿಷ್ಣುಲೀಲಾ ಪ್ರದರ್ಶಕ ಕಥೆಗಳನ್ನು ಅಭಿನಯಿಸಲು ಆರಂಭಿಸಿದರೆನ್ನಬೇಕು. ಆಟದ ದಾಸರಿಗೆ 'ದಶಂತ'ರೆಂದು ನಾಮಾಂತರವಿರುವುದು. ಅವರ ಆಟದ ಮೂಲವಸ್ತು 'ದಶಾವತಾರ' ಲೀಲೆಯಾಗಿದ್ದಿತೆಂದು ಊಹಿಸಲು ಆಸ್ಪದವೀಯುತ್ತದೆ"(ಸುಂಕಾಪುರ, ಎಂ ಎಸ್ :೧೯೭೮: ೯೮). ಎಂದು ಜಾನಪದ ವಿದ್ವಾಂಸರಾದ ಬಿ ಬಿ ಹೆಂಡಿಯವರು ಹೇಳಿರುವರು.

ಬಿಜಾಪೂರ ಜಿಲ್ಲೆಯ ಇಂಡೀ ತಾಲೂಕಿನ ಚವಡಿಹಾಳ, ಬಬಲಾದಿ ಮಾವಿನಹಳ್ಳಿ, ವಿಭೂತಿಹಾಳ, ಗೊಳಸಂಗಿ ಮುಂತಾದ ಊರುಗಳಲ್ಲಿ ದಶವಂತ ಸಮುದಾಯಗಳು ನೆಲೆಸಿವೆ. ಇಡೀ ಪರಿಜಾತ ತಂಡಗಳೇ ಅವರವಾಗಿದ್ದವು. ಈ ಸಮುದಾಯದ ಬಹುತೇಕ ಜನ ಕಲಾವಿದರೇ ಆಗಿದ್ದಾರೆ. ಸ್ತ್ರೀಯರಂತೂ ರುಕ್ಮಿಣಿ, ಸತ್ಯಭಾಮಾ, ಗೊಲ್ಲತಿ, ಕೊರವಂಜಿ ಪಾತ್ರಗಾರಿಕೆಗೆ ಹೆಸರಾದವರು. ಇವರಲ್ಲಿ ಸದ್ಯ ಇರುವ ಪ್ರಸಿದ್ಧ ಕಲಾವಿದೆರೆಂದರೆ ಶಾಂತಮ್ಮ ಮತ್ತು ಲಲಿತಮ್ಮ.

ಈ ಮೇಲೆ ವಿವರಿಸಿದ ದಾಸರಾಟ ಮತ್ತು ಪಾರಿಜಾತಗಳಲ್ಲಿ ಭಾಗವಹಿಸುವ ಚೆನ್ನದಾಸರ ಸಮುದಾಯದವರಲ್ಲಿ ಬಸವಿ ಬಿಡುವ ಪದ್ಧತಿಯಿತ್ತು. ವಿದ್ಯಾವಂತರಾಗುತ್ತಿರುವ ಯುವಕರ ವಿರೋಧದಿಂದ ಈ ಅನಿಷ್ಟ ಪದ್ಧತಿಯನ್ನು ತಡೆಹಿಡಿಯಲಾಗುತ್ತಿದೆ.

ರಾಯಚೂರು ಜಿಲ್ಲೆಯಲ್ಲಿ ಹಾಗೂ ಬಳ್ಳಾರಿ ದಾವಣಗೇರಿ ಜಿಲ್ಲೆಗಳಲ್ಲಿ ಈ ಮುಂಚಿನಿಂದಲೂ ಬಯಲಾಟಗಳು ಈ ಸಮುದಾಯದಲ್ಲಿ ಉಪಜೀವನದ ವೃತ್ತಿಯಾಗಿ ಬೆಳೆದುಕೊಂಡು ಬಂದಿವೆ. ಇವರಾಡುವ ಆಟಗಳಲ್ಲಿ ವಿರೋಚನಾ, ಬಸ್ಮಾಸುರ, ರತಿಕಲ್ಯಾಣ, ಸತ್ಯವ್ರತ, ಶಶಿರೇಖಾ ಪರಿಣಯ, ಅಭಿಮನ್ಯು ಕಾಳಗ, ಕಂಸಾಶೂರನಕಥೆ, ಕರಿಬಂಟ, ಪುಂಡರೀಕಾಕ್ಷ ಮುಂತಾದ ಕಥಾವಸ್ತುವುಳ್ಳ ಬಯಲಾಟಗಳನ್ನು ಅಭಿನಯಿಸುತ್ತಾರೆ. ಮತ್ತು ಸ್ವಂತ ಬಯಲಾಟದ ತಂಡಗಳನ್ನು ಕಟ್ಟಿಕೊಂಡಿರುತ್ತಾರೆ.

ಆಧುನಿಕತೆಗೆ ಒಗ್ಗಿಕೊಳ್ಳುತ್ತಿರುವ ಇವರು ಹೊಸ ಜನಾಂಗದ ಅಪೇಕ್ಷೆಯಂತೆ– ಸಾವುತಂದ ಸೌಭಾಗ್ಯ, ಪ್ರೇಮರಣರಂಗ, ಕುಡುಕ ಕಟ್ಟಿದ ತಾಳಿ, ಅತ್ತಿಗೆಗೆ ಬಂದ ಅಗ್ನಿ ಪರೀಕ್ಷೆ, ಬೀಸಿದ ಜಾಲ ಸುಟ್ಟಿತು ಶೀಲ– ಮುಂತಾದ ಹೊಸ ಬಗೆಯ ಬಯಲಾಟಗಳನ್ನು ಆಡುತ್ತಾರೆ. ಬಯಲಾಟದ ವೃತ್ತಿ ಉಪಜೀವನಕ್ಕೆ ಈಗೀಗ ಆಸರೆಯಾಗದಿದ್ದರೂ ಬಣ್ಣದ ಸೆಳೆತ ಇವರನ್ನು ಇನ್ನೂ ಬಿಟ್ಟಿಲ್ಲ.

ಇದೇ ಸಮುದಾಯದ ಅಂಗವಾಗಿರುವ ಮೈಸೂರು ಭಾಗದ ದೊಂಬಿದಾಸರಲ್ಲಿ ೧೮ನೇ ಶತಮಾನದಿಂದಲೂ ಬಯಲಾಟ, ಯಕ್ಷಗಾನ ಮೇಳಗಳಿರುವುದಾಗಿ ತಿಳಿದು ಬರುತ್ತದೆ. ಇವರಿಗೆ ಹೆಣ್ಣುವೇಷದವರು, ಭಾಗವತ ದಾಸರು, ಆಟದದಾಸರು ಎಂಬು ದಾಗಿಯೂ ಕರೆಯುವ ರೂಢಿಯಿದೆ. ಮೈಸೂರು ತಾಲೂಕಿನ ಈ ಸಮುದಾಯದ ಸ್ಥಳೀಯ ಮೂಲ ಪುರುಷ ವೆಂಕಟಪ್ಪ ಭರತನಾಟ್ಯ ಮತ್ತು ಯಕ್ಷಗಾನ ಕಲಾವಿದನಾಗಿದ್ದಾ ನೆಂಬುದನ್ನು ವಿ ಗುರುಮೂರ್ತಿ ಹೇಳುತ್ತಾರೆ(ಕುಪ್ಪೆ, ನಾಗರಾಜ: ೨೦೦೩: ೪೨). ಈ ಸಮುದಾಯದವರಾಡುವ 'ಕರಿಬಂಟನ ಕಾಳಗ' ಯಕ್ಷಗಾನವು ಸುಪ್ರಸಿದ್ಧವಾದುದಾಗಿದೆ. ಇವರ ಬಯಲಾಟಗಳಲ್ಲಿ "ಸತ್ಯ ಹರಿಶ್ಚಂದ್ರ, ನಳದಮಯಂತಿ, ಸತ್ಯವ್ರತ, ಗಂಗೆಗೌರಿ, ರಾಜಾವಿಕ್ರಮ, ಶನಿಕಥೆ, ಭಕ್ತಪ್ರಹ್ಲಾದ ಮೊದಲಾದವು ಪ್ರಮುಖವಾದುವುಗಳಾಗಿವೆ.

ಹೀಗೆ ಕನ್ನಡ ವೃತ್ತಿ ರಂಗಭೂಮಿಗೆ ಮಹತ್ವಪೂರ್ಣ ಕೊಡುಗೆ ನೀಡಿದ ದೀರ್ಘ ಪರಂಪರೆ ಚೆನ್ನದಾಸರ ಸಮುದಾಯದ್ದಾಗಿದೆ. ಈ ಸಮುದಾಯದ ರಂಗಭೂಮಿಯ ಪ್ರಾಚೀನತೆಯನ್ನು ಹಲವಾರು ವಿದ್ವಾಂಸರು ಕ್ರಿಸ್ತಶಕದ ಪ್ರಾರಂಭದಿಂದಲೇ ಗುರುತಿಸಲು ಪ್ರಯತ್ನಿಸುತ್ತಿದ್ದಾರೆ. ಅಲ್ಲದೇ ವೃತ್ತಿರಂಗಭೂಮಿಯ ಮೇಲೆ ಮೊದಲು ಪ್ರವೇಶಿಸಿದ ಅಥವಾ ಪಾದಾರ್ಪಣೆ ಮಾಡಿದ ಸ್ತ್ರೀಯೂ ಕೂಡ ಇದೇ ಸಮುದಾಯದವಳೆಂಬುದು ಒಂದು ದಾಖಲೆಯಾಗಿದೆ. ಪ್ರಾರಂಭದ ದಿನಗಳಿಂದಲೂ 'ದಾಸರಾಟ' ತುಂಬಾ ಜನಪ್ರಿಯವಾಗಿತ್ತೆಂಬುದಕ್ಕೆ ವಿಜಾಪೂರದ ಅಕ್ಕಮ್ಮನ ಪಾಳು ಅರಸೀ ಬೀದಿಯ ಕಥೆ ಐತಿಹ್ಯವಾಗಿದೆ.

ಈ ಸಮುದಾಯದಲ್ಲಿ ಎರಡು ರೀತಿಯ ಆಟದ ಮೇಳಗಳು ಕಂಡುಬರುತ್ತವೆ. ಒಂದು– ಸ್ತ್ರೀಯರೇ ಮೇಳನಾಯಕಿಯಾಗಿ ಸ್ತ್ರೀಯರು ಆಡುವ ಆಟಗಳದ್ದು. ಮತ್ತೊಂದು ಪುರುಷರೇ ಸ್ತ್ರೀವೇಷ ಹಾಕಿ ನಟಿಸುವ ಪುರುಷ ಮೇಳಗಳದ್ದು.

ಕನ್ನಡದ 'ದಾಸರಾಟ'ದ ಪ್ರಭಾವದಿಂದಾಗಿ ಮರಾಠಿಯ 'ತಮಾಶಾ' ಹುಟ್ಟಿತೆಂದೂ, ತಮಾಶಾ ಮತ್ತು ದಾಸರಾಟದ ಸಮ್ಮಿಳಿತದಿಂದಾಗಿ 'ರಾಧಾನಾಟ'ದ ಹುಟ್ಟಿಗೆ ಕಾರಣ ವಾಯಿತೆಂದೂ ಹೆಚ್ಚಿನ ವಿದ್ವಾಂಸರು ಒಲವು ತೋರಿದ್ದಾರೆ. ಚೆನ್ನದಾಸರ ಸಮುದಾಯದ "ದಶವಂತ" ಎನ್ನುವ ಸಮುದಾಯ ಶ್ರೀಕೃಷ್ಣ ಪಾರಿಜಾತದ ತಂಡಗಳನ್ನು ಹೊಂದಿತ್ತೆಂದೂ ತಿಳಿದು ಬರುತ್ತದೆ.

ವಿಶೇಷವಾಗಿ ವೈಷ್ಣವ ಧರ್ಮದ ಕಥಾನಕಗಳು ಮುಖ್ಯ ಹಾಗೂ ಸಾಂದರ್ಭಿಕ ವಾಗಿರುವ ವಸ್ತುವುಳ್ಳ ಬಯಲಾಟಗಳು ಇವರದ್ದಾಗಿವೆ. ಆಧುನಿಕ ಕಾಲಕ್ಕೆ ತಕ್ಕಂತೆ

ಈ ಸಮುದಾಯದ ಬಯಲಾಟಗಳ ವಸ್ತುವಿನಲ್ಲಿ ಬದಲಾವಣೆಯಾಗಿ ಸಾಮಾಜಿಕ ಆಟಗಳಾಗಿ ಪರಿವರ್ತನೆಯಾಗುತ್ತಿವೆ. ಈ ಕಸುಬಿನಿಂದ ಆರ್ಥಿಕ ಭದ್ರತೆಯಿಲ್ಲದಿದ್ದರೂ ಬಣ್ಣದ ಸೆಳೆತದಿಂದ ಈ ಸಮುದಾಯ ಇನ್ನೂ ಪೂರ್ಣವಾಗಿ ಹೊರಬಂದಿಲ್ಲ.

ರಂಗಭೂಮಿಯ ಪ್ರಸಿದ್ಧ ಕಲಾವಿದರು

**ಯಲ್ಲೂಬಾಯಿ :** ಕರ್ನಾಟಕ ವೃತ್ತಿ ರಂಗಭೂಮಿಯ ಮೊದಲ ನಟಿಯೆಂಬ ಖ್ಯಾತಿ ಈ ಸಮುದಾಯದ ಗುಳೇದ ಗುಡ್ಡದ ಯಲ್ಲೂಬಾಯಿಗೆ ಸಲ್ಲುತ್ತದೆ. ಈಗಿನ ಬಾಗಲಕೋಟೆಯ ಬಾದಾಮಿ ತಾಲೂಕಿನ ಗುಳೇದಗುಡ್ಡ ಸಮೀಪದ ಅಲತನೂರಿನ ಚೆನ್ನದಾಸರ ಮನೆತನದವಳು. ಸುಂದರ ರೂಪ, ಸುಮಧುರ ಕಂಠ ಯಲ್ಲೂಬಾಯಿಯ ದಾಗಿತ್ತು. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ಆಕೆಯು ಯೌವ್ವನದಲ್ಲಿ ಗುಳೇದಗುಡ್ಡದ ಗುರುಲಿಂಗಪ್ಪ ಗಂಗಣ್ಣವರ ಅವರೊಂದಿಗೆ ಬದುಕು ಮತ್ತು ವೃತ್ತಿ ಯೊಂದಿಗೆ ಜೊತೆಯಾಗಿ ಪ್ರಸಿದ್ಧ ನಟ, ನಟಿಯರಾಗಿ ಜನಮೆಚ್ಚುಗೆ ಗಳಿಸಿದವರು.

ಹುಲ್ಲೂರು ಪರಪ್ಪನವರ ನಾಟಕ ಮಂಡಳಿ, ಕೊಣ್ಣೂರು ಶಿವಮೂರ್ತಿ ಸ್ವಾಮಿಗಳ ಕಂಪನಿ, ವಾಮನ ರಾಯರ ಕಂಪನಿಗಳಲ್ಲಿ ದೀರ್ಘ ಸೇವೆ ಮಾಡಿದ ಯಲ್ಲೂಬಾಯಿ ಸ್ವಂತ ಕಂಪನಿ ಕಟ್ಟಿ ಸೇವೆ ಮಾಡಿದವಳು. ರಾಜಾ ಹರಿಶ್ಚಂದ್ರ ನಾಟಕದಲ್ಲಿ ಚಂದ್ರಮತಿ ಯಾಗಿ, ಬಸವೇಶ್ವರ ನಾಟಕದಲ್ಲಿ ಮೊದಲು ಮಾದಲಾಂಬಿಕೆಯಾಗಿ, ನಂತರ ಬಿಜ್ಜಳನ ಪಾತ್ರಧಾರಿಯಾಗಿ ಮಾಡಿದ ಅಭಿನಯವನ್ನು ಹಲವು ಹಿರಿಯ ರಂಗಭೂಮಿ ಕಲಾವಿದರು ಮೆಚ್ಚಿ ದಾಖಲಿಸಿದ್ದಾರೆ. 'ಭಕ್ತ ಪುಂಡಲೀಕ'ದಲ್ಲಿ ಪುಂಡಲೀಕನ ತಾಯಿಯಾಗಿ, 'ಸಾಧ್ವಿಸಖೂಬಾಯಿ'ಯಲ್ಲಿ ಚಂಡಿಕಾಬಾಯಿಯಾಗಿ, 'ಸಂದೇಹ ಸಾಮ್ರಾಜ್ಯ'ದಲ್ಲಿ ವಿಜಯರಾಜನ ಪಾತ್ರಗಳು ಸಂಗೀತ ದಿಗ್ಗಜರಾದ ಬಸವರಾಜ ಮನಸೂರ ಅಂಥವರನ್ನೂ ಬೆರಗು ಗೊಳಿಸುವಂಥದ್ದಾಗಿತ್ತು. ರಂಗಭೂಮಿ ಕಲಾವಿದೆಯಾಗಿ ಯಲ್ಲೂಬಾಯಿ ಬದುಕಿನುದ್ದಕ್ಕೂ ರಂಗ ಕಲೆಯನ್ನೆ ನಂಬಿ ಬಾಳಿದವಳು.

**ಗಂಗೂಬಾಯಿ**

ಆಗಿನ ರಂಗಭೂಮಿಯಲ್ಲಿ 'ಗಾನರತ್ನ' ಬಿರುದಿನಿಂದ ಪ್ರಖ್ಯಾತಳಾಗಿದ್ದ ಮತ್ತೊಬ್ಬ ಕಲಾವಿದೆ ಗಂಗೂಬಾಯಿ. ಖ್ಯಾತನಟಿ ಗುಳೇದಗುಡ್ಡದ ಯಲ್ಲೂಬಾಯಿಯ ಸಾಕು ಮಗಳಾದ ಗಂಗೂಬಾಯಿ ಕೂಡ ಗುಳೇದಗುಡ್ಡದ ಗಂಗೂಬಾಯಿ ಎಂದೇ ಪ್ರಸಿದ್ಧಿ ಪಡೆದವಳು. ಆರು ವರ್ಷದ ಬಾಲಕಿಯಾಗಿದ್ದಾಗ ಕೊಣ್ಣೂರ ಕಂಪನಿ, ಗೋಕಾಕ ಕ್ಯಾಂಪಿನಲ್ಲಿ ಹರಿಶ್ಚಂದ್ರ ನಾಟಕದಲ್ಲಿ ತಾಯಿಯ ಜೊತೆ ರೋಹಿತಾಶ್ವನ ಪಾತ್ರದಲ್ಲಿ ಪ್ರೇಕ್ಷಕರನ್ನು ಮಂತ್ರ ಮುಗ್ಧಗೊಳಿಸುತ್ತಿದ್ದಳು. ಸಾದುಗಪ್ಪಾಗಿದ್ದರೂ ಸುಂದರ ರೂಪ, ಕೋಮಲಕಂಠದಿಂದ ರಂಗಭೂಮಿಯಲ್ಲಿ ಗಾನರತ್ನವೆಂಬ ಬಿರುದಿಗೆ ಪಾತ್ರಳಾದವಳು ಗಂಗೂಬಾಯಿ.

ತಾಯಿ ಯಲ್ಲೂಬಾಯಿಯ ಪ್ರೋತ್ಸಾಹದಿಂದಾಗಿ ಬಾಲ್ಯದಲ್ಲಿಯೇ ವಾಮನರಾಯರ ಮೂಲಕ ಪ್ರಾಥಮಿಕ ಸಂಗೀತವನ್ನು, ನಂತರ ಪುಣೆಯ ಬಾಲಕೃಷ್ಣಬುವಾ ಕಪಿಲೇಶ್ವರಿ

ಯವರ ಹತ್ತಿರ, ಕೆಲಕಾಲ ಹಿಂದುಸ್ತಾನಿ ಸಂಗೀತವನ್ನು ಅಬ್ದುಲ್ ಕರೀಂಖಾನ್‌ರ ಹತ್ತಿರ ಅಲ್ಲದೆ ಮಹಾರಾಷ್ಟ್ರದ ಕೋಗಿಲೆ ಶಂಕರರಾವ್ ಸರನಾಯಕ ಅವರಲ್ಲಿ ಎರಡು ವರ್ಷ ಹೀಗೆ ಸಂಗೀತ ಜ್ಞಾನಪಡೆದು ರಂಗಭೂಮಿಗೆ ಮರಳಿದಳು. ವಾಮನ ರಾಯರ ನಾಟಕಗಳ ನಾಯಕಿಯಾಗಿ ಸಂಗೀತ ಅಭಿನಯಗಳ ಕೌಶಲ್ಯದಿಂದ ಬೇಗನೇ ಪ್ರಸಿದ್ಧಿಗೆ ಬಂದಳು. ಪಾರ್ವತಿ ಸತ್ವಪರೀಕ್ಷೆ, ಪದ್ಮಾವತಿ ಪರಿಣಯ, ಸಾಧ್ವಿಸಖೂಬಾಯಿ, ಸಂದೇಹ ಸಾಮ್ರಾಜ್ಯ ನಾಟಕಗಳಲ್ಲಿ ಅಭಿನಯ ಮತ್ತು ಗಾಯನದ ಮೂಲಕ ಕೀರ್ತಿಯ ಉತ್ತುಂಗಕ್ಕೇರಿದಳು. ಮಾಧವರಾವ ದೇಶಪಾಂಡೆಯವರನ್ನು ಮದುವೆಯಾಗಿ ೧೯೨೫ರಲ್ಲಿ ಶ್ರೀಕೃಷ್ಣ ನಾಟಕ ಮಂಡಳಿಯ ಒಡತಿಯಾಗಿ ಏಳುವರುಷ ಅದನ್ನು ಮುನ್ನಡೆಸಿದಳು. ಗುಬ್ಬೀ ವೀರಣ್ಣನವರ ಸೌಭದ್ರ ಚಲನ ಚಿತ್ರದಲ್ಲಿಯ ರುಕ್ಮಿಣಿ ಪಾತ್ರಕ್ಕಾಗಿ ಆಯ್ಕೆಯಾದಳು, ಬಸವರಾಜ ಮನಸೂರರ ಕಲಾಪ್ರಕಾಶ ನಾಟಕ ಮಂಡಳಿ ನಿಲ್ಲುವ ಸ್ಥಿತಿಯಲ್ಲಿದ್ದಾಗ ನಾಯಕಿಯಾಗಿ ನಟಿಸಿ ಅದಕ್ಕೆ ಚಾಲನೆ ನೀಡಿದಳು. ಹೀಗೆ ನಟಿಯಾಗಿ, ಗಾಯಕಿಯಾಗಿ, ನಾಟಕ ಮಂಡಳಿಯ ಒಡತಿಯಾಗಿ ರಂಗಭೂಮಿಗಾಗಿ ಬದುಕನ್ನೇ ಮುಡುಪಾಗಿಟ್ಟ ಗಂಗೂಬಾಯಿ ೧೦ ಡಿಸೆಂಬರ್ ೧೯೪೧ ರಂದು ಕ್ಷಯರೋಗಕ್ಕೆ ಬಲಿಯಾದರು.

ಇದೇ ತೆರನಾಗಿ ಹಂಸನೂರಿನ ದಿ. ಯಂಕವ್ವ ಹನುಮವ್ವ ಚಿಮ್ಮಲ ಮತ್ತು ಆವರ ಮಗಳಾದ ಯಲ್ಲವ್ವ ಯಂಕವ್ವ ಚಿಮ್ಮಲ, ಹಂಸನೂರಿನ ಹನುಮವ್ವ ಗುಡೇಕಾರ ಇವರುಗಳಲ್ಲದೆ ಈಗಲೂ ವೃತ್ತಿಯಲ್ಲಿರುವ ಕಲಾವಿದೆಯರೆಂದರೆ ಹಂಸನೂರಿನ ಶಾರಾಶ್ರೀ ಫಕೀರಪ್ಪ ಚಿಂತಾಕಲ್, ಇಂದಿರಾ ಅಂಬವ್ವ ಚಿಮ್ಮಲ, ಕಮಲಾಕ್ಷಿ ಯಲ್ಲವ್ವ ಚಿಮ್ಮಲ ಇವರುಗಳೆಲ್ಲಾ ಪ್ರತಿಭಾವಂತ ನಟಿಯರೆಂದಿನಿಸಿದ್ದಾರೆ.

ಶ್ರೀಕೃಷ್ಣಪಾರಿಜಾತ ಮೇಳದ ಕಲಾವಿದರಾಗಿ ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚವಡಿಹಾಳದ ಶ್ರೀಮತಿ ಶಾಂತಾಬಾಯಿ ತಾರಾಬಾಯಿ ದಶವಂತ, ಲಲಿತಾ ಸೋನೂ ಬಾಯಿ ದಶವಂತ ಈಗಿರುವ ಪ್ರಸಿದ್ಧ ಕಲಾವಿದೆಯರು. ಗೌಳಗಿತ್ತಿ, ಸತ್ಯಭಾಮೆ, ಕೊರವಂಜಿ ಪಾತ್ರಗಳಲ್ಲದೆ ಅನೇಕ ಸಾಮಾಜಿಕ ನಾಟಕಗಳಲ್ಲಿ ಪಾತ್ರವಹಿಸಿ ಪ್ರತಿಭೆ ಮೆರೆದರೂ ಪುರಸ್ಕಾರ ಲಭಿಸಿಲ್ಲ.

ಯಕ್ಷಗಾನ ಬಯಲಾಟದಲ್ಲೂ ಈ ಸಮುದಾಯದ ಕಲಾವಿದರಿದ್ದಾರೆ. ಈ ಮೊದಲು ಸಮುದಾಯದಲ್ಲಿ ಯಕ್ಷಗಾನ ಮೇಳಗಳಿದ್ದ ಬಗ್ಗೆ ಉಲ್ಲೇಖಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯ ಮರವಂತೆ ನರಸಿಂಹದಾಸ್ ಅವರು ಯಕ್ಷಗಾನದ ತೆಂಕುತಿಟ್ಟು ಮತ್ತು ಬಡಗುತಿಟ್ಟುಗಳಲ್ಲಿ ಪ್ರಸಿದ್ಧ ಭಾಗವತರು. ಅವರಿಗೆ ರಾಜ್ಯೋತ್ಸವ ಪ್ರಶಸ್ತಿಯು ಸಂದಿದೆ. ಅವರ ಮಗ ದೇವರಾಜ ಕೂಡ ಯಕ್ಷಗಾನ ಭಾಗವತ ಕಲಾವಿದರು, ಇದೇ ರೀತಿಯಲ್ಲಿ ಮರವಂತೆಯ ಶ್ರೀನಿವಾಸದಾಸ ಅವರು ಬಡಗುತಿಟ್ಟು ಕಲಾವಿದರಾದರೆ, ಅವರ ಮಗ ಕೃಷ್ಣದಾಸ ಕೂಡ ಭಾಗವತ ಕಲಾವಿದರಾಗಿ ಹೆಸರಾಗಿದ್ದಾರೆ, ಕಲಾವಿದರಾಗಿ ಬಚ್ಚೆ ರಾಘವದಾಸ ಮತ್ತು ಯಕ್ಷಗಾನದ ಅರ್ಥಧಾರಿಗಳಾಗಿ, ಅವಿದ್ಯಾವಂತರಾದ

ಕೋಟೆಕಾರ ಬಗಂಬಿಲದ ಶೇಷಪ್ಪದಾಸ್, ಎಕ್ಕಾರು ಸಂಜೀವದಾಸ್ ಅವರುಗಳು ಈ ಸಮುದಾಯದ ಕಲಾವಿದರಾಗಿದ್ದಾರೆ.

## ಜನಪದ ವಾದ್ಯ, ವಾದನ ಪರಿಕರಗಳು

ವೈಷ್ಣವ ಧರ್ಮ ಪ್ರಸಾರಕ್ಕಾಗಿ ದೀಕ್ಷೆ ತೆಗೆದುಕೊಂಡು ಆ ಧರ್ಮದ ಜನಪರ ತತ್ವಗಳನ್ನು ಜನಸಾಮಾನ್ಯರಿಗೆ ತಲುಪಿಸಲು ಭಿಕ್ಷುಕ ವೃತ್ತಿಯನ್ನು ಈ ಸಮುದಾಯ ಅನುಸರಿಸಿತು. ಮೂಲತಃ ಕಲಾವಿದರಿಂದೊಡಗೂಡಿದ ಈ ಸಮುದಾಯ ತಮಗೆ ಅನುಕೂಲವಾದ ಕಲಾ ಮಾಧ್ಯಮವನ್ನು ವಿವಿಧ ವೃತ್ತಿಗಳನ್ನಾಗಿ ಸ್ವೀಕರಿಸಿತು. ಅವುಗಳಲ್ಲಿ ಪ್ರಮುಖವಾಗಿ ತತ್ವಪದಕಾರರು, ಬಯಲಾಟ ಆಡುವವರು, ವಿಷ್ಣು ಸ್ತೋತ್ರ ಮಾಡುವವರು ಎಂದು ಗುರುತಿಸಬಹುದು.

ತತ್ವಪದಕಾರರು ಬಳಸುವ ಪ್ರಮುಖ ವಾದ್ಯವೆಂದರೆ, ಏಕತಾರಿ, ತಂಬೂರಿ ಅಥವಾ ದಂಡಿಗೆ. ವಿಶೇಷವಾಗಿ ಒಬ್ಬರೇ ಭಿಕ್ಷೆಗೆ ಹೊರಟಾಗ ಏಕತಾರಿ ಇಲ್ಲವೆ ತಂಬೂರಿಯನ್ನು ಮಾತ್ರ ಒಯ್ಯುತ್ತಾರೆ. ಭುಜಕ್ಕೆ ಇಳಿಬಿದ್ದ ಜೋಳಿಗೆ, ಕೈಯಲ್ಲಿ ಏಕತಾರಿ ಸಾಮಾನ್ಯವಾಗಿರುತ್ತದೆ. ಮೂರು ಜನ ಹೊರಟರೆ, ಒಬ್ಬರು ಏಕತಾರಿ ಮತ್ತೊಬ್ಬರು ಶಂಖ, ಮಗದೊಬ್ಬರು ಜಾಗಟೆ ನುಡಿಸುತ್ತಿರುತ್ತಾರೆ. ಇವರಲ್ಲಿ ತಂಬೂರಿಯವ ಹಾಡುತ್ತಿದ್ದರೆ ಉಳಿದಿಬ್ಬರು ಹಾಡಿನ ಪಲ್ಲವಿಯ ಕೊನೆಯಲ್ಲಿ 'ಗೋವಿಂದ, ಗೋವಿಂದ' ಎನ್ನುತ್ತ ಸಂದರ್ಭಕ್ಕೆ ತಕ್ಕಂತೆ ಜಾಗಟೆ ಬಾರಿಸುವ, ಶಂಖ ಊದುವ ಕಾರ್ಯ ಮಾಡುತ್ತಾರೆ. ಇತ್ತೀಚೆಗೆ ತಂಬೂರಿಯ ಜೊತೆಗೆ ಪಿಟೀಲು ನುಡಿಸುತ್ತಿರುವುದು ಕಂಡು ಬರುತ್ತದೆ. ಇದಕ್ಕೆ ಕನ್ನಡದ ಪ್ರಸಿದ್ಧ ತತ್ವಪದಕಾರರಾಗಿರುವ ಮಾರೆಪ್ಪ ಮರೆಪ್ಪ ದಾಸರ ಅವರನ್ನು ಉದಾಹರಿಸಬಹುದು.

ಬಯಲಾಟ ಆಡುವ ಮೇಳಗಳಲ್ಲಿ ಪೇಟಿ, (ಹಾರ್ಮೋನಿಯಂ), ತಬಲಾ, ಡಪ್ಪು, ಕೈತಾಳಗಳು ಪ್ರಮುಖ ವಾದನ ಪರಿಕರಗಳಾಗಿ ಬಳಕೆಗೊಳ್ಳುತ್ತವೆ. ಇದಕ್ಕೆ ಶ್ರೀಕೃಷ್ಣ ಪಾರಿಜಾತಕ್ಕೆ ಹೆಸರಾಗಿರುವ ದಶವಂತರು ಹಾಗೂ ಆಟದ ದಾಸರು ಅಥವಾ ಹೆಣ್ಣು ವೇಷದವರನ್ನು ಉದಾಹರಿಸಬಹುದು. ಹಾಗೂ ಈ ಸಮುದಾಯದ "ದಾಸರಾಟ" ದವರು ಕೂಡ ಇವೇ ವಾದ್ಯಗಳನ್ನು ಬಳಸುತ್ತಾರೆ.

ವಿಷ್ಣು ಸ್ತೋತ್ರ ಮಾಡುತ್ತ ಭಿಕ್ಷೆ ಬೇಡುವವರಲ್ಲಿ ಶಂಖ; ಜಾಗಟೆ, ಚೆನ್ನು ಅಥವಾ ಭೋಂಕಿ ಸಾಮಾನ್ಯವಾಗಿರುತ್ತದೆ. ಇವರು ಹಾಡಬಹುದು, ಹಾಡದೆ ಇರಬಹುದು. ಆದರೆ ಪ್ರತಿ ಮನೆ ಮುಂದೆ ಇಲ್ಲವೆ ಹನುಮಂತನ ಗುಡಿಯ ಮುಂದೆ "ಶ್ರೀಮದ್ ಲಕ್ಷ್ಮೀ ವೆಂಕಟರಮಣ ಗೋವಿಂದಾ ಗೋವಿಂದ" ಎಂದು ವಿಷ್ಣುನಾಮ ಸ್ತೋತ್ರ ಮಾಡುತ್ತಾರೆ. ಇವರನ್ನು ಸಾಮಾನ್ಯವಾಗಿ ದಾಸಯ್ಯ, ಶಂಖದಾಸ ಎಂದು ಕರೆಯುವುದು ವಾಡಿಕೆ. ಈ ಮಧ್ಯೆ 'ಚಕ್ರವಾದ್ಯ' ವನ್ನು ಬಳಸುವ ದಾಸರು ಬೆಳಗಾವಿ, ಧಾರವಾಡ, ದಾವಣಗೇರಿ ಮತ್ತು ಮೈಸೂರು ಭಾಗಗಳಲ್ಲಿ ಇದ್ದರು. ಇವರನ್ನು 'ಚಕ್ರವಾದ್ಯ ದಾಸ'ರೆಂದು ಕರೆಯುತ್ತಿದ್ದರು.

ಒಟ್ಟಾರೆಯಾಗಿ ಈ ಮೇಲಿನ ಎಲ್ಲ ಕಲಾಕಾರರ ಗುಂಪಿನಿಂದ ಈ ಸಮುದಾಯದ ವಾದ್ಯಗಳನ್ನು ನಾಲ್ಕು ಬಗೆಯಾಗಿ ವಿಂಗಡಿಸಬಹುದು. ಶೃತಿ ವಾದ್ಯಗಳಲ್ಲಿ ತಂತಿವಾದ್ಯಗಳಾದ ಏಕತಾರಿ, ದಂಡಿಗೆ, ತಂಬೂರಿ, ಇನ್ನೊಂದು ರೀತಿಯ ಶೃತಿವಾದ್ಯ ಪೇಟಿ ಅಥವಾ ಹಾರ್ಮೋನಿಯಂ; ಎರಡನೆಯದಾಗಿ ಗಾಳಿವಾದ್ಯಗಳಲ್ಲಿ ಶಂಖ, ಚೆನ್ನು ಅಥವಾ ಭೋಂಕಿ; ಮೂರನೆಯದಾಗಿ ಲೋಹವಾದ್ಯಗಳಲ್ಲಿ ಕೈತಾಳ ಮತ್ತು ಜಾಗಟೆ ಹಾಗೂ ನಾಲ್ಕನೆಯದಾಗಿ ಚರ್ಮವಾದ್ಯಗಳಲ್ಲಿ ಡಪ್ಪು, ದಮ್ಮಡಿ, ಚಕ್ರವಾದ್ಯ ಮತ್ತು ಮೃದಂಗ. ಈ ಎಲ್ಲ ವಾದನ ಪರಿಕರಗಳ ಕುರಿತು ಸಂಕ್ಷಿಪ್ತ ವಿವರಣೆಯನ್ನು(ಇಲ್ಲಿನ ಕೆಲವು ವಾದ್ಯಗಳ ಮಾಹಿತಿಯನ್ನು ಡಾ ಜೀ ಶಂ ಪರಮಶಿವಯ್ಯ ಅವರ ಕರ್ನಾಟಕದ ಜನಪದ ವಾದ್ಯಗಳು (೧೯೮೪) ಹಾಗೂ ಡಾ ವೀರಣ್ಣ ರಾಜೂರ ಅವರು ಸಂಪಾದಿಸಿರುವ ಜಾನಪದ ಸಾಹಿತ್ಯ ದರ್ಶನ ಸಂಪುಟ-೧೪ (೧೯೯೨) ಗ್ರಂಥಗಳಿಂದ ಸಂಗ್ರಹಿಸಲಾಗಿದೆ). ಈ ಕೆಳಗಿನಂತೆ ನೀಡಲಾಗಿದೆ.

ಏಕತಾರಿ : ಶ್ರುತಿವಾದ್ಯಗಳಲ್ಲಿ ಬಹಳ ಪ್ರಸಿದ್ಧಿ ಇರುವುದು ಏಕತಾರಿ ತಂತಿವಾದ್ಯ. ಒಂದೇ ತಾರಿ(ತಂತಿ)ಯವಾದ್ದರಿಂದ ಇದನ್ನು ಏಕತಾರಿ ಎಂದು ಕರೆಯುತ್ತಾರೆ. ಹಸಿಯಾದ ದೊಡ್ಡದಾದ ಸೋರೆಕಾಯಿಯನ್ನು ಚೆನ್ನಾಗಿ ಒಣಗಿಸಿ, ತುಂಬಿನ ಕಡೆಯ ಭಾಗವನ್ನು ವೃತ್ತಾಕಾರವಾಗಿ ಕೊರೆದು ಪೊಳ್ಳು ಮಾಡುತ್ತಾರೆ. ಈ ಭಾಗ ಹಿಂದೆ ಬರುವಂತೆ ಸುಮಾರು ನಾಲ್ಕು ಅಡಿಯ ಬಿದಿರಿನ ಬೊಂಬನ್ನು (ಕೋಲಿಗಿಂತ ಸ್ವಲ್ಪ ದಪ್ಪವಾಗಿರುವಂಥದು) ಸೋರೆಕಾಯಿಯಲ್ಲಿ ಸೇರಿಸುತ್ತಾರೆ. ಕಾಯಿಯ ಕೆಳಭಾಗದ ಬೊಂಬು ನಾಲ್ಕೈದು ಇಂಚು ಬಂದಿರುತ್ತದೆ. ಕೋಲು ಭದ್ರವಾಗಿ ಅಂಟಿಕೊಳ್ಳಲು ಮೇಣ ಹಚ್ಚಿರುತ್ತಾರೆ. ಕೆಳಭಾಗದ ಬೊಂಬಿನ ತುದಿಗೆ (ಮೇಲ್ಗಡೆ ನಾಲ್ಕೈದು ಇಂಚು ಬಿಟ್ಟು) ಸೇರಿಸಲಾಗಿರುತ್ತದೆ. ಹೀಗೆ ತಂತಿ ಸುತ್ತಿ ಬೊಂಬಿನಲ್ಲಿ ಸೇರಿಸುವ ನಾಲ್ಕು ಇಂಚಿನ ಬೆರಳು ಗಾತ್ರದ ಕಟ್ಟಿಗೆಯ ತುಂಡಿಗೆ 'ಬಿರಡಿ' ಎನ್ನುತ್ತಾರೆ. ಇದಕ್ಕೆ ಕೆಲವೆಡೆ 'ಬೆಣಕು' ಎಂದು ಹೆಸರು. ಸೋರೆ ಕಾಯಿಯ ಮೇಲೆ ಹಾಯ್ದಿರುವ ತಂತಿಯನ್ನು ಕಾಯಿಯಿಂದ ಬೇರ್ಪಡಿಸಿ ಮೇಲೆತ್ತಲು ಸುಮಾರು ಎರಡು ಇಂಚಿನ ಕಟ್ಟಿಗೆ ತುಂಡು ಇರುತ್ತದೆ. ಇದಕ್ಕೆ 'ಮೆಟ್ಟು' ಎಂದು ಹೆಸರು. ಬೊಂಬು ಕಾಯಿಯಿಂದ ಮೇಲೆ ಪಾರಾಗಿ ಹೊರಟ ಭಾಗವನ್ನು ಬಲ ಅಂಗೈಯಲ್ಲಿ ಹಿಡಿದುಕೊಂಡು ತೋರುಬೆರಳು ಅಥವಾ ಮಧ್ಯದ ಬೆರಳನ್ನು ಮೇಲೆ ಕೆಳಗೆ ಮಾಡಿ ತಂತಿಯನ್ನು ಹಾಡಿನ ಲಯಕ್ಕೆ ತಕ್ಕಂತೆ ಮೀಟಿ ನಾದ ಹೊರಡಿಸುತ್ತಾರೆ. ಎಡಗೈ ತೋರು ಬೆರಳನ್ನು ಸೋರೆ ಕಾಯಿಯ ಮೇಲೆ ಲಘುವಾಗಿ ಬಡಿಯುತ್ತ ಹಾಡಿನ ಲಯ ನಿರ್ವಹಿಸುತ್ತಾರೆ. ಕರ್ನಾಟಕದಲ್ಲಿ ಈ ಏಕತಾರಿ ಮಧ್ಯಯುಗದಿಂದೀಚೆ ರೂಢಿಗೆ ಬಂದಿದೆಯೆಂದೂ ಸೂಫಿ ಸಂತರೊಂದಿಗೆ ಇದು ಕರ್ನಾಟಕ ಪ್ರವೇಶಿಸಿ ಕೂಡಲೇ ಇಲ್ಲಿಯ ಜನ ಸಮುದಾಯವನ್ನು ಆಕರ್ಷಿಸಿತೆಂದೂ ಹೇಳಲಾಗುತ್ತಿದೆ(ಬೀಚನಹಳ್ಳಿ, ಕರಿಗೌಡ: ೨೦೦೦: ೩೪೪). ಶರಣರ ವಚನಗಳಲ್ಲಿ, ದಾಸರ ಕೀರ್ತನೆಗಳಲ್ಲಿ ಈ ವಾದ್ಯದ ಪ್ರಸ್ತಾಪ ಬರುತ್ತದೆ.

**ತಂಬೂರಿ ಮತ್ತು ದಂಡಿಗೆ :** ಏಕತಾರಿಯ "ಒಂದೇ ತಂತಿಯ ಆಧಾರ ಸ್ವರದ ನಾದ ಇನ್ನಷ್ಟು ವ್ಯಾಪಕವಾಗಿರಬೇಕು ಮತ್ತು ನಡುವೆ ಪಂಚಮ ಸ್ವರದ ನೆರವು ಬೆರೆತುಕೊಳ್ಳಬೇಕೆಂಬ ವಿಚಾರ ಮೂಡಿದಾಗ ನಾಲ್ಕು ತಂತಿಯ ತಂಬೂರಿಯ ಆವಿಷ್ಕಾರ ವಾಯಿತು"(ಅದೇ: ೩೪೪) ಎನ್ನಲಾಗಿದೆ. ಶಾಸ್ತ್ರೀಯ ಸಂಗೀತದ ತಂಬೂರಿಗಿಂತ ಜನಪದ ಗಾಯಕರಾದ ದಾಸರು ಬಳಸುವ ತಂಬೂರಿ ವಿಶಿಷ್ಟವಾದುದು. ಎರಡು ಮೊಳ ಉದ್ದದ ಇದನ್ನು ಹಲಸಿನ ಮರದಲ್ಲಿ ಕಡೆಯಲಾಗುವುದು. ಇದರ ಒಂದು ತುದಿಯಲ್ಲಿ ನಾಗರ ಹೆಡೆ ಅಥವಾ ಸಿಂಹದ ಮುಖವನ್ನು ಬಿಡಿಸುವರು. ಹಲಸಿನ ಮರದ ಅರೆಗೋಲಾಕಾರದ ಕಟ್ಟಿಗೆಯ ಪಡಗದ ಮೇಲೆ ಕಟ್ಟಿಗೆಯದೇ ದಂಡಿಗೆಯನ್ನು ಜೋಡಿಸಿರುತ್ತಾರೆ. ಕೆಳಭಾಗದಲ್ಲಿ ವೃತ್ತಾಕಾರ, ಮೇಲ್ಭಾಗದಲ್ಲಿ ಚಪ್ಪಟೆಯಾಗಿರುವ ದಂಡಿಗೆಯ ಉದ್ದ ಸುಮಾರು ನಾಲ್ಕು ಅಡಿ. ತಂತಿಗಳನ್ನು 'ಮೆಟ್ಟು' ಎಂಬ ಕಲೆಯ ತುಂಡಿಗೆ ಬಿಗಿದು ದಂಡಿಗೆಯ ಮೇಲೆ ಹಾಯಿಸಿ ಮೇಲ್ಗಡೆಯ ಬಿರಡೆಗಳಿಗೆ ಸುತ್ತಿರುತ್ತಾರೆ. ದಂಡಿಗೆಯ ಮೇಲಿನ ತುದಿ ಅಲಂಕಾರಯುತವಾಗಿದ್ದು ನಾಗರ ಹೆಡೆಯಂತೆ ಬಾಗಿರುತ್ತದೆ. ಈ ತಂಬೂರಿಗೆ ಸಾಸಾಪಸಾ ಸ್ವರಗಳ ನಾಲ್ಕು ತಂತಿಗಳಿರುತ್ತವೆ. ಬಾರಿಸುವ ಕಲಾವಿದನು ಇದನ್ನು ಕೊರಳಲ್ಲಿ ಜೋತು ಬಿಟ್ಟುಕೊಂಡಿರುತ್ತಾನೆ. ಬಲಗೈ ಬೆರಳುಗಳಿಂದ ಎಲ್ಲ ತಂತಿಗಳನ್ನು ಏಕಕಾಲಕ್ಕೆ ನುಡಿಸುವನು. ಒಂದೇ ಆಘಾತಕ್ಕೆ ನಾಲ್ಕೂ ತಂತಿಗಳನ್ನು ನುಡಿಸುವ ಕ್ರಮವಿದೆ. ಈ ತಂಬೂರಿಗೆ 'ಸರಸ್ವತಿ ವಾದ್ಯ'ವೆಂಬ ಹೆಸರೂ ಇದೆ. ತಂಬೂರಿಯನ್ನೂ ದಂಡಿಗೆ (ಕಟ್ಟಿಗೆದಂಡ)ಯಿಂದ ಮಾಡಿರುವುದರಿಂದ ಇದನ್ನು ದಂಡಿಗೆ ಎಂದೂ ಕರೆಯಲಾಗುತ್ತದೆ. ಕನ್ನಡ ನಿಘಂಟುವಿನಲ್ಲಿ "ವೀಣೆ ಮುಂತಾದ ತಂತಿ ವಾದ್ಯಗಳಲ್ಲಿ ಬುರುಡೆಯಿಂದ ಬೇರೆಯಾದ ಭಾಗ, ದಂಡದಿಂದ ಕೂಡಿದ ತಂತಿವಾದ್ಯ" (ವೆಂಕಟಸುಬ್ಬಯ್ಯ ಜಿ: ೧೯೭೫: ೩೭೬೪) ಎಂದು ಹೇಳಲಾಗಿದೆ. ತಂಬೂರಿ ಹೆಸರಿನಿಂದ ಇದರ ಪ್ರಾಚೀನತೆ ನಾರದ ಮಹರ್ಷಿಗಳ ಕಾಲದವರೆಗೆ ಹೋಗುತ್ತದೆ. 'ದಂಡಿಗೆ' ಎನ್ನುವ ಹೆಸರಿನಿಂದ ಇದರ ಪ್ರಾಚೀನತೆ ಹತ್ತನೇ ಶತಮಾನದ ಪೂರ್ವಕ್ಕೂ ಹೋಗುತ್ತದೆ. ಪಂಪನ ಆದಿಪುರಾಣದಲ್ಲಿ, ಬಸವಣ್ಣನವರ ವಚನಗಳಲ್ಲಿ, ಹರಿಹರನ ಗಿರಿಜಾ ಕಲ್ಯಾಣದಲ್ಲಿ, ರಾಘವಾಂಕನ ಹರಿಶ್ಚಂದ್ರಕಾವ್ಯದಲ್ಲಿ, ಪುರಂದರ/ ಕನಕದಾಸರಾದಿ ಕೀರ್ತನಕಾರರಲ್ಲಿ ಈ ದಂಡಿಗೆ ವಾದ್ಯದ ಪ್ರಸ್ತಾಪ ಸಾಕಷ್ಟು ಸಲ ಬಂದಿದೆ. ಇದರಿಂದ ಹತ್ತನೆ ಶತಮಾನಕ್ಕಿಂತಲೂ ಮುಂಚಿನಿಂದ ಈ 'ದಂಡಿಗೆ' ವಾದ್ಯ ಬಳಕೆಯಲ್ಲಿತ್ತು ಎಂದು ತಿಳಿದು ಬರುತ್ತದೆ. ಭಿಕ್ಷಾಟನೆಯಲ್ಲಿ ಈ ವಾದ್ಯವನ್ನು ಪ್ರಮುಖವಾಗಿ ಬಳಸುವುದರಿಂದಾಗಿ ಈ ವಾದ್ಯಗಾರ ಹಾಡುಗಾರರನ್ನು ದಂಡಿಗೆ ದಾಸರೆಂದೂ, ತಂಬೂರಿ ಎನ್ನುವ ಅರ್ಥದಲ್ಲಿ ತಂಬೂರಿದಾಸರು > ದಂಬೂರಿ ದಾಸರು > ದೊಂಬಿ ದಾಸರೆಂದೂ ಕರೆಯಲಾಗಿದೆ.

**ಪೇಟಿ ಅಥವಾ ಹಾರ್ಮೋನಿಯಂ :** ಇದೊಂದು ಶೃತಿ ವಾದ್ಯವಾಗಿದ್ದು ಇದನ್ನು ಗಾಳಿವಾದ್ಯವೆಂದೂ ವಿದ್ವಾಂಸರು ಕರೆದಿರುವರು. ಆಯತಾಕಾರದ ಮರದ ಪೆಟ್ಟಿಗೆ

ಯೊಂದಿದ್ದು ಅದರ ಮೇಲ್ಭಾಗದಲ್ಲಿ ಒಳಕ್ಕೆ ಹೊಂದಿಕೊಂಡಂತೆ ಮರದ ಹಲಗೆಯೊಂದನ್ನು ಅಳವಡಿಸಿರುತ್ತಾರೆ. ಆ ಹಲಗೆಗೆ ಹತ್ತಿಕೊಂಡು ಕೆಳಗೆ ಸ್ಥಾಯಿಗೆ ತಕ್ಕಂತೆ ಸಾಲಾಗಿ ಲೋಹದ ತೆಳು ಪಟ್ಟಿಗಳನ್ನು ಪೀಪಿಯ ರೂಪದಲ್ಲಿ ಜೋಡಿಸಿರುತ್ತಾರೆ. ಅವುಗಳಿಗೆ ಹೊಂದಿಕೊಂಡು ಹಲಗೆಯ ಮೇಲ್ಭಾಗದಲ್ಲಿ ರೀಡುಗಳಿದ್ದು ಸ್ವರ ಹೊರಡಿಸಲು ಅವನ್ನು ಬೆರಳಿನಿಂದ ಒತ್ತಲಾಗುತ್ತದೆ. ಹಲಗೆಯ ಕೆಳಗಡೆ ಪೆಟ್ಟಿಗೆಯೊಳಗೆ ಖಿಲ್ಲಾ ಸ್ಥಳವಿರುತ್ತದೆ. ಪೆಟ್ಟಿಗೆಯ ಹಿಂದುಗಡೆ ತಿದಿಯೊಂದನ್ನು ಅಳವಡಿಸಿದ್ದು ಅದಕ್ಕೆ 'ಬಾತೆ' ಎನ್ನುತ್ತಾರೆ. ಪೆಟ್ಟಿಗೆಯ ಮುಂಭಾಗದಲ್ಲಿ ಸ್ಟಾಪರ್ಸ್ ಇದ್ದು ಅದನ್ನು ಮುಂದಕ್ಕೆ ಎಳೆದು ಬಾತೆ ಹಾಕಿದಾಗ ಗಾಳಿಯು ಪೆಟ್ಟಿಗೆಯಲ್ಲಿ ದೂಡಲ್ಪಟ್ಟು ಲೋಹದ ತೆಳುಪಟ್ಟಿಯಾಕಾರದ ಪೀಪಿಯಲ್ಲಿ ಕಂಪನ ಉಂಟಾಗಿ, ಮೇಲ್ಭಾಗದಲ್ಲಿ ಬೆರಳು ಒತ್ತಿದ ಕೂಡಲೆ ರಂಧ್ರದೊಳಗಿಂದ ಸ್ವರ ಹೊರಹೊಮ್ಮುತ್ತದೆ.

ಈ ಪೇಟಿಯಲ್ಲಿ ಮೂರು ರೀತಿ ಇವೆ. ಗಾತ್ರದಲ್ಲಿ ಸಣ್ಣದಾಗಿರುವ ಪೇಟಿಯಿದ್ದು ಅದು ಸೂರು ಹಿಡಿಯಲು ಮಾತ್ರ ಬರುತ್ತದೆ. ಹೆಗಲಿಗೆ ಹಾಕಿಕೊಂಡು ಹಾಡುತ್ತ, ಕುಣಿಯುತ್ತ ಬಾರಿಸುವಂಥದ್ದು. ವಿಶೇಷವಾಗಿ ಭಿಕ್ಷಾಟನೆ ಮಾಡುವ ಹಾಡುಗಾರರು ಇದನ್ನೇ ಬಳಸುತ್ತಾರೆ; ಇನ್ನೊಂದು ಬಗೆಯ, ಪೇಟಿಯೆಂದರೆ ಕೈ ಪೇಟಿ. ನೆಲದ ಮೇಲೆ ಕುಳಿತು ಎಡಗೈಯಿಂದ ಬಾತೆ ಹಾಕುತ್ತ ಬಲಗೈ ಬೆರಳುಗಳಿಂದ ಇದನ್ನು ನುಡಿಸಬಹುದು. ಇದನ್ನು ಹೆಗಲಿಗೆ ನೇತು ಹಾಕಿಕೊಂಡು ಎದೆಯ ಕೆಳಭಾಗಕ್ಕೆ ತಂದು ನಿಂತು ನುಡಿಸುವ ರೂಢಿಯೂ ಇದೆ. ಈ ಎರಡೂ ರೀತಿಯ ಪೇಟಿಯನ್ನು ಚೆನ್ನದಾಸರ ಸಮುದಾಯದ 'ದಾಸರಾಟ'ದವರು ಬಳಸುತ್ತಾರೆ, ಮೂರನೇ ಬಗೆಯ ಪೇಟಿ ಎಂದರೆ ಕಾಲು ಪೇಟಿ. ಇದನ್ನು ಮರಡಿನಿಂದ ಜೋಡಿಸಲಾದ ಎರಡು ಪಟ್ಟಿಕೆಗಳ ಮೇಲೆ ಅಳವಡಿಸಲಾಗಿರುತ್ತದೆ. ಇದರ ಬಾತೆ ಕೆಳಗಡೆ ಇರುತ್ತದೆ. ಕುರ್ಚಿಯೊಂದರ ಮೇಲೆ ಕುಳಿತು ಕಾಲಿನಿಂದ ಕೆಳಗಿನ ಬಾತೆ ಹಾಕುತ್ತ ಎರಡೂ ಕೈಗಳಿಂದ ವಾದಕನು ಪೇಟಿ ನುಡಿಸುತ್ತಾನೆ. ೧೮೪೦ರಲ್ಲಿ ಈ ಬಗೆಯ ಪೇಟಿಯ ಆವಿಷ್ಕಾರವಾಯಿತೆನ್ನುತ್ತಾರೆ. ಇದನ್ನು "ಶ್ರೀಕೃಷ್ಣ ಪಾರಿಜಾತ"ವನ್ನಾಡುವ 'ದಶವಂತ'ರು ಬಳಸುತ್ತಾರೆ. ಒಟ್ಟಿನಲ್ಲಿ ಈ ಪೇಟಿ ಅಥವಾ ಹಾರ್ಮೋನಿಯಂ ವಾದ್ಯವು ಆಧುನಿಕ ಕಾಲದ್ದಾಗಿದೆ.

ಶಂಖ: ಇದು ಸಮುದ್ರದಲ್ಲಿ ದೊರೆಯುವ ಒಂದು ಬಗೆಯ ಸುರುಳಿಯಾದ ಚಿಪ್ಪು. ಪ್ರಕೃತಿದತ್ತ ವಾದ್ಯವಿದು. ಇದರ ಒಳಭಾಗದಲ್ಲಿ ನೈಸರ್ಗಿಕ ಸುರುಳಿಯಾಕಾರದ ಟೊಳ್ಳುಭಾಗವಿರುತ್ತದೆ. ಅದರ ಮುಚ್ಚಿದ ಭಾಗದಲ್ಲಿ ಒಂದು ರಂಧ್ರ ತೆಗೆದರೆ ಸಾಕು. ಉಸಿರುವಾದ್ಯವಾದ ಶಂಖ ಸಿದ್ಧ. ರಂಧ್ರದ ಮೂಲಕ ಊದಿದ ಗಾಳಿಯು ಸುರುಳಿಗಳಲ್ಲಿ ಸುತ್ತುತ್ತ ಕಂಪನ ಪಡೆದು ಧ್ವನಿಯಾಗಿ ಹೊರಹೊಮ್ಮುತ್ತದೆ. ಅದು ಬಹುದೂರದವರೆಗೆ ಕೇಳಬಲ್ಲದು. ದೇವಾಲಯಗಳಲ್ಲಿ ದೇವರ ಪೂಜಾ ಸಂದರ್ಭದಲ್ಲಿ ಶಂಖ ಊದುವುದು ರೂಢಿ. ಶಂಖವನ್ನು ಊದಲು ಅನುಕೂಲವಾಗಲೆಂದು ಹಾಗೂ ಅದಕ್ಕೊಂದು ಸೌಂದರ್ಯ ತರಲು ರಂಧ್ರದ ಸುತ್ತಲೂ ಹಿತ್ತಾಳೆಯ ಇಲ್ಲವೆ ಬೆಳ್ಳಿಯ ಹೊದಿಕೆ

ತೊಡಿಸಿರುವುದೂ ಉಂಟು. ರಣವಾದ್ಯಗಳಲ್ಲಿ ಈ ಶಂಖವೂ ಒಂದಾಗಿದೆ. ಶ್ರೀಕೃಷ್ಣನ ಪಾಂಚಜನ್ಯವೂ ಒಂದು ಬಗೆಯ ಶಂಖವೇ ಆಗಿದೆ. ಹಿಂದೆ ಪ್ರತಿಯೊಬ್ಬ ವೀರನ ಬಳಿಯೂ ಇಂಥ ಒಂದೊಂದು ಶಂಖ ಇರುತ್ತಿತ್ತೆಂದು ಹೇಳಲಾಗಿದೆ. ಕನ್ನಡದಲ್ಲಿ ಪಂಪಭಾರತ, ಕೆಂಬಾವಿ ಭೋಗಣ್ಣನ ಸಾಂಗತ್ಯ, ನಿಜಗುಣ ಶಿವಯೋಗಿಯಲ್ಲಿ ಈ ಶಂಖವಾದ್ಯದ ಪ್ರಸ್ತಾಪವಿದೆ. ಇದೊಂದು ತೀರ ಪ್ರಾಚೀನ ಕಾಲದ ವಾದ್ಯವಾಗಿದೆ. ಈ ಸಮುದಾಯದ ಹನುಮಂತ ದೇವರ ಪೂಜಾರಿಗಳು ಶನಿವಾರದ ದಿನ ಪೂಜೆಯ ಸಂದರ್ಭದಲ್ಲಿ ಊದುತ್ತಾರೆ. ದಕ್ಷಿಣ ಕನ್ನಡ ಮತ್ತು ಅದರ ಸುತ್ತಲಿನ ಭಾಗದಲ್ಲಿ ಈ ಸಮುದಾಯದವರು ಶನಿವಾರದ ಭಿಕ್ಷಾಟನೆಯನ್ನು ಇದನ್ನು ಊದಿಯೇ ಬೇಡುತ್ತಾರೆ. ಅದಕ್ಕಾಗಿ ಇವರನ್ನು ಶಂಖದಾಸರಿಗಳೆಂದೂ, ಶಂಖದಾಸಯ್ಯಗಳೆಂದೂ ಕರೆಯುತ್ತಾರೆ.

ಚೆನ್ನು ಅಥವಾ ಭೋಂಕಿ : ಭೋಂಕಿಯೆಂದೇ ಪ್ರಸಿದ್ಧವಾಗಿರುವ ಈ ವಾದ್ಯವನ್ನು 'ಭಾಂಕಿ' ಎಂದೂ ಮತ್ತೆ ಕೆಲವು ಕಡೆ ಚೆನ್ನು ಎಂದೂ ಕರೆಯುವುದಿದೆ(ಕ್ಷೇತ್ರ ಕಾರ್ಯದಲ್ಲಿ ಈ ಮಾಹಿತಿ ನೀಡಿದವರು. ಶ್ರೀ ಭಾಸ್ಕರದಾಸ್ ಎಕ್ಕಾರು, ಮಂಗಳೂರು ಮತ್ತು ತಿಪ್ಪಣ್ಣ ಕತ್ತಲಗೆರೆ, ದಾವಣಗೆರೆ). ದಾಸಸಂಪ್ರದಾಯದ ಒಂದು ಮುಖ್ಯ ವಾದ್ಯ. ಇದು ಕಹಳೆಯ ಇನ್ನೊಂದು ರೂಪದಂತೆ ಕಾಣಿಸುತ್ತದೆ. ಮಾಡಲ್ಪಟ್ಟ ಇದರ ಊದುವ ಭಾಗ ಕಿರಿದಾಗಿದ್ದು ಬರುಬರುತ್ತಾ ಗಾತ್ರ ದೊಡ್ಡದಾಗುತ್ತ ಹೋಗುತ್ತದೆ. ಮಧ್ಯಂತರದಲ್ಲಿ ಸುರುಳಿಯಾಕಾರದಲ್ಲಿ ಸುತ್ತಿಕೊಂಡು ಬಾಯಿ ಅಗಲವಾಗಿ ಹೊರ ಚಾಚುತ್ತದೆ. ನೇರ ಮತ್ತು ಬಾಗಿದ ಹಿತ್ತಾಳೆ ಕೊಳವೆ ತುಂಡುಗಳು ಇವಾಗಿದ್ದು ಅದನ್ನು ಸಾವಯವವಾಗಿ ಸೇರಿಸಿರುತ್ತಾರೆ. ಸಂದುಗಳನ್ನು ರಿವಿಟ್ ಮಾಡಿ ಅದು ಕಾಣದಂತೆ ಉಬ್ಬಿದ ಬಳೆಯಾಕಾರದ ತಗಡುಗಳಿಂದ ಅಲಂಕಾರಿಕವಾಗಿ ಮುಚ್ಚಿರುತ್ತಾರೆ. ತಿರುಪತಿ ಬೆಟ್ಟಕ್ಕೆ ಯಾತ್ರೆ ಹೋಗುತ್ತಿದ್ದ ದಾಸಯ್ಯಗಳು ಭೋಂಕಿ ಮತ್ತು ಶಂಖವನ್ನು ಊದುತ್ತಾ ಭಕ್ತರ ತಂಡಗಳನ್ನು ಕರೆದೊಯ್ಯುತ್ತಿದ್ದರು. ಈಗಲೂ ಶನಿವಾರ ಭಿಕ್ಷೆಗೆ ಹೊರಡುವ ದಾಸಯ್ಯಗಳು ದೇವರ ಹೆಸರಿನಲ್ಲಿ ಇದನ್ನು ಬಳಸುತ್ತಾರೆ. ಆ ಕಾರಣಕ್ಕಾಗಿಯೇ ಕೆಲವರು ಇವರನ್ನು 'ಶನಿವಾರ ದಾಸರಿ' ಎಂದೂ ಕರೆಯುವರು. ಚೆನ್ನದಾಸರ ಸಮುದಾಯದವರಲ್ಲದೆ 'ದಾಸಪ್ಪ'ನ ದೀಕ್ಷೆ ಪಡೆದು ವರ್ತಿಸುವ ಮೇಲುಜಾತಿಯ ದಾಸಪ್ಪಗಳೂ ಕೂಡ ಈ ವಾದ್ಯವನ್ನು ಬಳಸುತ್ತಾರೆ ಎಂದು ಹಿ ಚಿ ಬೋರಲಿಂಗಯ್ಯ ಅವರ ೧೯೮೬ರ ಕೃತಿಯಲ್ಲಿ ಈ ಮಾಹಿತಿ ಇದೆ. ಈ ವಾದ್ಯದ ಪ್ರಾಚೀನತೆ ಕುರಿತು ವಿವರ ದೊರೆಯದಿದ್ದರೂ ಕಹಳೆಯ ನಂತರದಲ್ಲಿ ಈ ವಾದ್ಯ ಹುಟ್ಟಿರುವ ಸಾಧ್ಯತೆ ಇದೆ.

ಲೋಹ ವಾದ್ಯಗಳಲ್ಲಿ ಈ ಸಮುದಾಯ ಬಳಸುವ ಪ್ರಮುಖ ವಾದ್ಯಗಳೆಂದರೆ ತಾಳ ಮತ್ತು ಜಾಗಟೆ.

ತಾಳ: ತಾಳವು ಅನೇಕ ಸಂಗೀತ ಮೇಳಗಳಲ್ಲಿ ಪ್ರಮುಖವಾಗಿರುತ್ತದೆ. ಸಂಗೀತ ಪ್ರಧಾನವಾದ ಮೇಳಗಳಲ್ಲಿ ಮುಖ್ಯ ಕಲಾವಿದ ಇದನ್ನು ಹಿಡಿದಿರುತ್ತಾನೆ. ಇದು

ಕಂಚು, ಹಿತ್ತಾಳೆ ಇಲ್ಲವೆ ಮಿಶ್ರಲೋಹದಿಂದ ಮಾಡಲ್ಪಡುತ್ತದೆ. ಆರೇಳು ಅಂಗುಲ ಸುತ್ತಳತೆ ಇದ್ದು ಗುಂಡಗಿರುತ್ತದೆ. ಎರಡು ಭಾಗಗಳು ಮುಖಾಮುಖಿ ಆಗಿ ಕೂಡಲು ಅನುಕೂಲವಾಗುವಂತಿದ್ದು ಮಧ್ಯೆ ಎತ್ತರವಾದ ಉಬ್ಬನ್ನು ಹೊಂದಿರುತ್ತದೆ. ಅಲ್ಲಿ ರಂಧ್ರಗಳಿದ್ದು ಒಳಭಾಗದಿಂದ ಹೊರಕ್ಕೆ ದಾರ ಹಾದುಬರುವಂತಿರುತ್ತದೆ. ಹೀಗೆ ದಾರಕಟ್ಟಿದ ಎರಡು ತಾಳಗಳನ್ನು ಎಡಗೈ ಮತ್ತು ಬಲಗೈಯಲ್ಲಿ ಹಿಡಿದು ಬಾರಿಸಲು, ಒಂದು ರೀತಿಯ ಝೇಂಕಾರ ನಾದ ಹೊಮ್ಮುತ್ತದೆ. ಈ ಸಮುದಾಯದ ಪಾರಿಜಾತ ಮೇಳ ಮತ್ತು ಭಜನಾ ಮೇಳದವರು ಮತ್ತು ಹೆಣ್ಣುವೇಷದ ಆಟದದಾಸರು ಈ ತಾಳಗಳನ್ನು ಉಪಯೋಗಿಸುತ್ತಾರೆ. ಇದರ ಪ್ರಾಚೀನತೆಯ ಕುರಿತು 'ತಾಳಲಯಮಂ ನಿರು ನೀ। ಳಾಳಕದ ಪಾರದ ಪೊದಪ್ಪಿ ಮುತ್ತೆಂಬಿಪ್ಪುಮುಂ' ಎಂಬ ಪಂಪಕವಿಯ ಪದ್ಯದ ಸಾಲೊಂದನ್ನು ಹೇಳಲಾಗಿದೆ(ರಾಜೂರ, ವೀರಣ್ಣ:೧೯೯೨:೧೨೭).

**ಜಾಗಟೆ :** ಪಂಚಮಹಾವಾದ್ಯಗಳಲ್ಲಿ ಒಂದಾಗಿರುವ ಜಾಗಟೆಯನ್ನು ಹಿಂದೆ ಯುದ್ಧಗಳಲ್ಲಿ ಜಯದ ಸೂಚಕವಾಗಿ ಬಳಸುತ್ತಿದ್ದ 'ಜಯಘಂಟೆ'ಯೇ ಕಾಲಕ್ರಮದಲ್ಲಿ ಜಾಗಟೆಯಾಗಿರಬೇಕೆಂದು ಭಾವಿಸಲಾಗುತ್ತದೆ ಎಂದು ಹೇಳಲಾಗಿದೆ. ದಾಸಸಂಪ್ರದಾಯದ ವೆಂಕಟರಮಣನ ಭಕ್ತರು ಬಳಸುವ ಈ ಜಾಗಟೆಗಳಲ್ಲಿ ಎರಡು ವಿಧವಾದ ವಾದ್ಯಗಳಿವೆ. ಇವುಗಳನ್ನು ಕಂಚಿನಿಂದ ಮಾಡಲಾಗಿರುತ್ತದೆ. ಒಂದು ಸಾದಾ ಜಾಗಟೆ ಮತ್ತೊಂದು ಜಗನ್ನಾಥ ಜಾಗಟೆ. ಸಾದಾ ಜಾಗಟೆಯನ್ನು ವೆಂಕಟರಮಣನ ಭಕ್ತರಾದ ಶಂಖದಾಸಯ್ಯ ಗಳು ದೇವರ ಹೆಸರಲ್ಲಿ ಭಿಕ್ಷೆ ಮಾಡುವಾಗ ಹೆಗಲಿಗೆ ಜಾಗಟೆಯನ್ನೂ, ಶಂಖವನ್ನೂ ನೇತು ಹಾಕಿಕೊಂಡು ಭಕ್ತರ ಮನೆಯ ಮುಂದೆ ತಮ್ಮ ಬರುವಿಕೆಯನ್ನು ಸೂಚಿಸಲು ಮರದ ಕೋಲಿನಿಂದ ಸಾದಾ ಜಾಗಟೆಯನ್ನು ಬಾರಿಸುತ್ತಾರೆ. ಜಗನ್ನಾಥ ಜಾಗಟೆಯನ್ನು ದೇವರ ಪೂಜೆಯ ಸಂದರ್ಭದಲ್ಲಿ ಬಾರಿಸಲಾಗುತ್ತದೆ.

ಚರ್ಮವಾದ್ಯಗಳಲ್ಲಿ ಈ ಸಮುದಾಯ ಬಳಸುವ ಪ್ರಮುಖ ವಾದ್ಯಗಳೆಂದರೆ ದಮ್ಮಡಿ, ಚಕ್ರವಾದ್ಯ, ಮೃದಂಗ ಮತ್ತು ತಬಲಾ ಪ್ರಮುಖವಾದವುಗಳು.

ದಮ್ಮಡಿ : ಇದು ಆರು ಅಂಗುಲ ವ್ಯಾಸವುಳ್ಳ ಕುಂಬಳಿ ಮರದ ಕಟ್ಟಿಗೆಯ ಇಲ್ಲವೆ ಹ್ಯಾದಗಿ ಮರದ ಕಟ್ಟಿಗೆಯ ವೃತ್ತಭಾಗಕ್ಕೆ ಉಡುವಿನ ಚರ್ಮವನ್ನು ಒಂದು ಮುಖಕ್ಕೆ ಅಂಟಿಸಿರುತ್ತಾರೆ. ಅಲ್ಲದೆ ಕೆಲವು ಸಾರಿ ಈ ಮರದ ಕಟ್ಟಿಗೆಯ ಬಳಿಗೆ ನಡುನಡುವೆ ಗಗ್ಗರಗಳನ್ನು ನಾದ ವೈವಿಧ್ಯಕ್ಕಾಗಿ ಅಳವಡಿಸಿರುತ್ತಾರೆ. ಈ ಸಮುದಾಯದ ಭಜನಾ ಮೇಳದವರು ಮತ್ತು ತತ್ವಪದಕಾರರು ಈ ದಮ್ಮಡಿಗಳನ್ನು ಬಳಸಿ ಹಾಡುವ ಸಂಪ್ರದಾಯವಿದೆ.

**ಚಕ್ರವಾದ್ಯ :** ಒಂದೂವರೆ ಅಡಿ ನಾಲ್ಕು ಇಂಚು ಅಗಲ ವೃತ್ತಾಕಾರವಿರುವ ಭೂತಾಳಿ ಮರದ ಕಟ್ಟಿಗೆಗೆ ಉಡದ ಚರ್ಮವನ್ನು ಒಂದು ಮುಖಕ್ಕೆ ಹಗ್ಗದಿಂದ ಚೌಕಟ್ಟು ಬಿಗಿದು ಕಟ್ಟಲಾಗುವುದು. ಇದನ್ನು ಬಾರಿಸಲು ಒಂದು ಅಡಿಯ ಕಟ್ಟಿಗೆಯ ಗುಣಿಕ ಉಪಯೋಗಿಸುವರು. ಚಕ್ರವಾದ್ಯ ಬಯಲು ಸೀಮೆಯ ಕೆಲವು ಕಡೆಗಳಲ್ಲಿ

ಕಂಡು ಬರುತ್ತದೆಂದು ಹೇಳಿದ್ದರೂ ಈ ಮೊದಲು ಉತ್ತರ ಕರ್ನಾಟಕದ ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಈ ಸಮುದಾಯದವರು ಬಾರಿಸುವ ಸಂಪ್ರದಾಯವಿತ್ತು. ಇವರನ್ನು 'ಚಕ್ರವಾದ್ಯದಾಸರು' ಎಂದೇ ಕರೆಯಲಾಗುತ್ತಿತ್ತು. ಶಬ್ದ ಅಥವಾ ಉಚ್ಚಾರ ದೋಷದಿಂದ ಮೈಸೂರು ಭಾಗದಲ್ಲಿ ಇವರನ್ನು 'ಚಕ್ರವಾದ್ಯದಾಸರು' ಬದಲಾಗಿ 'ಚಕ್ರವರ್ತಿ ದಾಸರು'ಎಂದು ಕರೆದಿರುವುದು ಒಂದು ವಿಪರ್ಯಾಸವೇ ಆಗಿದೆ.

**ಮೃದಂಗ :** ಮೃದಂಗವನ್ನು ಚರ್ಮವಾದ್ಯಗಳಲ್ಲೇ ಪ್ರಮುಖವಾದದ್ದೆಂದು ಹೇಳಲಾಗಿದೆ. ಯಕ್ಷಗಾನ ಬಯಲಾಟಗಳಲ್ಲಿ ಇದನ್ನು ಹೆಚ್ಚು ಬಳಕೆ ಮಾಡಲಾಗುತ್ತದೆ. ಮೃದಂಗವನ್ನು ಹಲಸಿನ ಮರದಲ್ಲಿ ಮಾಡಿಕೊಳ್ಳುತ್ತಾರೆ. ಹಲಸಿನ ಮರದ ಗೋಲಾಕಾರದ ಎರಡು ಬದಿಗೆ ಆಡಿನ ಚರ್ಮವನ್ನು ಹೊದಿಸಿ ಕಿರು ಹಗ್ಗದ ಮೂಲಕ ಬಿಗಿದು ಕಟ್ಟುತ್ತಾರೆ. ಒಂದು ಬದಿಯ ಚರ್ಮಕ್ಕೆ ಕರ್ಣೆ ಎಂಬ ಮದವನ್ನು ಬಳಿಯುತ್ತಾರೆ. ಇದು ನಾದದಲ್ಲಿ ವೈವಿಧ್ಯವನ್ನು ತರುತ್ತದೆ. ಈ ಸಮುದಾಯದ ಹೆಣ್ಣುವೇಷದವರು ಅಥವಾ ಬಯಲಾಟದ ದಾಸರು, ಮೊಂಬಿ ದಾಸರು ಬಯಲಾಟ ಆಡುವ ಸಂದರ್ಭದಲ್ಲಿ ಹಾಗೂ ಹರಿಕಥಾ ಕೀರ್ತನ ಸಂದರ್ಭದಲ್ಲಿ ಮೃದಂಗ ಬಳಸುತ್ತಾರೆ. ಕನ್ನಡದಲ್ಲಿ ಚಾಮರಸಕವಿಯ **"ಪ್ರಭುಲಿಂಗಲೀಲೆ"** ಮತ್ತು ರತ್ನಾಕರವರ್ಣಿಯ **"ಭರತೇಶ ವೈಭವ"** ಕಾವ್ಯದಲ್ಲಿ ಮದ್ದಲೆಕಾರ (ಮೃದಂಗಕಾರ)ನ ಪಾತ್ರವೇ ಸೃಷ್ಟಿಯಾಗಿದೆ. ಬಾರಿಸುವ ಗತಿಯ ಚಿತ್ರಣವೂ ಅಲ್ಲಿದೆ.

ಈ ಪ್ರಮುಖ ವಾದ್ಯಗಳಲ್ಲದೆ ತಬಲ, ಚಿಟಗಿ, ವಾಯೋಲಿನ್ ವಾದ್ಯ ಪರಿಕರಗಳನ್ನೂ ಬಯಲಾಟ, ತತ್ವಪದಗಳ ಸಂದರ್ಭದಲ್ಲಿ ಬಳಸುತ್ತಿರುವ ವಾಡಿಕೆಯಿದೆ.

### ಜನಪದ ಕ್ರೀಡೆಗಳು

ಈ ಸಮುದಾಯದಲ್ಲಿನ ಬಹುತೇಕ ಕ್ರೀಡೆಗಳು ಸ್ಪರ್ಧಾಮನೋಭಾವದಿಂದ ಕೂಡಿವೆ. ಅವುಗಳಲ್ಲಿ ಗಂಡಸರ ಆಟಗಳೇ ಪ್ರಮುಖವಾದವುಗಳಾಗಿವೆ. ಅವುಗಳಲ್ಲಿ ಕಬಡ್ಡಿ, ಸರಿಗೆರೆ, ಕುಸ್ತಿ, ಓಟ, ಗುಂಡು ಎತ್ತುವುದು, ಹಲ್ಲಿನಿಂದ ಮತ್ತು ಕೂದಲಿನಿಂದ ಚಕ್ಕಡಿ ಎಳೆಯುವುದು, ಕಾಳಿನ ಮೂಟೆ ಹೊತ್ತು ಊಟಾಬಸಿ ಮತ್ತು ದೀಡನಮಸ್ಕಾರ ಮಾಡುವ ಆಟಗಳಿವೆ.

**ಕಬಡ್ಡಿ/ಸರಿಗೆರೆ ಆಟ:** ಕಬಡ್ಡಿ ಎಲ್ಲರಿಗೂ ಗೊತ್ತಿರುವಂಥದ್ದೇ. ಅದೇ ರೀತಿಯ ಇನ್ನೊಂದು ಆಟ ಸರಿಗೆರೆ. ಸರಿಗೆರೆಯು ಆಕಾರದಲ್ಲಿ ಕಬಡ್ಡಿಯನ್ನು ಹೋಲುತ್ತದೆ. ಕಬಡ್ಡಿಗೆ ಗಡಿರೇಖೆಯ ಒಳಗಡೆ ಎದುರಾಳಿ ಮುಟ್ಟುವ ಎರಡು ಒಳಗೆರೆ ಅಥವಾ ರೇಖೆಗಳು ಮತ್ತು ಎದುರಾಳಿಗಳನ್ನು ಮುಟ್ಟಿ ಅವರನ್ನು ಔಟ್ ಮಾಡಲು ಮುಟ್ಟುವ ಮಧ್ಯಗೆರೆ ಅಥವಾ ರೇಖೆ ಇರುತ್ತದೆ. ಕಬಡ್ಡಿಯ ಆಟದ ರೇಖೆಗಳ ಹಾಗೆ ಗಡಿರೇಖೆ ಸರಿಗೆರೆಗೂ ಇರುತ್ತದೆ. ಆದರೆ ಒಳಗಿನ ರೇಖೆಗಳು ಅಡ್ಡ ಮತ್ತು ಅಗಲಕ್ಕೆ ಆರು ಮತ್ತು ಮೂರು ಒಳರೇಖೆಗಳಿರುತ್ತವೆ. ಕಬಡ್ಡಿಯಲ್ಲಿ ಎದುರಾಳಿಗಳ ಮೇಲೆ ಒಬ್ಬನೇ ಏರಿ ಹೋದರೆ ಸರಿಗೆರೆಯಲ್ಲಿ ಗೆರೆಗೆ ಒಂದರಂತೆ ಆರು ಜನಗಳ ಎರಡು

ಗುಂಪುಗಳಿರುತ್ತವೆ. ಆರು ಮಂದಿ ಆರು ಗೆರೆಗಳಿಗೆ ಕಾವಲಿದ್ದರೆ, ಆರು ಮಂದಿ ಎದುರಾಳಿಗಳಲ್ಲಿ ಎದುರು-ಬದುರಾಗಿ ಮೂರು ಮೂರು ಮಂದಿ ಆ ದಂಡೆಯಿಂದ ಈ ದಂಡೆಯ ಒಂದು ಚೌಕಿಗೆ ಈ ದಂಡೆಯಿಂದ ಆ ದಂಡೆಯ ಚೌಕಿಗೆ ಕಾಯುವವ ರಿಂದ ಮುಟ್ಟಿಸಿಕೊಳ್ಳದೇ ತಪ್ಪಿಸಿಕೊಂಡು ಹೋಗಬೇಕು ಅಂದರೆ ಅದು ಗೆಲುವು ಸಾಧಿಸಿದಂತಾಗುತ್ತದೆ.

ಉತ್ತರ ಕರ್ನಾಟಕದ ಗಡಿಜಿಲ್ಲೆಗಳ ಈ ಸಮುದಾಯದವರು ಆಡುವ ಕಬಡ್ಡಿ ಮತ್ತು ಸರಿಗೆರೆಗಳು ಬಹುತೇಕ ಹಿರಿಯರಿಂದಲೇ ಆಡಲ್ಪಡುತ್ತಿದ್ದವು. ಆ ಆಟದ ವೈಖರಿಯು ಹೇಗೆಂದರೆ, ಒಂದೇ ಊರಿನ ಸಮುದಾಯದವರು ಎರಡು ಗುಂಪುಗಳಾಗಿ ಆಟ ಆಡುತ್ತಿದ್ದಂತೆ ಎರಡು ಬೇರೆ ಬೇರೆ ಊರಿನ ಸಮುದಾಯದವರೊಡನೆ ಈ ಆಟಗಳು ನಡೆಯುತ್ತಿದ್ದವು. ಆತಿಥ್ಯ ನೀಡುವ ಆಟಗಾರರ ತಂಡ ಅಥವಾ ಊರುವರು ಗೆಲ್ಲುವ ತಂಡಕ್ಕೆ ಬೆಳ್ಳಿಯ ಕೈ ಕಡುಗ, ಹಣ, ದೋತರ-ಟಾವೆಲ್ಲುಗಳನ್ನು ಬಹುಮಾನವಾಗಿ ಇಡುತ್ತಿದ್ದರು. ಜೊತೆಗೆ ಎರಡೂ ಊರಿನ ತಂಡದವರು ಆಟ ಆಡಲು ಬರುವಾಗ ಸೀರೆ-ಬಳೆಗಳನ್ನು ತರುತ್ತಿದ್ದರು. ಗೆದ್ದವರು ಇಟ್ಟ ಬಹುಮಾನ ಪಡೆಯುತ್ತಿದ್ದರಲ್ಲದೆ, ತಾವು ತಂದೆ ಸೀರೆ ಬಳೆಗಳನ್ನು ಸೋತ ಎದುರಾಳಿ ತಂಡದವರಿಗೆ ತೊಟ್ಟುಕೊಳ್ಳಲು ಕೊಡುತ್ತಿದ್ದರು. ಈ ಆಟಗಳು ಎರಡೂ ಊರುಗಳ ಪ್ರತಿಷ್ಠೆಯ ಕಣಗಳಾಗಿರುತ್ತಿದ್ದವು. ಅಲ್ಲದೆ ಈ ಆಟಗಳ ಸ್ಪರ್ಧೆಯಲ್ಲಿ ಸುತ್ತಮುತ್ತಲಿನ ಊರುಗಳ ಈ ಸಮುದಾಯದ ತಂಡಗಳು ಭಾಗವಹಿಸುತ್ತಿದ್ದವು. ತಾವು ಗೆಲ್ಲುತ್ತೇವೆಂದು ಪಂದ್ಯ ಕಟ್ಟಿದ ತಂಡದವರು ಸೋತರೆ ಮೀಸೆ-ಗಡ್ಡ ಬೋಳಿಸಿಕೊಂಡು ಸೀರೆ ಉಟ್ಟು, ಬಳೆಗಳನ್ನು ತೊಡಬೇಕಾಗುತ್ತಿತ್ತು. ಈಗ ಈ ರೀತಿಯ ಊರುಗಳ ನಡುವೆ ನಡೆಯುವ ಆಟಗಳಿಲ್ಲ. ಆದರೆ ಒಂದೇ ಊರಿನ ಸಮುದಾಯದವರೊಳಗಿನ ಎರಡು ತಂಡಗಳ ನಡುವೆ ಸುಗ್ಗಿಯ ಕಾಲ ಮುಗಿದು ಮಳೆಗಾಲ ಪ್ರಾರಂಭವಾಗುವ ಸಂದರ್ಭಗಳಲ್ಲಿ ನಡೆಯುತ್ತವೆ.

**ಕುಸ್ತಿ :** ಈ ಸಮುದಾಯದಲ್ಲಿ ಈಗಲೂ ಕುಸ್ತಿ ಪಟುಗಳಿದ್ದಾರೆ. ವಿಶೇಷವಾಗಿ ಜಿಲ್ಲೆ, ರಾಜ್ಯಮಟ್ಟ ಹಾಗೂ ಅಂತರ್ ರಾಜ್ಯಮಟ್ಟದ ಕುಸ್ತಿ ಸ್ಪರ್ಧೆಗಳಲ್ಲಿ ಈ ಸಮುದಾಯ ದವರು ಸ್ಪರ್ಧಿಸಿ ಆಡುತ್ತಾರೆ. ಹಾಗೂ ಸ್ಥಳೀಯ ದೊಡ್ಡ ದೊಡ್ಡ ಜಾತ್ರೆಗಳ ಮರುದಿನ, ಹನುಮಪ್ಪನ ಓಕುಳಿಯಾಟದ ಮರುದಿನ ಕುಸ್ತಿ ಪಂದ್ಯಗಳಿರುತ್ತವೆ. ಇವುಗಳಲ್ಲಿಯೂ ಸಮುದಾಯದ ಕುಸ್ತಿ ಪಟುಗಳು ಆಡುತ್ತಾರೆ. ಇನ್ನು ಸಮುದಾಯದವರೇ ತಮ್ಮ ಮನೆ ದೇವರುಗಳ ಜಾತ್ರೆಯ ಸಂದರ್ಭದಲ್ಲಿ, ನಾಗರ ಪಂಚಮಿಯ ಸಂದರ್ಭದಲ್ಲಿ ಕುಸ್ತಿ ಪಂದ್ಯಗಳನ್ನೇರ್ಪಡಿಸಿ ಆಡುತ್ತಾರೆ. ಆಟಕ್ಕಿಂತ ಮುಂಚೆಯೇ ಬಹುಮಾನಗಳನ್ನು ಘೋಷಿಸಿರುತ್ತಾರೆ. ಬಾಗಲಕೋಟೆ, ವಿಜಾಪೂರ, ಬೆಳಗಾವಿ ಜಿಲ್ಲೆಗಳಲ್ಲಿ ಈ ಸಮುದಾಯ ದಲ್ಲಿ ಕುಸ್ತಿ ಪಟುಗಳು ಇನ್ನೂ ಕಂಡು ಬರುತ್ತಾರೆ.

ಇನ್ನುಳಿದ ಆಟಗಳಾದ ಓಟ, ಗುಂಡು ಎತ್ತುವುದು, ಹಲ್ಲಿನಿಂದ ಮತ್ತು ಕೂದಲಿನಿಂದ ಚಕ್ಕಡಿ ಎಳೆಯುವುದು, ತುಂಬಿದ ಕೊಡ ಎತ್ತುವುದು ಮುಂತಾದವುಗಳನ್ನು ನಾಗರ

ಪಂಚಮಿಯ ಜೋಕಾಲಿಯಾಡುವ ದಿನದಂದು ಸ್ಪರ್ಧೆಗಳನ್ನಾಗಿ ಇಡುವರು. ಗೆದ್ದವರಿಗೆ ಬೆಳ್ಳಿಯ ಕಡುಗ ತೊಡಿಸುವ, ನೋಟುಗಳ ಹಾರಹಾಕುವ, ಮೆರೆಸುವ ಕಾರ್ಯವನ್ನು ನೆರವೇರಿಸುತ್ತಾರೆ.

ಎರಡೂ ಭುಜಗಳ ಮೇಲೆ ನೀರು ತುಂಬಿದ ದೊಡ್ಡ ಕೊಡಗಳನ್ನಿಟ್ಟುಕೊಂಡು ಉಟಾಬಸಿ ತೆಗೆಯುವ, ಕ್ವಿಂಟಾಲ್ ಗಟ್ಟಲೆ ತೂಕದ ಕಾಳಿನ ಮೂಟೆಗಳನ್ನೊತ್ತು ಉಟಾಬಸಿ ತೆಗೆಯುವ, ದೀಡ ನಮಸ್ಕಾರ (ಸಾಸ್ಟಾಂಗ ನಮಸ್ಕಾರ) ಹಾಕುವ ಪ್ರದರ್ಶನಗಳು ಊರ ಇಲ್ಲವೆ ಮನೆ ದೇವರುಗಳ ಜಾತ್ರೆಯ ದಿನದಂದು ದೇವತೆಯ ಗುಡಿಯೆದುರು ನಡೆಯುತ್ತವೆ. ಅಂಥವರಿಗೆ ಹಿರಿಯರು, ಪ್ರೋತ್ಸಾಹಕರು ಹಣ-ಅರಿವೆಗಳ ಬಹುಮಾನ ನೀಡುತ್ತಾರೆ.

ಈ ಪ್ರಮುಖ ಆಟಗಳಲ್ಲದೆ ಚಿನಿದಾಂಡಿನಾಟ, ಬುಗುರಿಯಾಟ, ಕೊಬ್ಬರಿ ಬಟ್ಟಲನ್ನು ತಿರುಗಿಸುವ ಆಟ, ಈ ಮುಂತಾದ ಕೆಲವನ್ನು ಮಳೆಗಾಲ ಮತ್ತು ನಾಗರ ಪಂಚಮಿಯ ಜೋಕಾಲಿಯಂದು ಆಡುತ್ತಾರೆ. ಇವುಗಳನ್ನು ಹೆಚ್ಚಾಗಿ ಚಿಕ್ಕವರು ಮತ್ತು ಪ್ರಾಯಕ್ಕೆ ಬಂದವರು ಆಡುತ್ತಾರೆ. ಪಂಚಮಿಯಂದು ಕಟ್ಟಿದ ಜೋಕಾಲಿಯನ್ನು ತೂಗುತ್ತ ಜೋಕಾಲಿ ಏರಿಸಿ, ಎದುರಿಗೆ ಎತ್ತರದಲ್ಲಿ ಕಟ್ಟಿದ ನೋಟುಗಳನ್ನು, ಒಣಕೊಬ್ಬರಿಯ ಬಟ್ಟಲುಗಳನ್ನು ಬಾಯಿಯಿಂದ ಹರಿದುಕೊಂಡು ಪಡೆಯುವ, ಜೋಕಾಲಿಯನ್ನು ತೂಗುತ್ತಲೇ ಅದರ ಮೇಲೆ ಲಾಗ ಹಾಕುವ ರೋಮಾಂಚನ ಪ್ರದರ್ಶನಗಳೂ ನಡೆಯುತ್ತವೆ.

ಹೆಂಗಸರ ಆಟಗಳಲ್ಲಿ ಪ್ರಮುಖವಾಗಿ ಕಣ್ಣು ಮುಚ್ಚಾಲೆಯಾಟ, ಪಗಡೆಯಾಟ, ಅಂಡ್ಯಾಳ ಆಡುವ ಆಟ, ಕುಂಟಲಿಪಿಯಾಟ, ಕೋಲಾಟಗಳು ಪ್ರಮುಖವಾದವು ಗಳಾಗಿವೆ. ಇಂಥ ಆಟಗಳಲ್ಲಿ ಸಮುದಾಯದ ಹೆಚ್ಚಿನವರು ಉತ್ಸಾಹದಿಂದ ಪಾಲ್ಗೊಂಡು ಆಡುತ್ತಿದ್ದರು. ಈಗ ಆಡುವುದು ಕಡಿಮೆಯಾಗುತ್ತ ಬರತೊಡಗಿದೆ.

# ೧೦

## ಸಮಸ್ಯೆ ಸಂಘಟನೆ ಪರಿಹಾರ

ಅಲೆಮಾರಿಯಾಗಿದ್ದ ಚೆನ್ನದಾಸರ ಸಮುದಾಯ ಕ್ರಮೇಣ ನೆಲೆಯೂರುತ್ತಿದ್ದಂತೆ ಸಮಸ್ಯೆಗಳ ಸರಮಾಲೆಯೇ ಎದುರಾದವು. ಶೈಕ್ಷಣಿಕ ತಿಳುವಳಿಕೆ ಪಡೆದುಕೊಳ್ಳುತ್ತಿದ್ದಂತೆ ಜ್ವಲಂತ ಸಮಸ್ಯೆಗಳು ಈ ಸಮುದಾಯವನ್ನು ಇನ್ನಿಲ್ಲದಂತೆ ಕಾಡಿಸಿ ಅಭಿವೃದ್ಧಿಯನ್ನೇ ಕುಂಠಿತಗೊಳಿಸಿತು. ಅವುಗಳಲ್ಲಿ ಪ್ರಮುಖ ಸಮಸ್ಯೆಗಳೆಂದರೆ "ಚೆನ್ನದಾಸರ ಜಾತಿ ಪ್ರಮಾಣ ಪತ್ರ"ದ್ದು. ಜಾತಿಯ ಹೆಸರನ್ನು ಸರಿಯಾಗಿ ಹೇಳಿಕೊಳ್ಳಲು ಮತ್ತು ಅದನ್ನು ಬಳಸಿಕೊಳ್ಳಲು ಅಶಿಕ್ಷಿತವಾದ ಈ ಸಮುದಾಯ ಪ್ರಾರಂಭದಿಂದಲೂ ನಿಷ್ಕಾಳಜಿ ಮಾಡುತ್ತಾ ಬಂದಿದ್ದರಿಂದಾ, ಶಿಕ್ಷಣದಲ್ಲಿ ಹಿಂದುಳಿದಿರುವುದರಿಂದಾಗಿ ಹಾಗೂ ಉಪಜೀವನಕ್ಕಾಗಿ ನಾನಾ ವೃತ್ತಿಗಳನ್ನು ಸ್ವೀಕರಿಸಿದ್ದರಿಂದಾಗಿ ಈ ಸಮುದಾಯದ ಜಾತಿಯ ಹೆಸರನ್ನು ಬೇಕು ಬೇಕಾದವರು ತಮಗನಿಸಿದಂತೆ ಕರೆದರು. ಅಲ್ಲದೆ ಇದನ್ನೇ ಕೇಳಿಸಿಕೊಂಡ ಹಲವರು ದಾಖಲೆಗಳಲ್ಲಿ ಹಾಗೆಯೆ ದಾಖಲಿಸಿದರು. ಶಾಲಾ ದಾಖಲೆಗಳಲ್ಲಿಯೂ ಕೂಡ ತಾವಾಗಿಯೇ ಹೋಗಿ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಿ ಬರೆಸಿದವರಲ್ಲ. ಶಿಕ್ಷಕರೇ ತಮಗೆ ಕಂಡಂತೆ ದಾಖಲಿಸಿ ಕೊಂಡರು, ಜನಗಣತಿ ಮಾಡುವವರೂ ಕೂಡ ಬೇರೆಯವರಿಂದ ಕೇಳಿ ಬರೆದು ಕೊಂಡುದರ ಪರಿಣಾಮವಾಗಿ ಒಂದೇ ಸಮುದಾಯದ ವಿಭಿನ್ನ ವೃತ್ತಿಯ ಪರ್ಯಾಯ ನಾಮಗಳನ್ನು ಬೇರೆ ಬೇರೆ ಜಾತಿಗಳೆಂದು ಪರಿಗಣಿತವಾದವು.

ಮೂಲದಲ್ಲಿರುವ ಒಂದೇ ಸಮುದಾಯವನ್ನು ಬೇರೆ ಬೇರೆಯಾಗಿ ಕರೆದರೂ, ಬರೆದರೂ ಈ ಸಮುದಾಯ ತಲೆಕೆಡಿಸಿಕೊಳ್ಳದೆ ತನ್ನ ಪಾಡಿಗೆ ತಾನು ಈ ಎಲ್ಲ ಹೆಸರಿನವರೊಂದಿಗೆ ಕೊಳು ಕೊಡೆಯ ಸಂಬಂಧ ಮಾಡುತ್ತ, ಜಾತ್ರೆ ಹಬ್ಬಗಳಲ್ಲಿ ಒಂದಾಗುತ್ತಾ ಬಂದಿದೆ. ಇವರು ಬೇರೆ ಬೇರೆ ಕಡೆಗೆ ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಟ್ಟಿದ್ದರೂ ಅವರ ಬಳಿಗಳಲ್ಲಿ ಸಾಮ್ಯತೆಯಿದೆ. ಕುಲಶಾಸ್ತ್ರೀಯ ಅಧ್ಯಯನದ ಮೂಲಕವೂ ಇವರೆಲ್ಲಾ ಒಂದೇ ಎಂಬುದೂ ಕಂಡುಬರುತ್ತದೆ. ಹೀಗಿದ್ದರೂ ತಾವು ಮಾಡದ, ತಮ್ಮದಲ್ಲದ ತಪ್ಪಿಗೆ ಇಂದು ಸಮುದಾಯ ದಂಡಿಗದಾಸರ, ದಂಗದಾಸರ, ದೊಂಬಿದಾಸರ, ಚಕ್ರವಾದ್ಯ ದಾಸರ, ಥಂಗದಾಸರ, ದಾಸರು, ದಾಸರಿ, ದಾಸ,

ದಾಸಯ್ಯ ಎಂದು ಕರೆಸಿಕೊಂಡಿದೆ. ಇದರಿಂದಾಗಿ ಮೀಸಲಾತಿಯಿಂದ ಸಿಗುವ ಶಿಕ್ಷಣ ಸೇರಿದಂತೆ ಎಲ್ಲಾ ಸವಲತ್ತುಗಳಿಂದ ವಂಚಿತರಾಗುತ್ತಿದ್ದಾರೆ. ಆದುದರಿಂದ ಪರಿಶಿಷ್ಟ ಜಾತಿಯ ಸವಲತ್ತುಗಳನ್ನು ಹಲವೆಡೆ ತಿರಸ್ಕರಿಸಲಾರಂಭಿಸಿರುವುದರಿಂದ ಈ ಸಮುದಾಯದ ಅಭಿವೃದ್ಧಿಗೆ ತೀರ ಹಿನ್ನಡೆಯುಂಟಾಗಿದೆ. ಆದುದರಿಂದ ಈ ಕೃತಿಯಲ್ಲಿ ವಿವರಿಸಿದಂತೆ ಈ ಸಮುದಾಯದ ವಿವಿದ ಹೆಸರುಗಳೆಲ್ಲ ಪ್ರತ್ಯೇಕ ಜಾತಿಗಳಾಗಿರದೆ ಚೆನ್ನದಾಸರ ಸಮುದಾಯದ ಪರ್ಯಾಯ ನಾಮಗಳಾಗಿವೆ. ಈ ಲೋಪವನ್ನು ಸರಿಪಡಿಸಿದರೆ ಈ ಶೋಷಿತ ಸಮುದಾಯವು ಒಂದಿಷ್ಟು ಮುಂದೆಬಂದು ಅಭಿವೃದ್ಧಿ ಸಾಧಿಸಲು ಅನುಕೂಲವಾಗುತ್ತದೆ.

**ಸಂಘಟನೆ–ಶಿಕ್ಷಣ**

ಈ ಸಮುದಾಯ ಮುಂಚಿನಿಂದಲೂ ಅಸಂಘಟಿತವೇ ಆಗಿದೆ. ಶೈಕ್ಷಣಿಕ ತಿಳುವಳಿಕೆ ಇತ್ತೀಚೆಗೆ ಹುಟ್ಟಿಕೊಂಡಿದೆ. ಇದರಿಂದಾಗಿ ಶೋಷಣೆಯನ್ನು ಪ್ರತಿಭಟಿಸುವ, ಹಕ್ಕುಗಳಿಗಾಗಿ ಹೋರಾಡುವ ಮನೋಧರ್ಮ ಇತ್ತಿತ್ತಲಾಗಿ ಕಾಣಿಸಿಕೊಳ್ಳತೊಡಗಿದೆ. ೧೯೭೦ರ ದಶಕದ ಪ್ರಾರಂಭದಲ್ಲಿ ಬೆಳಗಾವಿ ಜಿಲ್ಲೆಯ ಈ ಸಮುದಾಯದ ಕೆಲವು ನೌಕರರು ಸೇರಿ ಚೆನ್ನದಾಸರ ಸೇವಾಸಂಘ ಮಾಡಿಕೊಂಡು ಶೈಕ್ಷಣಿಕ ಅರಿವು ಮೂಡಿಸಲು ಮುಂದಾದರು, ಆದರೆ ಅದು ರಚನಾತ್ಮಕವಾಗಿ ಕ್ರಿಯೆಗಿಳಿಯಲಿಲ್ಲ. ನಂತರದಲ್ಲಿ ಗದಗ ನಗರವನ್ನು ಕೇಂದ್ರವನ್ನಾಗಿಟ್ಟುಕೊಂಡು ಕರ್ನಾಟಕ ಚೆನ್ನದಾಸರ ಸಮಾಜ ಸೇವಾ ಸಂಘವನ್ನು ೧೯೭೫ ರಲ್ಲಿ ಶ್ರೀ ರಂಗಪ್ಪ ಹೆಬ್ಬಳ್ಳಿ, ಭೀಮಪ್ಪ ಟಿ ದಾಸರ, ಪ್ರೊ ಕೆ ಎಚ್ ಬೇಲೂರ, ಎಚ್ ಎಲ್ ದಾಸರ, ಟಿ ಎಚ್ ನರಗುಂದ, ಎಚ್ ಟಿ ಸಂಜೀವಸ್ವಾಮಿ ಮುಂತಾದವರ ನೇತೃತ್ವದಲ್ಲಿ ಹುಟ್ಟು ಹಾಕಲಾಯಿತು. ರಾಜ್ಯದ ತುಂಬ ಚದುರಿಹೋಗಿರುವ ಚೆನ್ನದಾಸರ ಬಾಂಧವರಲ್ಲಿ ಸಾಂಘಿಕ ಮತ್ತು ಸಾಮಾಜಿಕ ಪ್ರಜ್ಞೆ ಮೂಡಿಸಲು, ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಸಹಾಯಕವಾಗುವ ಯೋಜನೆಗಳನ್ನು ರೂಪಿಸುವುದು, ರಾಜ್ಯದ ಯಾವುದೇ ಮೂಲೆಯಲ್ಲಿ ಸಮುದಾಯದವರಿಗೆ ಅಸ್ಪೃಶ್ಯತೆ ಮತ್ತು ಇತರೆ ಕಾರಣಗಳಿಂದಾಗುವ ಶೋಷಣೆಯನ್ನು ಸಾಂಘಿಕವಾಗಿ ಎದುರಿಸಲು ಪ್ರಯತ್ನಿಸುವ ಉದ್ದೇಶದಿಂದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬಂದಿದೆ. ತನ್ನ ವ್ಯಾಪ್ತಿಯಲ್ಲಿ ಸಮಾವೇಶ, ಚಿಂತನ ಸಭೆಗಳನ್ನು ನಡೆಸಿ ಸಮುದಾಯವನ್ನು ಒಗ್ಗೂಡಿಸಲು ಪ್ರಮಾಣಿಕವಾಗಿ ಪ್ರಯತ್ನಿಸಿದೆ. ೨೦೦೫ ರಲ್ಲಿ ಬೆಂಗಳೂರನ್ನು ಕೇಂದ್ರವನ್ನಾಗಿಟ್ಟುಕೊಂಡು ಕರ್ನಾಟಕ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘ ಎಂಬ ರಾಜ್ಯ ಮಟ್ಟದ ಸಂಘಟನೆ ಕೆ ಭಾಸ್ಕರ ದಾಸ್ ಎಕ್ಕಾರು ಅವರ ನೇತೃತ್ವದಲ್ಲಿ ಹುಟ್ಟಿಕೊಂಡಿತು. ರಾಜ್ಯದ ಎಲ್ಲಾ ಜಿಲ್ಲೆಗಳ ಸಮುದಾಯದ ಸಮಸ್ಯೆಗಳನ್ನು ಪ್ರತಿನಿಧಿಸಿರುವ ಈ ಸಂಘಟನೆಯು ರಾಜ್ಯ ಮತ್ತು ಕೇಂದ್ರ ಸರಕಾರದ ಎದುರಿಗೆ ಸಮುದಾಯದ ಸಮಸ್ಯೆಗಳನ್ನು ನಿವೇದಿಸಲು ಅಗತ್ಯ ವಾದಷ್ಟು ಪ್ರಯತ್ನಿಸಿದೆ. ಮತ್ತು ರಾಜ್ಯವ್ಯಾಪಿ ಸಾಮಾಜಿಕ ಸಂಘಟನೆಯ ಜೊತೆಗೆ

ನೌಕರರ ಸಂಘಟನೆಗಳನ್ನು ಮಾಡಿ, ರಾಜ್ಯಮಟ್ಟದ ಚಿಂತನಾ ಸಮಾವೇಶ, ನೌಕರರ ಸಮಾವೇಶ,ಕಲಾವಿದರ ಸಮಾವೇಶಗಳನ್ನು ಏರ್ಪಡಿಸಿ ಸಮುದಾಯದ ಜಾಗೃತಿಗೆ ಕಾರಣವಾಗಿದೆ. ಸಮುದಾಯದ ಬೆಂಬಲಕ್ಕೆ ನಿಂತು ಧೈರ್ಯ-ಶಕ್ತಿ ತುಂಬಿದ್ದು ಈ ಸಂಘಟನೆಯ ಹೆಗ್ಗಳಿಕೆಯಾಗಿದೆ. ಜಾತಿಪ್ರಮಾಣ ಪತ್ರ ಕೊಡಲು ಇರುವ ತೊಡಕುಗಳನ್ನು ನಿವಾರಿಸುವ, ನೌಕರರನ್ನು ಸಂಘಟಿಸಿ ಸಮುದಾಯದ ಬಡವರನ್ನು ಮುಂದೆ ತರಲು ಶೈಕ್ಷಣಿಕ ಯೋಜನೆಗಳನ್ನು ರೂಪಿಸುವ, ಸಮುದಾಯದಲ್ಲಿರುವ ಬೇರೆ ಬೇರೆ ವಿವಿಧ ಕಲಾವಿದರನ್ನು ಸೇರಿಸಿ ಸಮಾವೇಶಮಾಡಿಸಿ ಅವರನ್ನು ಪ್ರೋತ್ಸಾಹಿಸುವ, ಜನತೆಗೆ ಪರಿಚಯಿಸುವ ಇತ್ಯಾದಿ ಕೆಲಸಗಳನ್ನು ಈ ಸಂಘಟನೆಗಳು ಮಾಡುತ್ತಿವೆ.

ಇದಲ್ಲದೆ ಹಲವು ಜಿಲ್ಲೆಗಳಲ್ಲಿ ಈ ಸಮುದಾಯದ ಸಂಘಟನೆಗಳು ತಮ್ಮ ವ್ಯಾಪ್ತಿಯ ಮಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಅವುಗಳಲ್ಲಿ ೧೯೮೬ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಚೆನ್ನದಾಸರ ಸಮಾಜ ಸೇವಾಸುಧಾರಕ ಸಂಘ; ೧೯೯೫ ರಲ್ಲಿ ಮಾನ್ವಿಯಲ್ಲಿ ಅಖಿಲ ಕರ್ನಾಟಕ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘ; ೨೦೦೧ ರಲ್ಲಿ ರಾಯಚೂರು ಜಿಲ್ಲಾ ಚೆನ್ನದಾಸರ ಸಮಾಜ ಸೇವಾಸಂಘ, ಬೆಳಗಾವಿ ಜಿಲ್ಲಾ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘ; ಗುಲ್ಬರ್ಗಾದ ಗುರುಮಿಠಕಲ್‌ದಲ್ಲಿ ಕರ್ನಾಟಕ ರಾಜ್ಯ ಹೊಲೆಯ ದಾಸರ ಕ್ಷೇಮಾಭಿವೃದ್ಧಿ ಸಂಘ; ರಾಯಚೂರು ಮತ್ತು ಬಳ್ಳಾರಿ ಜಿಲ್ಲಾ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘ; ಬಿಜಾಪುರ ಜಿಲ್ಲಾ ಚೆನ್ನದಾಸರ ಸಮಾಜ ಸೇವಾ ಸಂಘ; ಬಾದಾಮಿಯಲ್ಲಿ ಬಾಗಲಕೋಟೆ ಜಿಲ್ಲಾ ಚೆನ್ನದಾಸರ ಸಮಾಜ ಸೇವಾ ಸಂಘ; ಮತ್ತು ಕೋಲಾರ ಜಿಲ್ಲಾ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘ; ಹೀಗೆ ಹತ್ತು ಹಲವು ಸಂಘಟನೆಗಳು ರಾಜ್ಯ, ಆಯಾ ವಿಭಾಗ, ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕುಮಟ್ಟದಲ್ಲಿ ಅಧಿಕೃತವಾಗಿ ನೋಂದಣಿಗೊಂಡು ಕ್ರಿಯಾತ್ಮಕವಾಗಿ ಕಾರ್ಯ ನಿರ್ವಹಿಸುತ್ತಿವೆ.ಇದರಿಂದಾಗಿ ಈ ಹತ್ತು ವರ್ಷಗಳ ಅವಧಿಯಲ್ಲಿ ಸಮುದಾಯದ ಜನತೆಯಲ್ಲಿ ಅಭಿವೃದ್ಧಿಯ ಕುರಿತು ಜಾಗೃತಿ ಮೂಡಲು ಸಾಧ್ಯವಾಗುತ್ತಿದೆ.

ಈ ಸಮುದಾಯದ ಹಿರಿಯ ಅಧಿಕಾರಿಗಳು, ನೌಕರರಾಗಿರುವ ಎಚ್ ಎಲ್ ದಾಸರ, ಕೆ ಹೆಚ್ ಬೇಲೂರ, ಪಿ ವೈ ಜಾಗನೂರ, ಬಿ ಎಲ್ ಗೊಳಸಂಗಿ, ಸಿದ್ದಪ್ಪ ರಾಯಚೂರು, ಬಾಲಚಂದ್ರಪ್ಪ, ಮುದ್ದುರಂಗಪ್ಪ, ಕೆ ದಶವಂತ, ಯದುನಡುಬೈಲು, ಎನ್ ರಾಘವ, ಬಿ ಚಲಪತಿ, ಎಚ್ ಟಿ ಸಂಜೀವಸ್ವಾಮಿ, ಬಿ ಟಿ ದಾಸರ ಮುಂತಾದವರು ಪ್ರಾರಂಭದಲ್ಲಿ ಸಮುದಾಯದ ಕುರಿತು ಜಾಗೃತಿ ಮೂಡಿಸಲು ಕಾರಣರಾದರು.

ಸಾಮಾಜಿಕ ಸಂಘಟನೆಗಳಿರುವ ಹಾಗೆ ಶೈಕ್ಷಣಿಕ ಸಂಸ್ಥೆಗಳ ಅಭಾವ ಈ ಸಮುದಾಯದಲ್ಲಿದೆ. ಗದಗ ಸಂಘಟನೆಯ ಆಶ್ರಯದಲ್ಲಿ ಶ್ರೀ ವೆಂಕಟೇಶ್ವರ ಪ್ರೌಢಶಾಲೆಯನ್ನು ೧೯೮೨-೮೩ ರಲ್ಲಿ ಸ್ಥಾಪಿಸಲಾಗಿದೆ. ಮತ್ತು ಬಿಜಾಪುರದ ಇಂಡಿಯ

ಚವಡಿಹಾಳದಲ್ಲಿ ೧೯೯೧ರಲ್ಲಿ ಸ್ಥಾಪಿಸಿದ ಭಾಗ್ಯವಂತಿ ವಿದ್ಯಾವರ್ಧಕ ಸಂಘದ ಅಡಿಯಲ್ಲಿ ಪ್ರೌಢಶಾಲೆ ನಡೆಸುವುದನ್ನು ಬಿಟ್ಟರೆ ಸಮುದಾಯದಲ್ಲಿ ಅಂಥ ಸಂಸ್ಥೆಗಳಿಲ್ಲ. ಈ ಮೇಲೆ ತಿಳಿಸಿದಂತೆ ಸಮುದಾಯದಲ್ಲಿ ಕೆಲವರು ಉನ್ನತ ಹುದ್ದೆಗಳಲ್ಲಿದ್ದರೂ ಅವರು ತಮ್ಮ ಕೆಲಸದ ಒತ್ತಡದಿಂದಾಗಿ ಗ್ರಾಮಗಳಲ್ಲಿ ಇರುವ ಸಮುದಾಯದ ಸಾಮಾನ್ಯ ಜನರ ಹತ್ತಿರ ಬರಲು ಸಾಧ್ಯವಾಗಿಲ್ಲ ಹಾಗೂ ಶೈಕ್ಷಣಿಕ ಜಾಗೃತಿ ಉಂಟಾಗಿಲ್ಲ. ಆದರೆ ಮೊದಲಿನ ಹತ್ತು ವರ್ಷಗಳಿಗೆ ಹೋಲಿಸಿದರೆ ಈ ಸಮುದಾಯದ ಸಾಕ್ಷರತಾ ಪ್ರಮಾಣದಲಿ ಇತ್ತೀಚಗೆ ಸುಧಾರಣೆ ಕಂಡುಬಂದಿದೆ. ಮೆಟ್ರಿಕ್ ಪೂರ್ವದ ಸಾಕ್ಷರತಾ ಪ್ರಮಾಣ ಆಶಾದಾಯಕವಾಗಿದ್ದರೆ ಮೆಟ್ರಿಕ್ ನಂತರದ ಸಾಕ್ಷರತಾ ಪ್ರಮಾಣ ಶೋಚನೀಯ ಎನ್ನುವಂತಿದೆ. ಹಲವೆಡೆ ಮೆಟ್ರಿಕ್ ನಂತರದ ವಿಧ್ಯಾರ್ಥಿಗಳಿಗೆ ಚೆನ್ನದಾಸರ ಜಾತಿ ಪ್ರಮಾಣಪತ್ರದ ತೊಂದರೆಯಿಂದಾಗಿ ಶುಲ್ಕ ಕಟ್ಟಲು ಆಗದೆ ಶಾಲೆ ಬಿಟ್ಟವರ ಸಂಖ್ಯೆ ಗಣನೀಯವಾಗಿದೆ. ಹೀಗಾಗಿ ಮೆಟ್ರಿಕ್ ನಂತರದ ತಾಂತ್ರಿಕ, ವಿಜ್ಞಾನ, ವೃತ್ತಿಪರ ತರಬೇತಿ ಪದವಿಗಳಿಗೆ ಮಕ್ಕಳು ಹೋಗಲು ಸಾಧ್ಯವಾಗದ ಸ್ಥಿತಿ ನಿರ್ಮಾಣವಾಗಿದೆ.

ಸಮುದಾಯ ತನ್ನ ಪಾಲಿನ ಮೀಸಲಾತಿ ಸವಲತ್ತನ್ನು ಪಡೆದು ವಿದ್ಯಾಭ್ಯಾಸ ನಡೆಸುವುದು ಅಸಾಧ್ಯದ ಮಾತು. ಓದುವ ಆಸಕ್ತಿಯಿಂದ ಶಾಲಾ ಕಾಲೇಜು ಮತ್ತು ಸರ್ಕಾರ ನಡೆಸುವ ವಸತಿ ನಿಲಯಗಳಲ್ಲಿ ಪ್ರವೇಶ ಪಡೆಯಬೇಕಾದರೆ ಹೆಚ್ಚಿನ ಅಂಕಗಳನ್ನು ಪಡೆದು ಬಹುಸಂಖ್ಯಾತ ವಿದ್ಯಾರ್ಥಿಗಳ ಜೊತೆ ಸ್ಪರ್ಧೆಗೆ ಇಳಿದು ಸೀಟು ಗಿಟ್ಟಿಸಿಕೊಳ್ಳಬೇಕಾಗುತ್ತದೆ. ಇದು ಈ ಸಮುದಾಯದ ಮಕ್ಕಳಿಗೆ ಸಾಧ್ಯವೇ? ಎಂಬುದು ಪ್ರಶ್ನೆ. ಬಹುಸಂಖ್ಯಾತ ಮತ್ತು ನೆಲೆ ನಿಂತಿರುವ ಪ್ರಬಲ ಕೋಮುಗಳ ನಡುವೆ ಇವರು ತಮ್ಮ ಸಾಮರ್ಥ್ಯ ಮತ್ತು ಪ್ರತಿಭೆಯನ್ನು ಪ್ರದರ್ಶಿಸಿ ಶಿಕ್ಷಣ ಪಡೆಯುವುದು ಕನಸಿನ ಮಾತಾಗಿದೆ. ಈ ಸಮುದಾಯದ ಮಕ್ಕಳ ಶಿಕ್ಷಣಕ್ಕೆ ಪೂರಕವಾದ ವಿಶೇಷ ಅವಕಾಶಗಳು ಇಲ್ಲದ ಕಾರಣ ಶೈಕ್ಷಣಿಕವಾಗಿ ಹಿಂದುಳಿದಿದೆ.

**ಕೋಷ್ಟಕ: ೧೦.೧ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಶೇಕಡಾವಾರು ಶೈಕ್ಷಣಿಕ ಮಟ್ಟ (೨೦೦೭)**

| ಸಂ | ಶೈಕ್ಷಣಿಕ ಮಟ್ಟ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಕ್ಷರಸ್ಥರು | ೪೩೮೫ | ೨೪೭೦ | ೬೮೪೭ |
| | ಶೇಕಡ | ೪೩.೩೩ | ೨೬.೫೨ | ೩೫.೨೩ |
| ೨ | ಅನಕ್ಷರಸ್ಥರು | ೫೭೩೩ | ೬೮೪೭ | ೬೫೮೩ |
| | ಶೇಕಡ | ೫೬.೬೬ | ೭೩.೪೮ | ೬೪.೭೭ |
| | ಒಟ್ಟು | ೧೦೧೧೮ | ೯೩೧೨ | ೧೯೪೩೦ |
| | | ೧೦೦.೦೦ | ೧೦೦.೦೦ | ೧೦೦.೦೦ |

ಕರ್ನಾಟಕದಲ್ಲಿ ವಾಸಿಸುವ ಚೆನ್ನ ದಾಸರ ೪ ವರ್ಷರೊಳಗಿನ ವಯೋಮಾನದ ಮಕ್ಕಳು ಶೇ. ೭.೭೦ ರಷ್ಟು ಇರುವರು. ಇವರನ್ನು ಹೊರತುಪಡಿಸಿ ಶಿಕ್ಷಣ ಪಡೆಯಲು ಯೋಗ್ಯರಾದವರು ಶೇ. ೯೨.೨೯ ರಷ್ಟಿದ್ದಾರೆ. ಆದರೆ, ಇವರಲ್ಲಿ ಸಾಕ್ಷರ ರಾದವರ ಪ್ರಮಾಣ ಕೇವಲ ಶೇ. ೩೫.೨೩ (೨೦೦೭) ರಷ್ಟು ಎಂಬುದು ಪ್ರಸ್ತುತ ಸಮೀಕ್ಷೆಯಿಂದ ತಿಳಿದುಬರುತ್ತದೆ. ಈ ಸಾಕ್ಷರತೆಯಲ್ಲಿ ಕೇವಲ ಶೇ. ೧೪.೨೩ ರಷ್ಟು ಜನ ಮೆಟ್ರಿಕ್ ನಂತರದ ಹಂತದವರೆಗೆ ತಲುಪಿರುವರು. ಅದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣಕ್ಕಿಂತ ಮಹಿಳೆಯರ ಸಾಕ್ಷರತಾ ಪ್ರಮಾಣ ತುಂಬಾ ಕಡಿಮೆ ಇರುವುದು. ಕರ್ನಾಟಕ ರಾಜ್ಯದ ಎಲ್ಲ ಸಮುದಾಯಗಳ ಸರಾಸರಿ ಸಾಕ್ಷರರ ಪ್ರಮಾಣ ಶೇಕಡಾ ೬೬.೬೪ (೨೦೦೧ರ ಜನಗಣತಿ). ಚೆನ್ನ ದಾಸರಲ್ಲಿ ಅನಕ್ಷರಸ್ಥರ ಪ್ರಮಾಣವು ೬೪.೭೭ರಷ್ಟಿದೆ. ರಾಜ್ಯದ ಸರಾಸರಿ ಶಿಕ್ಷಣ ಮತ್ತು ಚೆನ್ನದಾಸರ ಸಮುದಾಯದ ನಡುವಿರುವ ಶಿಕ್ಷಣದ ಅಂತರ ೩೧.೪೧. ಇದು ಇವರ ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ಸೂಚಿಸುವುದು.

**ಕೋಷ್ಟಕ: ೧೦.೨ ಸಮೀಕ್ಷೆಗೊಳಪಟ್ಟ ಚೆನ್ನ ದಾಸರ ಶೈಕ್ಷಣಿಕ ಸ್ಥಾನಮಾನ (೨೦೦೭)**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೧೦೯೪೬ | ೧೦೧೦೬ | ೨೧೦೫೨ |
| ಸಾಕ್ಷರತೆಗೆ ಅನರ್ಹರು (೪ ವರ್ಷದ ಒಳಗಿನವರು) | ೮೨೮ | ೭೯೪ | ೧೬೨೨ |
| ಸಾಕ್ಷರತೆಗೆ ಅರ್ಹರು (೪ ವರ್ಷದ ಮೇಲ್ಪಟ್ಟವರು) | ೧೦೧೧೮ | ೯೩೧೨ | ೧೯೪೩೦ |
| **ಸಾಕ್ಷರರು** | **೪೩೮೫** | **೨೪೭೦** | **೬೮೪೭** |
| **ಮೆಟ್ರಿಕ್ ಪೂರ್ವ ಸಾಕ್ಷರತೆ** | **೩೬೫೬** | **೨೨೨೨** | **೫೮೭೨** |
| ಪ್ರಾಥಮಿಕ | ೧೨೦೯ | ೭೮೫ | ೧೯೯೨ |
| ಮಾಧ್ಯಮಿಕ | ೧೨೮೭ | ೮೦೭ | ೨೦೯೧ |
| ಪ್ರೌಢ | ೧೧೬೦ | ೬೩೦ | ೧೭೮೯ |
| **ಮೆಟ್ರಿಕ್ ನಂತರ ಸಾಕ್ಷರತೆ** | **೭೨೯** | **೨೪೮** | **೯೭೫** |
| ಪದವಿಪೂರ್ವ | ೪೩೨ | ೧೬೬ | ೫೯೬ |
| ಡಿಪ್ಲೊಮ | ೨೬ | ೬ | ೩೨ |
| ಪದವಿ | ೨೧೯ | ೪೭ | ೨೬೬ |
| ಸ್ನಾತಕೋತ್ತರ | ೨೫ | ೮ | ೩೩ |
| ಇತರೆ | ೨೭ | ೨೧ | ೪೮ |
| **ಅನಕ್ಷರಸ್ಥರು** | **೫೭೩೩** | **೬೮೪೭** | **೬೫೮೩** |

ಕೋಷ್ಟಕ: ೧೦.೩ ಚೆನ್ನ ದಾಸರ ಶೈಕ್ಷಣಿಕ ಅಂತರ (೨೦೦೭)

| ವಿವರ | ಸಾಕ್ಷರತೆ | ಅಂತರ |
|---|---|---|
| ಭಾರತ (೨೦೦೧) | ೬೪.೮೪ | ೨೯.೬೧ |
| ಕರ್ನಾಟಕ (೨೦೦೧) | ೬೬.೬೪ | ೩೧.೪೧ |
| ಕರ್ನಾಟಕ ಪಜಾ (೨೦೦೧) | ೫೨.೮೭ | ೧೭.೬೪ |
| ಚೆನ್ನ ದಾಸರ (೨೦೦೭) | ೩೫.೨೩ | |

ಕರ್ನಾಟಕ ರಾಜ್ಯದ ಚೆನ್ನ ದಾಸರಲ್ಲಿ ಇಂದಿಗೂ ಈ ಕೆಳಗಿನ ಸಂವಿಧಾನಬದ್ಧ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿರುವರ ಪ್ರಮಾಣ ಗಣನೀಯವಾಗಿದೆ.

ಕೋಷ್ಟಕ: ೧೦.೪ ಸಮೀಕ್ಷೆಗೊಳಪಟ್ಟ ಕರ್ನಾಟಕ ಚೆನ್ನ ದಾಸರ ಮೂಲಭೂತ ಸೌಲಭ್ಯ ವಂಚಿತರ ಶೇಕಡಾವಾರು ವಿವರ (೨೦೦೭)

| ಸೌಲಭ್ಯಗಳು | ಪ್ರಮಾಣ |
|---|---|
| ಪಡಿತರ ಚೀಟಿ ಹೊಂದದ ಕುಟುಂಬಗಳು | ೨೯.೨೦ |
| ವಿದ್ಯುತ್ ಹೊಂದದ ಕುಟುಂಬಗಳು | ೪೪.೧೦ |
| ಗ್ಯಾಸ್ ಹೊಂದದ ಕುಟುಂಬಗಳು | ೯೫.೦೫ |
| ನಳ ಹೊಂದದ ಕುಟುಂಬಗಳು | ೯೫.೮೩ |
| ಶೌಚಾಲಯ ಹೊಂದದ ಕುಟುಂಬಗಳು | ೮೫.೧೨ |
| ಸ್ನಾನಗೃಹ ಹೊಂದದ ಕುಟುಂಬಗಳು | ೮೨.೬೦ |
| ಟಿವಿ ಹೊಂದದ ಕುಟುಂಬಗಳು | ೭೭.೪೩ |
| ಟೇಪ್ ಹೊಂದದ ಕುಟುಂಬಗಳು | ೮೬.೪೪ |
| ರೇಡಿಯೋ ಹೊಂದದ ಕುಟುಂಬಗಳು | ೮೬.೪೯ |
| ಮತದಾರರ ಪಟ್ಟಿಗೆ ಸೇರದವರು | ೨೧.೧೯ |

ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ನೆಲೆಗಳಲ್ಲಿ ಕರ್ನಾಟಕ ರಾಜ್ಯದ ಅಲೆಮಾರಿತನದ ಚೆನ್ನದಾಸರು ಹಿಂದುಳಿದಿದ್ದಾರೆ. ಇವರ ಅಭಿವೃದ್ಧಿಗಾಗಿ ವಿಶೇಷ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು ಅನಿವಾರ್ಯ.

## ಬೆಳಗಾವಿ ಜಿಲ್ಲೆಯ ಅರ್ಜುನವಾಡದ ಚೆನ್ನದಾಸರ ಕುರಿತ ಹೆಳವರ ದಾಖಲೆ
## (ಮಹಾದೇವ ಸಿದ್ದಪ್ಪ ಹೆಳವಿ)

೧೧೨೬ ಆದಿ ಬಸವಣ್ಣ(ನ ಕಾಲಕೀರ್ತಿ) ಬೆಡಗು ಹುಲ್ಲೆನ್ನವರ, ದೇವರು ತಿರುಪತಿ ತಿಮ್ಮಪ್ಪ, ದೇವರು ವೆಂಕಟರಮಣ, ದೇವರು ಕಲ್ಲೋಳಿ ಹನುಮಂತ, ದೇವರು ಕೊಟಬಾಗಿ ದುರಗಮ್ಮ, ಅರ್ಜುನವಾಡ ಆಕಾಶಮನಿ ದುರಗಮ್ಮ ಠಾಳ(ಸ್ಥಳ) ಅಂಧ್ರ ಪ್ರದೇಶದ ಹತ್ತಿರ ಮದನಪಲ್ಲಿ ಸ್ವಾಸ್ತಿ(ಸ್ವಸ್ಥಳ) ಬಿಟ್ಟು ಗೌಡರ ಹೆಣ್ಣುಮಗಳು ಗಂಗವ್ವನನ್ನು ತೆಗೆದುಕೊಂಡು ಕರೋಶಿಗೆ(ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕು) ಬಂದರು. (ಅಲ್ಲಿಂದ) ಬಿಟ್ಟು ಉಳ್ಳಾಗಡ್ಡಿ ಖಾನಾಪುರಕ್ಕೆ ಬಂದರು (ಅಲ್ಲಿಂದ) ಬಿಟ್ಟು ಮಸರಗುಪ್ಪಿಗೆ ಬಂದರು. (ಅಲ್ಲಿಂದ) ಬಿಟ್ಟು ಅರ್ಜುನವಾಡಕ್ಕೆ ಬಂದರು. ಆಕಾಶಮನಿ ದುರಗವ್ವ ದೇವರ ಪದಬೂಳಿ ಮಾಡಿದರು(ನೆಲೆನಿಂತರು–೧೫೮೯ರಲ್ಲಿ)

ಅರ್ಜುನವಾಡದಲ್ಲಿ ಹುಲ್ಲೆನ್ನವರ, ಅರ್ಜುನವಾಡದಲ್ಲಿ ಚೆನ್ನದಾಸರು ಹೇಳಿದ್ದು ಕೇಳಿ ಬರಕೊಂಡಿದ್ದು.

ಈ ದಾಖಲೆಯನ್ನು ಹೆಳವರು ಹೊಗಳುವುದು ಹೀಗೆ,

ಆದಿ ಕಲ್ಯಾಣ ಪೂರ್ವ ಪಟ್ಟಣ, ಆದಿಬಸವಣ್ಣನವರ ಕಾಲ ಕೀರ್ತಿ ಹುಟ್ಟಿದ್ದು ೧೧೨೬ನೇ ಇಸ್ವಿ ಬೆಡಗು ಹೊನ್ನುಹುಲ್ಲೆನ್ನವರ. ಮನೆದೇವರು ತಿರುಪತಿ ತಿಮ್ಮಪ್ಪ, ವೆಂಕಟರಮಣ, ಕಲ್ಲೋಳಿ ಹನುಮಂತ ದೇವರು, ಕೊಟಬಾಗಿ ದುರಗವ, ಅರ್ಜುನವಾಡದ ಆಕಾಶಮನಿ ದುರಗವ್ವ ದೇವರು.

ಪೂರ್ವಿಸ್ಥಳ ಅಂಧ್ರ ಪ್ರದೇಶದ ಹತ್ತಿರ ಮದನಪಲ್ಲಿಯಲ್ಲಿ ೧೧೭೬ರಲ್ಲಿ ಸ್ವಾಸ್ತಿ ಪಡೆದಿದ್ದರು. ಆವಾಗ ಊರಲ್ಲಿ ತುಡುಗ(ಕಳ್ಳತನ) ಆಗುತ್ತಿತ್ತು. ಸೈನಿಕರು ಜನರೆಲ್ಲರನ್ನು ಹಿಡಿದುಕೊಂಡು ಹೋಗುತ್ತಿದ್ದರು. ಮೀನು, ಏಡಿ ಹಿಡಿಯುತ್ತಿದ್ದ ದೊಡ್ಡ ಭೀಮಪ್ಪ, ಸಣ್ಣ ಭೀಮಪ್ಪ, ನರಸಿಂಗಪ್ಪ ಅವರುಗಳು ರಾತ್ರೋರಾತ್ರಿ ಗೌಡರ ಹೆಣ್ಣು ಮಗಳಾದ ಗಂಗವ್ವಳನ್ನು ಕಂಬಳಿಯಲ್ಲಿ ಮುಚ್ಚಿಹಾಕಿಕೊಂಡು ಕೊಲ್ಹಾರ ಬಂಡಿ ಹೂಡಿಕೊಂಡು ಕರೋಶಿಗೆ(ಚಿಕ್ಕೋಡಿ ತಾಲೂಕು) ಬಂದರು. ಅಲ್ಲಿನ ಘಟ್ಟದ ಬಸವಣ್ಣನ ದೇವರ ಮುಂದೆ ದೊಡ್ಡ ಭೀಮಪ್ಪ ಮತ್ತು ಗಂಗವ್ವ ಗೌಡತಿ ಮದುವೆಯಾದರು. ಅಲ್ಲಿಂದ ಉಳ್ಳಾಗಡ್ಡಿ ಖಾನಾಪುರಕ್ಕೆ ಬಂದರು. ಅಲ್ಲಿಂದ ಮಸರಗುಪ್ಪಿಗೆ ಬಂದು ನಿಂತರು. ಅಲ್ಲಿ ನೆಲ್ಲಲು ಜಾಗ ಸಿಗದಿದ್ದರಿಂದ ೧೫೮೯ರಲ್ಲಿ ಅರ್ಜುನವಾಡಕ್ಕೆ ಬಂದು ನೆಲೆಸಿದರು.

## ಅನುಬಂಧ: ೨. ಹೊಲೆಯರಲ್ಲಿ ಅವಲಂಬಿಸಿರುವ ಜಾತಿಗಳ ವಿಂಗಡಣೆ




(ಈ ರೀತಿ ಇಲ್ಲಿ ಹೊಲೆಯರಲ್ಲಿರುವ ಮತ್ತು ಅವರನ್ನು ಅವಲಂಬಿಸಿರುವ ಜಾತಿಗಳನ್ನು ಸ್ಥೂಲವಾಗಿ ವಿಂಗಡಿಸಲಾಗಿದೆ.) (ಹೊಲೆಯರ ಒಂದು ಅಧ್ಯಯನ ಶ್ರೀ ಸಾ.ರಾ.ಶಿಂಗೆ., ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ೧೯೯೧)

## ಅಂಕಿಅಂಶಗಳು: ೧. ಚೆನ್ನದಾಸರ, ಹೊಲೆಯದಾಸರ (೨೦೦೧)

| ಸಂ. | ತಾಲ್ಲೂಕು | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧ | ಬಾಗಲಕೋಟೆ * | ೬,೭೩೭ | ೩,೩೦೮ | ೩,೪೨೯ |
| ೨ | ಬೆಂಗಳೂರು ಗ್ರಾಮಾಂತರ | ೩೬ | ೧೭ | ೧೯ |
| ೩ | ಬೆಂಗಳೂರು ನಗರ | ೨೪೮ | ೧೨೧ | ೧೨೭ |
| ೪ | ಬಳ್ಳಾರಿ | ೩,೦೩೬ | ೧,೫೭೬ | ೧,೪೬೦ |
| ೫ | ಬೆಳಗಾವಿ | ೧೦,೨೩೨ | ೫,೨೧೮ | ೫,೦೧೪ |
| ೬ | ಬೀದರ | ೪೧ | ೨೧ | ೨೦ |
| ೭ | ಬಿಜಾಪುರ | ೧,೮೧೪ | ೯೦೧ | ೯೧೩ |
| ೮ | ಚಾಮರಾಜನಗರ * | ೫೪ | ೨೫ | ೨೯ |
| ೧೦ | ಚಿತ್ರದುರ್ಗ | ೬೯೦ | ೩೬೫ | ೩೨೫ |
| ೧೧ | ದಕ್ಷಿಣಕನ್ನಡ | ೩೫೧ | ೧೮೩ | ೧೬೮ |
| ೧೨ | ದಾವಣಗೆರೆ * | ೨,೪೯೦ | ೧,೨೫೭ | ೧,೨೩೩ |
| ೧೩ | ಧಾರವಾಡ | ೧,೦೩೪ | ೫೨೯ | ೫೦೫ |
| ೧೪ | ಗದಗ * | ೨,೦೬೧ | ೧,೦೭೫ | ೯೮೬ |
| ೧೫ | ಗುಲ್ಬರ್ಗಾ | ೧,೭೦೩ | ೮೩೯ | ೮೬೪ |
| ೧೬ | ಹಾಸನ | ೬೩ | ೨೯ | ೩೪ |
| ೧೭ | ಹಾವೇರಿ * | ೯೬೧ | ೪೮೮ | ೪೭೩ |
| ೧೮ | ಕೊಡಗು | ೩ | ೨ | ೧ |
| ೧೯ | ಕೋಲಾರ | ೫,೫೪೪ | ೨,೮೦೩ | ೨,೭೪೧ |
| ೨೦ | ಕೊಪ್ಪಳ * | ೪,೧೯೩ | ೨,೧೧೩ | ೨,೦೮೦ |
| ೨೨ | ಮೈಸೂರು | ೧೦ | ೮ | ೨ |
| ೨೩ | ರಾಯಚೂರು | ೨,೦೨೪ | ೧,೦೧೪ | ೧,೦೧೦ |
| ೨೪ | ಶಿವಮೊಗ್ಗ | ೯೮೩ | ೪೮೯ | ೪೯೪ |
| ೨೫ | ತುಮಕೂರು | ೪೫ | ೨೭ | ೧೮ |
| ೨೬ | ಉಡುಪಿ * | ೭೩ | ೩೮ | ೩೫ |
| ೨೭ | ಉತ್ತರ ಕನ್ನಡ | ೧೨೫ | ೭೦ | ೫೫ |
| | ಕರ್ನಾಟಕ ಒಟ್ಟು | ೪೪,೫೫೧ | ೨೨,೫೧೬ | ೨೨,೦೩೫ |

## ಅಂಕಿಅಂಶಗಳು: ೨. ಹೊಲೆಯದಾಸರಿ (೨೦೦೧)

| ಸಂ. | ಜಿಲ್ಲೆ | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧ | ಬಾಗಲಕೋಟ * | ೨೨೧ | ೧೦೩ | ೧೧೮ |
| ೨ | ಬೆಂಗಳೂರು ಗ್ರಾಮಂತರ | ೨೯ | ೧೮ | ೧೧ |
| ೩ | ಬಳ್ಳಾರಿ | ೧೭ | ೯ | ೮ |
| ೪ | ಬೆಳಗಾವಿ | ೩೧ | ೧೮ | ೧೩ |
| ೫ | ಬೀದರ | ೮೨ | ೪೦ | ೪೨ |
| ೬ | ಬಿಜಾಪೂರ | ೨ | ೧ | ೧ |
| ೭ | ದಕ್ಷಿಣಕನ್ನಡ | ೧೦ | ೫ | ೫ |
| ೮ | ಧಾರವಾಡ | ೮ | ೨ | ೬ |
| ೧೦ | ಗದಗ * | ೫ | ೪ | ೧ |
| ೧೧ | ಗುಲ್ಬರ್ಗಾ | ೪೮೨ | ೨೩೩ | ೨೪೯ |
| ೧೨ | ಹಾವೇರಿ * | ೯ | ೪ | ೫ |
| ೧೩ | ಕೊಡಗು | ೮ | ೫ | ೩ |
| ೧೪ | ಕೋಲಾರ | ೨ | – | ೨ |
| ೧೫ | ಕೊಪ್ಪಳ * | ೩೮ | ೨೨ | ೧೬ |
| ೧೬ | ರಾಯಚೂರು | ೧೨೨ | ೬೦ | ೬೨ |
| ೧೭ | ಶಿವಮೊಗ್ಗ | ೩ | ೨ | ೧ |
| ೧೮ | ತುಮಕೂರು | ೨ | ೧ | ೧ |
| ೧೯ | ಉತ್ತರ ಕನ್ನಡ | ೬ | ೨ | ೪ |
|  | ಕರ್ನಾಟಕ ಒಟ್ಟು | ೧,೦೭೭ | ೫೨೯ | ೫೪೮ |

## ಅಂಕಿಅಂಶಗಳು: ೩. ಮಾಲದಾಸರಿ (೨೦೦೧)

| ಸಂ. | ಜಿಲ್ಲೆ | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧ | ಬೆಂಗಳೂರ ನಗರ | ೬೫ | ೩೩ | ೩೨ |
| ೨ | ಬಳ್ಳಾರಿ | ೫೪೩ | ೨೮೫ | ೨೫೮ |
| ೩ | ಬೆಳಗಾವಿ | ೧೧ | ೫ | ೬ |
| ೪ | ಬಿಜಾಪೂರ | ೫ | ೩ | ೨ |
| ೫ | ದಕ್ಷಿಣಕನ್ನಡ | ೨ | ೨ | ೦ |
| ೬ | ದಾವಣಗೇರೆ * | ೧ | ೧ | ೦ |
| ೭ | ಧಾರವಾಡ | ೮ | ೪ | ೪ |
| ೮ | ಗದಗ * | ೫ | ೩ | ೨ |
| ೧೦ | ಗುಲ್ಬರ್ಗಾ | ೩೯೨ | ೧೯೦ | ೨೦೨ |
| ೧೧ | ಕೊಡಗು | ೪ | ೧ | ೩ |
| ೧೨ | ಕೋಲಾರ | ೧೯ | ೧೨ | ೭ |
| ೧೩ | ಕೊಪ್ಪಳ * | ೩೩೨ | ೧೬೪ | ೧೬೮ |
| ೧೪ | ಮೈಸೂರು | ೫ | ೩ | ೨ |
| ೧೫ | ರಾಯಚೂರು | ೨,೫೨೨ | ೧,೨೫೬ | ೧,೨೬೬ |
| ೧೬ | ತುಮಕೂರು | ೭ | ೫ | ೨ |
| | ಕರ್ನಾಟಕ ಒಟ್ಟು | ೩,೯೨೧ | ೧,೯೬೭ | ೧,೯೫೪ |

## ಅಂಕಿಅಂಶಗಳು: ೪. ಚೆನ್ನ ದಾಸರ, ಹೊಲೆಯ, ದಾಸರ್

| ಸಮೀಕ್ಷೆ ವರ್ಷ | ಒಟ್ಟು ಗ್ರಾಮ್ಮಿ ಣ ನಗರ | ಕರ್ನಾಟಕ ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧೯೬೧ | ಒಟ್ಟು | ೨೭೨೩ | ೧೩೫೮ | ೧೩೬೫ |
| | ಗ್ರಾಮೀಣ | ೨೬೩೨ | ೧೨೯೯ | ೧೩೩೩ |
| | ನಗರ | ೯೧ | ೫೯ | ೩೨ |
| ೧೯೭೧ | ಒಟ್ಟು | ೭೭೬೦ | ೪೦೯೩ | ೩೬೬೭ |
| | ಗ್ರಾಮೀಣ | ೬೪೯೩ | ೩೪೦೮ | ೩೦೮೫ |
| | ನಗರ | ೧೨೬೭ | ೬೮೫ | ೫೮೨ |
| ೧೯೮೧ | ಒಟ್ಟು | ೧೭೭೩೨ | ೮೮೫೫ | ೮೮೭೭ |
| | ಗ್ರಾಮೀಣ | ೧೪೪೮೨ | ೭೧೭೦ | ೭೩೧೨ |
| | ನಗರ | ೩೨೫೦ | ೧೬೮೫ | ೧೫೬೫ |
| ೧೯೯೧ | ಒಟ್ಟು | ೨೯೭೮೧ | ೧೫೧೫೮ | ೧೪೬೨೩ |
| | ಗ್ರಾಮೀಣ | ೨೫೭೮೫ | ೧೩೦೫೭ | ೧೨೭೨೮ |
| | ನಗರ | ೩೯೯೬ | ೨೧೦೧ | ೧೮೯೫ |
| ೨೦೦೧ | ಒಟ್ಟು | ೪೪೫೫೧ | ೨೨೫೧೬ | ೨೨೦೩೫ |
| | ಗ್ರಾಮೀಣ | ೩೬೯೪೯ | ೧೮೬೬೬ | ೧೮೨೮೩ |
| | ನಗರ | ೭೬೦೨ | ೩೮೫೦ | ೩೭೫೨ |

